# ಕನ್ನಡ ಪ್ರಾಚೀನ ಚಿತ್ರಕಲೆ ಮತ್ತು "ಪಿಥೋರಾ"

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ಶಶಿಧರ ಕುಬಸದ

ಮಾರ್ಗದರ್ಶಕರು

ಡಾ. ಹೆಬ್ಬಾಲೆ ಕೆ. ನಾಗೇಶ್

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬



ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೭

# ಕನ್ನಡ ಪ್ರಾಚೀನ ಚಿತ್ರಕಲೆ ಮತ್ತು "ಪಿಥೋರಾ"

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧದ ಪ್ರತಿ)

ಸಂಶೋಧಕರು
**ಶಶಿಧರ ಕುಬಸದ**

ಮಾರ್ಗದರ್ಶಕರು
**ಡಾ. ಹೆಬ್ಬಾಲೆ ಕೆ. ನಾಗೇಶ್**
ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩೨೭೬
೨೦೧೭



## ಮಾರ್ಗದರ್ಶಕರ ದೃಢೀಕರಣ ಪ್ರಮಾಣಪತ್ರ

**'ಕನ್ನಡ ಪ್ರಾಚೀನ ಚಿತ್ರಕಲೆ ಮತ್ತು ಪಿಥೋರಾ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಶಶಿಧರ ಕುಬಸದ** ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

14/11/17

**(ಡಾ. ಹೆಬ್ಬಾಲೆ ಕೆ. ನಾಗೇಶ್)**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ:
ಸ್ಥಳ: ವಿದ್ಯಾರಣ್ಯ

## ಸಂಶೋಧಕರ ಪ್ರಮಾಣಪತ್ರ

**'ಕನ್ನಡ ಪ್ರಾಚೀನ ಚಿತ್ರಕಲೆ ಮತ್ತು ಪಿಥೋರಾ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಹೆಬ್ಬಾಲೆ ಕೆ. ನಾಗೇಶ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**(ಶಶಿಧರ ಕುಬಸದ)**
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ:
ಸ್ಥಳ: ವಿದ್ಯಾರಣ್ಯ

**ಪರಿವಿಡಿ**

**ಅಧ್ಯಾಯ ಒಂದು**

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ವಿಧಾನ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ಮಹತ್ವ

೧.೪ ಅಧ್ಯಯನದ ವ್ಯಾಪ್ತಿ

೧.೫ ಅಧ್ಯಯನದ ವಿಧಾನ

# ಅಧ್ಯಾಯ ೧

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನ

## ೧.೧ ಪ್ರಸ್ತಾವನೆ

ಮಾನವನಿಗೆ ಕಲೆಯೆಂಬುದು ಸೌಂದರ್ಯಾನುಭವದ ಪ್ರತಿಬಿಂಬ ಮತ್ತು ಗತಿಬಿಂಬವಾಗಿದೆ. ಅವನು ಪ್ರಾಚೀನ ಕಾಲದಿಂದಲೂ ಸೌಂದರ್ಯಪ್ರಜ್ಞೆಯನ್ನು ರೂಢಿಸಿಕೊಂಡು ಬಂದನು. ಅವನು ತನ್ನ ಅರಿವಿಗೆ ಬಂದ ಸುತ್ತಲಿನ ಪ್ರಕೃತಿಯನ್ನು ಕಣ್ಣಸೆರೆಯಲ್ಲಿ ಹಿಡಿದು ಆನಂದಿಸ ತೊಡಗಿದನು. ನಿಸರ್ಗದಲ್ಲಿ ಸಹಜವಾಗಿಯೇ ಕಂಡುಬಂದಂತಹ ವಸ್ತುಗಳನ್ನು ಬಳಸಿಕೊಂಡು ಮೊದಲು ತನ್ನ ಅಪೇಕ್ಷೆಗಳನ್ನು ಪೂರೈಸಿಕೊಳ್ಳಲು ಶುರುಮಾಡಿದನು. ಅಂತಹ ಅಪೇಕ್ಷೆಗಳೆ ಸೌಂದರ್ಯ ಮತ್ತು ಆನಂದ. ಇವುಗಳ ಪೂರೈಕೆಗಾಗಿ ಅವನು ಪ್ರಾಚೀನತೆಯಿಂದಲೂ ಅಭಿವ್ಯಕ್ತಿ ಮಾಧ್ಯಮಕ್ಕಾಗಿ ಹುಡುಕಾಡಿದ. ಈ ಅಭಿವ್ಯಕ್ತಿ ಮಾಧ್ಯಮ ಆಧುನಿಕ ಕಾಲದಷ್ಟು ನಯನಾಜೂಕಾಗಿ ಕಂಡುಬರುವುದಿಲ್ಲ. ಆದರೂ ಕೆಲವು ಕಲೆಗಳನ್ನು ಗಮನಿಸಿದಾಗ ಕಲೆ ಪ್ರಾಚೀನಕಾಲದಿಂದಲೂ ಇದ್ದುದೇ ಆಗಿದೆ. ಅಂತಹ ಕಲೆಗಳಲ್ಲಿ ನಾಟ್ಯ, ಸಂಗೀತ, ಚಿತ್ರಕಲೆ, ಶಿಲ್ಪಕಲೆ ಮುಂತಾದವು ಪ್ರಮುಖವಾಗಿವೆ. ಈ ಕಲೆಗಳು ಕಾಲದಿಂದ ಕಾಲಕ್ಕೆ ಅನೇಕ ಸ್ಥಿತ್ಯಂತರ, ಪಲ್ಲಟಗಳನ್ನು ಕಂಡಿವೆ. ಈ ರೀತಿ ಬೆಳೆಯಲು ಮಾನವನ ಸೌಂದರ್ಯ ಪ್ರಜ್ಞೆ ಮತ್ತು ಆನಂದವೇ ಕಾರಣವಾಗಿರಬಹುದು. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಚಿತ್ರಕಲೆಯು ಪ್ರಾಚೀನ ಕಾಲದಿಂದಲೂ ಉಳಿದ ಕಲೆಗಳ ಇರುವಿಕೆಯನ್ನು ಚಿತ್ರಗಳಲ್ಲಿ ಪ್ರಸ್ತಾಪಿಸುತ್ತಾ ಬಂದಿರುವ ಪ್ರಮುಖ ಮಾಧ್ಯಮವಾಗಿದೆ.

ಆದಿಮಾನವನ ಪ್ರಾಚೀನ ಚಿತ್ರಕಲೆಯ ಭಾಗವಾಗಿ ಮೊದಲಿಗೆ ಗವಿಚಿತ್ರಗಳಲ್ಲಿ ಕೆಲವು ಕಲೆಗಳನ್ನು ಸೂಕ್ಷ್ಮವಾಗಿ ಗಮನಿಸಬಹುದು. ಅವನು ಮೊದಲು ಚಿತ್ರಕಲೆಯನ್ನು ಗುಹೆಗಳ

ಒಳಗಿನ ಗೋಡೆಗಳ ಮೇಲೆ ಚಿತ್ರಿಸಲು ಶುರುಮಾಡಿದನು. ಆ ಚಿತ್ರಗಳಲ್ಲಿ ರೇಖಾಚಿತ್ರ ಮತ್ತು ವರ್ಣಚಿತ್ರಗಳು ಇವೆ. ಈ ರೀತಿಯಾಗಿ ಚಿತ್ರಿಸಲು ಬಂಡೆ ಅಥವಾ ಶಿಲೆಗಳನ್ನು ಕ್ಯಾನ್ವಾಸಾಗಿ ಬಳಸುತ್ತಿದ್ದು ಅವನ ಬೌದ್ಧಿಕತೆಗೆ ಹಿಡಿದ ಕೈಗನ್ನಡಿಯಾಗಿದೆ. ಆ ಬಂಡೆಗಳ ಚಿತ್ರಗಳಲ್ಲಿ ಪ್ರಾಣಿಗಳನ್ನು ಪಳಗಿಸುವ ಕಲೆ, ಅವನು ಬರೆದ ಚಿತ್ರಶೈಲಿ. ಹಸೆಯಂತಹ ರಂಗೋಲಿ ಸ್ವರೂಪದ ಚಿತ್ರಗಳು ಕಾಣುತ್ತವೆ. ಹೀಗಾಗಿಯೇ ಪ್ರಾದೇಶಿಕ ಭಿನ್ನತೆಗಳು ಬದಲಾದಂತೆ ಚಿತ್ರಗಳು ಬದಲಾಗುತ್ತವೆ. ಬೇರೆ ಬೇರೆ ಪ್ರದೇಶದಲ್ಲಿ ದೊರೆತಿರುವ ಚಿತ್ರಗಳನ್ನು ಗಮನಿಸಿದಾಗ ಅನೇಕ ಚಿತ್ರಗಳು ವಿಭಿನ್ನವಾದ ರೂಪಗಳಲ್ಲಿ ಅಭಿವ್ಯಕ್ತಗೊಂಡಿವೆ. ಈ ವಿಭಿನ್ನತೆಗೆ ಕಾರಣ ವೈಯಕ್ತಿಕ ಭಿನ್ನತೆಯು ಆಗಿರಬಹುದು. ಏಕೆಂದರೆ ಈ ಚಿತ್ರಗಳಲ್ಲಿ ಅವರು ತಮ್ಮ ಬದುಕನ್ನು ಕುರಿತು ವಿಭಿನ್ನವಾಗಿ ಆಲೋಚನೆ ಮಾಡಲು ಆರಂಭಿಸಿರಬಹುದು.

ಈ ಹಿನ್ನೆಲೆಯಲ್ಲಿಯೇ ಭಾರತದಲ್ಲಿ ಅತ್ಯಂತ ಪ್ರಾಚೀನವಾದ ಚಿತ್ರಕಲೆಯ ತಾಣಗಳು ದೊರಕಿವೆ. ಅವುಗಳಲ್ಲಿ ಪ್ರಮುಖವಾದ ಪ್ರದೇಶಗಳೆಂದರೆ ಕೈಮೂರ್ ಮತ್ತು ವಿಂಧ್ಯ ಪರ್ವತದ ಗುಹೆಗಳು, ಮಧ್ಯಪ್ರದೇಶದ ಭೀಮ್‌ಬೆಟ್ಕ, ರಾಯಘಡ, ಮಿರ್ಜಾಪುರ, ಕರ್ನಾಟಕದ ಕೊಪ್ಪಳ, ರಾಯಚೂರು, ಸಿಂದಗಿ, ಬಳ್ಳಾರಿ, ಆನೆಗೊಂದಿ, ಬಾದಾಮಿ ಮುಂತಾದವು ಕಂಡುಬರುತ್ತವೆ. ಇಲ್ಲಿನ ಬಹುತೇಕ ಚಿತ್ರಗಳು ಆದಿಮಾನವನಿಂದ ನಿರ್ಮಿತವಾದ ಕೃತಿಗಳಾಗಿವೆ. ಇಂತಹ ನಾಗರಿಕತೆಯ ಚರಿತ್ರೆಯನ್ನು ಅವಲೋಕಿಸಿದಾಗ ಒಂದು ನಿಶ್ಚಿತ ಕಾಲಾವಧಿಯಲ್ಲಿಯೇ ಕಲೆಗಳು ಆರಂಭವಾಗಿರಬಹುದು ಎಂದು ಅನ್ನಿಸುತ್ತದೆ. ಮಾನವನ ಪುರಾತನವಾದ ಕಲೆಯೇ ಅವನ ಆರಂಭದ ಮೂಲ ಚಿತ್ರಗಳಾಗಿವೆ. ಆದಿವಾಸಿಯಾಗಿ ಮಾನವನು ಆಹಾರಕ್ಕಾಗಿ ಹುಡುಕಾಡುವ ಸಂದರ್ಭದಲ್ಲಿಯೇ ಚಿತ್ರಕಲೆಯನ್ನು ರೂಢಿಸಿಕೊಂಡನು. ಆಹಾರಕ್ಕಾಗಿ ಜಗತ್ತಿನ ಬೇರೆ ಬೇರೆ ಪ್ರದೇಶದಲ್ಲಿ ಬೇಟೆಯನ್ನೆ ನಂಬಿಕೊಂಡನು, ನಂತರದಲ್ಲಿ ವ್ಯವಸಾಯಕ್ಕೆ ನಿಂತನು. ಈ ರೀತಿಯಾಗಿಯೇ ಸಮಗ್ರವಾಗಿ ಅವಲೋಕಿಸಿದಾಗ ಹವ್ಯಾಸವಾಗಿ, ನಂಬಿಕೆಯಾಗಿ ಚಿತ್ರಕಲೆಯನ್ನು ರೂಢಿಗೆ ತಂದಿರಬಹುದು. ಪ್ರಾದೇಶಿಕವಾಗಿ ಕೆಲವು ಭಿನ್ನತೆಗಳು ಇದ್ದರೂ ಸಮೀಕರಣವನ್ನು ಕೆಲವಾದರೂ ಚಿತ್ರಗಳಲ್ಲಿ ಕಾಣಬಹುದು.

ಮಾನವನು ಚಿತ್ರಕಲೆಯನ್ನು ಏಕೆ ರೂಢಿಸಿಕೊಂಡಿರಬಹುದು ಎಂಬ ಪ್ರಶ್ನೆಗೆ ಸರಳವಾದ ಉತ್ತರವಿಲ್ಲ. ದೈವ ಶಕ್ತಿ, ಆನಂದ, ಸೌಂದರ್ಯ, ಹವ್ಯಾಸ, ಕಲೆ, ವಿರಾಮದಲ್ಲಿನ ಸಮಯದ ಉಪಯೋಗ ಹೀಗೆ ಯಾವುದಾದರೂ ಕಾರಣದಿಂದ ಅವನು ಚಿತ್ರಕಲೆಯನ್ನು ಶುರುಮಾಡಿರಬಹುದು. ನಿರ್ದಿಷ್ಟವಾಗಿ ಇದೇ ಕಾರಣಕ್ಕೆ ಎಂದು ಖಚಿತವಾಗಿ ನಿರ್ಧರಿಸಿ ಹೇಳಲು ಸಾಧ್ಯವಿಲ್ಲ. ಚಿತ್ರಕಲೆಯೆಂಬುದು ಪ್ರಾದೇಶಿಕವಾಗಿ ವಿಭಿನ್ನ ವಿನ್ಯಾಸಗಳಲ್ಲಿ ರಚನೆಯಾಗಿದೆ. ಅಂತಹ ವಿಭಿನ್ನತೆಗಳಲ್ಲಿ ಕನ್ನಡ ನಾಡಿನ ಉತ್ತರ ಕರ್ನಾಟಕ ಭಾಗದಲ್ಲಿ ಬೆಳದಿಂಗಳ ಹಬ್ಬದ

ಚಿತ್ರಕಲೆಯು ಮಹತ್ವದ್ದಾಗಿದೆ. ಇದು ಸಾಂಪ್ರದಾಯಿಕ ನಂಬಿಕೆಯಿಂದ ಆಚರಣೆಗೊಳ್ಳುವ ಕಲೆಯಾಗಿದೆ. ಚಿತ್ರಕಲೆಯು ಕೆಲವು ಕಡೆ ಆಚರಣೆಯ ಭಾಗವಾಗಿ ಮೂಡಿಬಂದಿದೆ. ಚಿತ್ರಗಳ ಮೂಲಕ ಕೆಲವು ನಂಬಿಕೆಗಳು ಪೂರೈಕೆಗೊಳ್ಳುತ್ತವೆಂಬ ನಂಬಿಕೆಯಿಂದಲೂ ಚಿತ್ರಗಳನ್ನು ಬಿಡಿಸುವ ಪದ್ಧತಿಯು ಪುರಾತನ ಕಾಲದಿಂದಲೂ ಚಾಲ್ತಿಯಲ್ಲಿದೆ. ಗೋಡೆಯ ಮೇಲೆ ಬರೆದು ಪೂಜಿಸುವ ಅಥವಾ ನೆಲದಲ್ಲಿ ಬರೆದು ಪೂಜಿಸುವ ವಿಧಾನವು ಆ ಭಾಗದಲ್ಲಿ ಹೆಚ್ಚು ಪ್ರಚಲಿತವಾಗಿದೆ. ಈ ಆಚರಣೆಯನ್ನು ನಾಗರಿಕ ಸಮಾಜವೊಂದು ಸಂಪ್ರದಾಯಬದ್ಧವಾಗಿ ನಡೆಸಿಕೊಂಡು ಬರುತ್ತಿದೆ. ಆದಿಮಾನವನಿಂದ ರೂಪುತಳೆದ ಚಿತ್ರಕಲೆಯ ನಂಟು ಆಧುನಿಕ ಸಮಾಜದಲ್ಲಿ ಸಾಂಸ್ಕೃತಿಕ ರೂಪ ಪಡೆಯುತ್ತಿರುವುದು ಗಮನಿಸಬೇಕಾದದ್ದಾಗಿದೆ.

ಪ್ರಪಂಚದ ಇತರೆ ಭಾಗಗಳಂತೆ ಕರ್ನಾಟಕದಲ್ಲಿಯೂ ಪ್ರಾಚೀನ ಮಾನವನಿಂದ ಪ್ರಾಚೀನ ಚಿತ್ರಕಲಾಕೃತಿಗಳು ಗವಿಗಳಲ್ಲಿ ಮತ್ತು ಶಿಲಾಶ್ರಯಗಳಲ್ಲಿ ರಚನೆಯಾದವು. ಈ ಮಾನವನು ಪಕ್ಷಿ ಮತ್ತು ಪ್ರಾಣಿಸಮುದಾಯಗಳ ಚಿತ್ರಗಳನ್ನು ಈ ಶಿಲೆಗಳ ಮೇಲೆ ಬಿಡಿಸಿದ್ದಾನೆ. ಇವುಗಳು ಆಧುನಿಕ ಚಿತ್ರಕಲೆಯಷ್ಟು ವಿಭಿನ್ನವಾದ ನಾಜೂಕಿನ ಶೈಲಿಯನ್ನು ಹೊಂದಿರದಿದ್ದರೂ ಆ ಕಾಲದಲ್ಲಿನ ಕುಶಲತೆಯನ್ನು ಒಪ್ಪಿಕೊಳ್ಳಬಹುದು. ಈ ಕಲೆಯು ಮುಂದಿನ ಚಿತ್ರಕಲಾ ಪರಂಪರೆಗೆ ಹಾದಿಯನ್ನು ಹಾಕಿಕೊಟ್ಟಿರಬಹುದು. ಈಗಲೂ ಕೆಲವು ಹಸೆ ಚಿತ್ರಗಳು ಪ್ರಾಚೀನ ಚಿತ್ರಗಳನ್ನು ಬಿಟ್ಟುಕೊಟ್ಟಿಲ್ಲದಿರುವುದನ್ನು ಗಮನಿಸಬಹುದು. ಪ್ರಾಚೀನ ಚಿತ್ರಕಲೆಯಲ್ಲಿ ಗವಿಚಿತ್ರಗಳು, ಸಾಂಪ್ರದಾಯಿಕ ಚಿತ್ರಗಳು, ಜಾನಪದ ಚಿತ್ರಗಳು ಪ್ರಮುಖವಾಗಿವೆ. ಇವೆಲ್ಲವೂ ಒಂದು ಸಾಂಸ್ಕೃತಿಕ ಜರೂರತ್ತಾಗಿಯೂ ರಚನೆಯಾಗಿರಬಹುದು. ಇಲ್ಲವೆ ಬಿಡುವಿನ ಸಮಯವನ್ನು ವ್ಯರ್ಥವಾಗಿ ಕಳೆಯಲು ಮನಸ್ಸಿಲ್ಲದೇ ಅದನ್ನು ಒಂದು ಕಲೆಯಾಗಿ ರೂಪಿಸಿಕೊಂಡಿರಬಹುದು. ಹೀಗೆ ಚಿತ್ರಕಲೆಯು ಬೆಳೆದು ಬಂದಿರಲು ಸಾಧ್ಯವಿದೆ. ಈ ಸಾಧ್ಯತೆಯನ್ನು ಪಿಥೋರಾ ಮತ್ತು ಕನ್ನಡ ಪ್ರಾಚೀನ ಚಿತ್ರಕಲೆಗಳು ಯಾವ ನೆಲೆಯಲ್ಲಿ ಅಭಿವ್ಯಕ್ತಗೊಂಡಿವೆ ಎಂಬುದು ಕುತೂಹಲಕಾರಿಯಾಗಿದೆ.

ಮಾನವನು ತಾನು ವಾಸಿಸುವ ತಾತ್ಕಾಲಿಕ ಆಶ್ರಯ ತಾಣಗಳಾಗಿದ್ದ ಗುಹೆಗಳ, ಶಿಲಾಶ್ರಯಗಳ ಗೋಡೆಗಳಲ್ಲಿ ಗೀಚತೊಡಗಿದ್ದು ನಿರ್ದಿಷ್ಟವಾಗಿ ಇದೇ ಕಾರಣಕ್ಕೆ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಅವನು ತನ್ನ ಸಂತೋಷ ಮತ್ತು ಭಾವೋದ್ವೇಗವನ್ನು ವ್ಯಕ್ತಪಡಿಸುವ ಮಾಧ್ಯಮವಾಗಿ ಸಹ ಈ ಕಲೆಯನ್ನು ಸೃಷ್ಟಿಸುವ ಕೆಲಸ ಮಾಡಿರಬಹುದು. ಅಥವಾ ಭಾಷೆ ಎನ್ನುವ ಮಾಧ್ಯಮ ಇಲ್ಲದೇ ಇರುವ ಕಾರಣಕ್ಕೆ ತನ್ನ ಸಂಗಾತಿಗಳಿಗೆ ನಡೆದ ಸಂಗತಿಗಳನ್ನು ವಿವರಿಸಲು ಇಂತಹ ಚಿತ್ರಗಳು ರಚನೆಯಾಗಿರಬಹುದು. ಅದೇ ಮುಂದೆ ಸಾಂಸ್ಕೃತಿಕ ಆಚರಣೆಯಾಗಿ, ಹವ್ಯಾಸವಾಗಿ ಮುಂದೆ ಅದೇ ಪ್ರವೃತ್ತಿಯಾಗಿರುವುದು ಕಂಡುಬರುತ್ತದೆ.

ಕಲಾ ಇತಿಹಾಸಕಾರರು ಮತ್ತು ಕಲಾ ವಿಮರ್ಶಕರಾದ ಎಂ.ಎಚ್.ಕೃಷ್ಣಯ್ಯ ಅವರು ಪ್ರಾಚೀನ ಕಲೆಯ ಉಗಮ ಮತ್ತು ಇತಿಹಾಸವನ್ನು ಕುರಿತು ಹೀಗೆ ಹೇಳುತ್ತಾರೆ: "ಪ್ರಾದಿಮ ಮಾನವನ ಕಲೆಯನ್ನು ಮಾಂತ್ರಿಕ ಕಲೆ ಎನ್ನಲಾಗಿದೆ. ಆಹಾರಕ್ಕಾಗಿ ಬೇಟೆ, ಪ್ರಾಣಿಗಳನ್ನು ಕೊಲ್ಲುವ ಬಗೆ, ಬೇಟೆಯಾಡುವಾಗಿನ ಸಾವು ನೋವಿನ ಭೀತಿ, ಹುಟ್ಟು-ಸಾವಿನ ಭಯ, ನಿಸರ್ಗದ ಘಟನೆಗಳು ಎಲ್ಲ ನಿಗೂಢ. ಅವುಗಳ ಮೇಲೆ ನಿಯಂತ್ರಣ ಸಾಧಿಸುವ ಉದ್ದೇಶದಿಂದ, ಪ್ರಾಣಿಗಳನ್ನು ಕೊಂದಂತೆ ಚಿತ್ರಿಸಿ ಅನಂತರ ಬೇಟೆಯಾಡಿದರೆ ಇಚ್ಛೆ ಪೂರೈಸಬಹುದೆಂಬ ನಂಬಿಕೆ-ಮಾಂತ್ರಿಕ ಕಲೆಯ ಮೂಲ ಪ್ರೇರಣೆ (ಇದೇ ಮುಂದೆ ಮಾಟ, ಮಂತ್ರ, ಎಲ್ಲ ಬಗೆಯ ವಿಧಿಯಾಚರಣೆ, ಮತ-ಧರ್ಮ ನಂಬಿಕೆಗಳಾಗಿ ಪರಿಣಮಿಸಿತು) ಆದರೆ ಇದಿಷ್ಟೇ ಅಲ್ಲ, ಆತನಲ್ಲಿದ್ದ ಸುಪ್ತಕಲಾ ಸಂವೇದನೆ, ಸೌಂದರ್ಯಪ್ರಜ್ಞೆಯೂ ಅಲ್ಲಿ ವ್ಯಕ್ತವಾಗಿದೆ. ಆಗಲೇ ಅವನಲ್ಲಿ ತಾಂತ್ರಿಕ ಜಾಣ್ಮೆಯು ಕಂಡುಬರುತ್ತದೆ. ಗುಹೆಯ ಬಂಡೆ, ಭಿತ್ತಿ, ಚಾವಣಿ, ಬಂಡೆಯಾಸರೆಗಳ ಆಯ್ಕೆ ಮಣ್ಣು-ಸಸ್ಯಗಳಿಂದ ಬಣ್ಣ ತಯಾರಿಕೆ, ಕಡ್ಡಿ, ಮೂಳೆ, ಕಲ್ಲಿನ ಉಪಕರಣ ಬಳಕೆ, ಸಮರೂಪ ಸಮತೋಲನಗಳ ಕೆತ್ತನೆ, ರೇಖೆಗಳ ಪ್ರಮಾಣ, ಆಕೃತಿ ಆಕಾರಗಳ ಲಯ, ವಿನ್ಯಾಸ ಮುಂತಾದವು ತಂತ್ರ ಕೌಶಲ ಮತ್ತು ಸಂವೇದನೆಗಳ ಅಭಿವ್ಯಕ್ತಿಯನ್ನು ಉತ್ತಮ ಮಟ್ಟದಲ್ಲಿಯೇ ತೋರುತ್ತವೆ" ಎಂದು ವಿಶ್ಲೇಷಿಸುತ್ತಾರೆ. ಆದಿಮಾನವನ ಚಿತ್ರಕಲೆಯಲ್ಲಿ ನಿಪುಣನಾಗಿರುವ ಬಗ್ಗೆ ಇಲ್ಲಿ ಅಭಿವ್ಯಕ್ತಿಸುತ್ತಾರೆ. ಅವನು ತನಗೆ ನೈಸರ್ಗಿಕವಾಗಿ ಸಿಗುವ ಸಂಪನ್ಮೂಲಗಳನ್ನು ಬಳಸಿಕೊಂಡನು, ಅಲ್ಲದೆ ನಿಸರ್ಗ ಶಕ್ತಿಯನ್ನು ಅಡಗಿಸಿ ದೈವಶಕ್ತಿಯ ಕಡೆ ತನ್ನನ್ನು ಕೇಂದ್ರ ಮಾಡಿಕೊಳ್ಳಲು ಈ ಚಿತ್ರಕಲೆಯ ಮಾಧ್ಯಮವನ್ನು ಅನುಸರಿಸಿದನು.

ಹೀಗಾಗಿಯೇ ಕರ್ನಾಟಕದಲ್ಲಿನ ಕೆಲವು ಬುಡಕಟ್ಟುಗಳು ಗೋಡೆಯ ಮೇಲೆ ಚಿತ್ರಗಳನ್ನು ಬರೆಯುತ್ತಾರೆ. ಅವರ ಈ ಚಿತ್ರಗಳಿಗೆ ಸಾಂಸ್ಕೃತಿಕ ರೂಪವಿದೆ. ಆದರೆ ಅವರ ಚಿತ್ರಗಳಿಗೆ ಧಾರ್ಮಿಕ ವಿಧಿಬದ್ಧವಾದ ರೂಪವಿಲ್ಲ. ಸೋಲಿಗರು ತಮ್ಮ ವಾಸದ ಮನೆಯ ಗೋಡೆಗಳ ಮೇಲೆ ಹುಲಿ, ಹಾವು, ಆನೆ, ನವಿಲು, ದೇವಾಲಯದಲ್ಲಿನ ಬಿರುದುಗಳ ಚಿತ್ರಗಳನ್ನು ಬಿಡಿಸುತ್ತಾರೆ. ಕುರುಬರು ಮತ್ತು ಯರವರು, ಗೋಡೆಗಳ ಮೇಲೆ ಕೆಲವು ಗೀರು ಚಿತ್ರಗಳನ್ನು ಬರೆಯುತ್ತಾರೆ. ಪಣಿಯರು ಮದುವೆಯ ಸಂದರ್ಭದಲ್ಲಿ ಗೋಡೆಯ ಮೇಲೆ ಚಿತ್ರವನ್ನು ಬರೆದು ಸಂಭ್ರಮಿಸುತ್ತಾರೆ. ಹಸಲರು ಗೋಡೆಯ ಮೇಲೆ ಹಸೆಯ ಚಿತ್ರ, ಕೊಟ್ಟಿಗೆ ಗೋಡೆಯ ಮೇಲೆ ಗೋವಿನ ಪಾದದ ಚಿತ್ರಗಳು ಗಮನ ಸೆಳೆಯುತ್ತವೆ. ದೀವರು ಹಸೆಯ ಗೋಡೆಯ ಚಿತ್ರವನ್ನು, ಗೊಂಡರು ಬಲೀಂದ್ರನ ಹಬ್ಬದಲ್ಲಿ ಬಾಗಿಲ ಪಕ್ಕಕ್ಕೆ ಬರೆಯುವ ಗೋಡೆಯ ಚಿತ್ರ, ಕುಣಬಿಯರು ಬಾಗಿಲ ಬದಿಯಲ್ಲಿನ ಚಿತ್ರಗಳು, ಗೌಳಿಗರು ತಮ್ಮ ಮನೆಯ ಒಳಗೋಡೆಯ ಮೇಲೆ ಕೆಲವು ಚಿತ್ರಗಳನ್ನು ಬರೆಯುತ್ತಾರೆ. ಹೀಗೆ ಕೆಲವು ಬುಡಕಟ್ಟುಗಳು

ಸಂಪ್ರದಾಯಬದ್ಧವಾಗಿ ಕೆಲವು ವಿಶೇಷ ಸಂದರ್ಭಗಳಲ್ಲಿ ಗೋಡೆಯ ಮೇಲೆ ಚಿತ್ರಗಳನ್ನು ಬರೆಯುತ್ತಾರೆ. ಗೋಡೆಯ ಮೇಲಿನ ಚಿತ್ರಗಳು ಧಾರ್ಮಿಕವಾದ ಮತ್ತು ಪ್ರಾಕೃತಿಕವಾದ ಎರಡು ಸಂಗತಿಗಳನ್ನು ಇಟ್ಟುಕೊಂಡು ಬರೆಯುವ ಪದ್ಧತಿ ಕರ್ನಾಟಕದ ಬುಡಕಟ್ಟುಗಳಲ್ಲಿ ಕಂಡುಬರುತ್ತದೆ. ಕರ್ನಾಟಕದ ಬುಡಕಟ್ಟುಗಳಿಗಿಂತ ವಿಭಿನ್ನವಾದ ಚಿತ್ರಕಲೆಯನ್ನು ಪಿಥೋರಾ ಆಚರಣೆಯ ಮೂಲಕ ಉತ್ತರಭಾರತದ ಕೆಲವು ರಾಜ್ಯಗಳ ಬುಡಕಟ್ಟು ಜನಸಮುದಾಯ ರೂಢಿಸಿಕೊಂಡು ಬಂದಿದೆ. ಇಂದು ಅದು ಅಂತರಾಷ್ಟ್ರೀಯ ಮಟ್ಟದಲ್ಲಿ ಕೂಡ ಪ್ರಸಿದ್ಧವಾಗಿದೆ.

ಪಿಥೋರಾ ಚಿತ್ರಕಲೆಯು ಮಧ್ಯಪ್ರದೇಶ, ಗುಜರಾತ್, ರಾಜಸ್ಥಾನ್ ಮತ್ತು ಮಹಾರಾಷ್ಟ್ರದ ಕೆಲವು ಭಾಗಗಳಲ್ಲಿ ಧಾರ್ಮಿಕ ವಿಧಿವಿಧಾನದಿಂದ ಬರೆಯಲಾಗುತ್ತದೆ. ಈ ತರಹದ ಒಂದು ಚಿತ್ರಸಂಸ್ಕೃತಿಯನ್ನು ಧಾರ್ಮಿಕ ಸಂಸ್ಕೃತಿಯಾಗಿ ಬೆಳೆಸಿಕೊಂಡವರು ಇಲ್ಲಿನ ಬಿಲ್ ಮತ್ತು ಅದರ ಉಪಬುಡಕಟ್ಟು ಸಮುದಾಯಗಳು. ಬಿಹಾರದಲ್ಲಿ ಮಧುಬನಿ ಚಿತ್ರಕಲೆ, ಒರಿಸ್ಸಾದ ಪಟಚಿತ್ರ, ಮಹಾರಾಷ್ಟ್ರದ ವಾರ್ಲಿ ಚಿತ್ರಕಲೆ ಇವುಗಳನ್ನು ಸಹ ಗೋಡೆಗಳ ಮೇಲೆಯೇ ಬರೆಯಲಾಗುತ್ತದೆ. ಈ ಚಿತ್ರಗಳಿಗೂ ಪಿಥೋರಾಕ್ಕೂ ಸಾಕಷ್ಟು ಭಿನ್ನತೆಗಳಿವೆ. ಸಾಮ್ಯತೆ ಇರುವುದು ಗೋಡೆಯ ಮೇಲೆ ಚಿತ್ರ ಬರೆಯುತ್ತಾರೆಂಬುದು ಮಾತ್ರ.

ಈ ಚಿತ್ರಕಲೆಗಳಲ್ಲಿ ಪ್ರಮುಖವಾಗಿ ಮಧ್ಯಪ್ರದೇಶದ ಪಿಥೋರಾ ಚಿತ್ರಕಲೆಯು ಗಮನಾರ್ಹವಾದುದು. ಅದರಲ್ಲೂ ಕರ್ನಾಟಕದ ಬೆಳದಿಂಗಳ ಚಿತ್ರಕಲೆ ಮತ್ತು ಹಸೆ ಚಿತ್ರಗಳಿಗೆ ತೀರ ಸಮೀಪವಾದುದೇನಲ್ಲ. ಎರಡೂ ಧಾರ್ಮಿಕ ಆಚರಣೆಯ ದೃಷ್ಟಿಯಿಂದ ಕುತೂಹಲಕ್ಕೆ ಹಚ್ಚುತ್ತವೆ. ಈ ಎರಡೂ ಆಚರಣೆಗಳ ಸ್ವರೂಪ ಬೇರೆ ಬೇರೆಯೇ ಆಗಿದೆ. ಈ ಭಿನ್ನತೆಯೇ ಈ ಅಧ್ಯಯನಕ್ಕೆ ಬೇಕಾದ ಸಾಮಗ್ರಿಯನ್ನು ಒದಗಿಸುತ್ತದೆ. ಅಲ್ಲದೆ ಎರಡು ವಿಭಿನ್ನ ಪ್ರದೇಶಗಳ ಜನರು ತಮ್ಮ ತಮ್ಮ ಜಾನಪದ ಚಿತ್ರಕಲೆಯನ್ನು ಹೇಗೆ ವಿಭಿನ್ನವಾಗಿ ಕಟ್ಟಿಕೊಳ್ಳುತ್ತಿದ್ದಾರೆ ಮತ್ತು ಮರುರೂಪಿಸಿಕೊಳ್ಳುತ್ತಿದ್ದಾರೆ ಎಂಬುದು ಸಹಜವಾದ ಸಂಗತಿಯಲ್ಲ. ಈ ಎರಡು ಪ್ರದೇಶಗಳ ಚಿತ್ರಕಲೆಯ ಮಹತ್ವವನ್ನು ಅವಲೋಕಿಸುವ ಮತ್ತು ಆ ಚಿತ್ರಗಳನ್ನು ವಿಶ್ಲೇಷಿಸುವುದು ಮುಖ್ಯವಾಗಿದೆ.

ಬಿಲ್‌ರ ಚಿತ್ರಕಲಾ ಪರಂಪರೆಯು ಅನೇಕ ಪಲ್ಲಟಗಳೊಂದಿಗೆ ಬೆಳವಣಿಗೆಯನ್ನು ಹೊಂದಿದೆ. ಬಿಲ್‌ರ ಜೀವನವನ್ನು ನೋಡಿದಾಗ ಅವರ ಚಿತ್ರಕಲೆಯಲ್ಲಿ ಕೆಲವು ಸ್ಥಿತ್ಯಂತರಗಳು ಮತ್ತು ರೂಪಾಂತರಗಳು ಆಗಿರುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಬಹುದಾದ ಸಾಧ್ಯತೆಯಿದೆ. ಪ್ರಾಚೀನ ಕಾಲದಿಂದಲೂ ಜನಪದರ ವಿಶಿಷ್ಟ ಲಕ್ಷಣವಾಗಿ ಚಿತ್ರಕಲೆಯು ಅನೇಕ ವಿನ್ಯಾಸಗಳಲ್ಲಿ ಮೂಡಿಬಂದಿದೆ. ರಂಗೋಲಿ, ಹಚ್ಚೆ, ಹಸೆ, ಬೆಳದಿಂಗಳ ಹಬ್ಬದ ಚಿತ್ರಗಳು ಮತ್ತು

ಇತರ ಚಿತ್ರಶೈಲಿಗಳು ಇದಕ್ಕೆ ಕೆಲ ಉದಾಹರಣೆಗಳು ಅಷ್ಟೆ. ಬಿಲ್‌ರ ಪಿಥೋರಾ ಚಿತ್ರಕಲೆಯು ಈ ನೆಲೆಯಿಂದ ಆರಂಭಗೊಳ್ಳದಿದ್ದರೂ ಅವರ ಸಾಂಸ್ಕೃತಿಕ ಅನಾವರಣಕ್ಕೆ ಪಿಥೋರಾ ಆಚರಣೆ ವೇದಿಕೆಯಾಗಿದೆ.

ಈ ದೃಷ್ಟಿಯಿಂದಾಗಿ ಭಾರತವು ಸಂಪ್ರದಾಯ ಮತ್ತು ಸಂಸ್ಕೃತಿಯ ದೇಶವಾಗಿರುವುದರಿಂದ ಕಲೆಯನ್ನು ಸಾಂಸ್ಕೃತಿಕ ಭಾಗವಾಗಿಯೇ ಕಂಡುಕೊಂಡಿದೆ. ಈ ಸಾಂಸ್ಕೃತಿಕ ಆಚರಣೆಯ ನೆಲೆಯಲ್ಲಿ ಜಾನಪದ ಚಿತ್ರಕಲೆ ಅಥವಾ ಬುಡಕಟ್ಟು ಚಿತ್ರಕಲೆಗಳು ಅಭಿವ್ಯಕ್ತಗೊಂಡಿವೆ. ಗ್ರಾಮೀಣ ಪ್ರದೇಶದಲ್ಲಿನ ಕೆಲವು ಆಚರಣೆಗಳ ಜತೆಗೆ ಚಿತ್ರಕಲೆಯು ಮಿಲನಗೊಂಡಿದೆ. ಆದರೆ ಕೆಲವು ಬುಡಕಟ್ಟುಗಳಲ್ಲಿ ಹೆಚ್ಚಿನ ಚಿತ್ರಗಳು ಬೇಟೆಯ ದೃಶ್ಯಗಳಾಗಿವೆ. ಭಾರತೀಯ ಮಹಾಪರಂಪರೆಯಲ್ಲಿ ಕಲೆಯು ಬದುಕಿನ ಮತ್ತು ಧರ್ಮದ ನೆಲೆಯಿಂದ ಗುರುತಿಸಿಕೊಳ್ಳುತ್ತಿತ್ತು. ಈ ಹಿನ್ನೆಲೆಯಲ್ಲಿ ಭಾರತೀಯ ಚಿತ್ರಕಲೆಯು ಪುನರುಜ್ಜೀವನಗೊಳ್ಳುವ ಅಗತ್ಯವಿದೆಯೆಂದು ಅನ್ನಿಸುತ್ತದೆ. ಕರ್ನಾಟಕದ ಅನೇಕ ಬುಡಕಟ್ಟುಗಳಲ್ಲಿ ಗೋಡೆಯ ಮೇಲೆ ಚಿತ್ರ ಬರೆಯುವ ಪದ್ಧತಿಯಿದೆ. ಈ ಚಿತ್ರಗಳಿಗೂ ಪಿಥೋರಾ ಚಿತ್ರಗಳಿಗೂ ಸಾಮ್ಯತೆ ಇಲ್ಲ. ಈ ದೃಷ್ಟಿಯಿಂದ ಭಾರತದಲ್ಲಿ ಪಿಥೋರಾ ಕಲೆಗೆ ವಿಭಿನ್ನವಾದ ಆಯಾಮವಿದೆ. ಇದೊಂದು ಬಿಲ್ ಬುಡಕಟ್ಟು ಜನರ ಜೀವನಶೈಲಿಯ ಒಂದು ಭಾಗವನ್ನು ಪ್ರತಿನಿಧಿಸುತ್ತದೆ. ಅಲ್ಲದೆ ಆಧುನಿಕ ಸಂದರ್ಭದಲ್ಲಿ ಇದು ಪುನರುಜ್ಜೀವನಗೊಂಡು ಕೆಲವು ಕಲಾವಿದರಿಂದ ರೂಪಾಂತರಗೊಂಡು ಬೆಳೆಯುತ್ತಿದೆ. ಈ ಪುನರುಜ್ಜೀವನದಿಂದ ಪ್ರಾಚೀನ ಪಿಥೋರಾ ಚಿತ್ರಕಲೆಯು ವಿಭಿನ್ನವಾಗಿ ಬೆಳೆಯುವ ಸಾಧ್ಯತೆಯಿದೆ. ಹೀಗಾಗಿ ಇದನ್ನು ಅಧ್ಯಯನಕ್ಕೆ ಒಳಪಡಿಸಿ ವಿಶ್ಲೇಷಿಸುವ ಮೂಲಕ ಕರ್ನಾಟಕಕ್ಕೆ ಪರಿಚಯಿಸುವ ಅಗತ್ಯವಿದೆ.

ಈ ಹಿನ್ನೆಲೆಯಲ್ಲಿಯೆ ಪ್ರಾಚೀನ ಚಿತ್ರಕಲೆಗಳ ವಿವಿಧ ರೂಪಗಳು ಆಧುನಿಕ ಕಾಲದಲ್ಲಿ ವೈವಿಧ್ಯವಾಗಿ ಪುನರುಜ್ಜೀವನಗೊಂಡು ರಚನೆಯಾಗುತ್ತಿವೆ. ರಂಗೋಲಿ ಚಿತ್ರಕಲೆ, ಶೀಗಿ ಚಿತ್ರಕಲೆ, ಹಸೆ ಚಿತ್ರಕಲೆ, ಕಸೂತಿ ಚಿತ್ರಕಲೆ, ಬೆಳದಿಂಗಳ ಚಿತ್ರಕಲೆ, ಹಚ್ಚೆ ಚಿತ್ರಕಲೆ, ಚಿತ್ತಾರಗೊಂಬೆ ಚಿತ್ರಕಲೆ, ನಾಗಾರಾಧನೆ ಚಿತ್ರಕಲೆ, ಯಕ್ಷಗಾನ ಮತ್ತು ಚಿತ್ರಕಲೆ, ಬಿದರಿ ಚಿತ್ರಕಲೆ, ಮುಂತಾದವು ಕರ್ನಾಟಕದ ದೇಶಿ ಚಿತ್ರಕಲೆಯನ್ನು ಪ್ರಾದೇಶಿಕ ವೈಶಿಷ್ಟ್ಯತೆಯ ನೆಲೆಯಲ್ಲಿ ವ್ಯಕ್ತಗೊಳಿಸುತ್ತವೆ. ಇದೇ ನೆಲೆಯಲ್ಲಿಯೇ ಪಿಥೋರಾ ಕಲೆಯು ಸಹ ಮಧ್ಯಪ್ರದೇಶದಲ್ಲಿ ಹೆಚ್ಚು ಪ್ರಸಿದ್ಧವಾಗಿದೆ. ಇವೆರಡೂ ಪ್ರಾಚೀನ ಚಿತ್ರಕಲೆಗಳೇ ಆಗಿವೆ ಎಂಬುದನ್ನು ಅಧ್ಯಯನದಲ್ಲಿ ವಿಶ್ಲೇಷಿಸುವುದು ಅಗತ್ಯವಿದೆ.

ಹೀಗೆ ಪ್ರಾಚೀನ ಚಿತ್ರಕಲೆಯಾಗಿರಬಹುದು ಅಥವಾ ಪಿಥೋರಾ ಚಿತ್ರಕಲೆಯಾಗಿರಬಹುದು ಜಾನಪದರ ಬದುಕಿನೊಂದಿಗೆ ಅನುಸಂಧಾನಗೊಳ್ಳುತ್ತದೆ. ಪ್ರತಿಯೊಂದು ಚಿತ್ರಕಲೆಯು ತನ್ನದೇ ಆದ ವಿಶಿಷ್ಟ ಲಕ್ಷಣಗಳನ್ನು ಹೊಂದಿರುತ್ತದೆ. ಈ ಲಕ್ಷಣಗಳು ಆಯಾ ಪ್ರಾದೇಶಿಕತೆಯ ವಿಶಿಷ್ಟತೆಗಳನ್ನು ತಮ್ಮ ಕಲೆಯಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಕೆಲವು ಚಿತ್ರಗಳು ಸಾಂಪ್ರದಾಯಿಕವಾಗಿದ್ದರೆ ಕೆಲವು ಚಿತ್ರಗಳು ಆಧುನಿಕತೆಗೆ ಹೊಂದಿಕೊಳ್ಳುತ್ತವೆ. ಅಲ್ಲದೆ ಮೂಲ ಪಿಥೋರಾ ಕಲೆಯು ತಾತ್ವಿಕತೆಯನ್ನು ಬಿಟ್ಟುಕೊಡದೆ ದೈವ ನಂಬಿಕೆಯ ಆಚರಣೆಯ ಕೆಲವು ಚಿತ್ರಗಳು ಉಳಿದುಕೊಂಡಿವೆ. ಈ ಚಿತ್ರಗಳನ್ನು ಕುರಿತು ಇದುವರೆಗೂ ಕನ್ನಡದಲ್ಲಿ ಸಂಶೋಧನೆಗಳು ಆಗಿಲ್ಲ. ಆ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

## ೧.೨ ಅಧ್ಯಯನದ ಉದ್ದೇಶ

ಆಧುನಿಕ ಸಂದರ್ಭದಲ್ಲಿ ಚಿತ್ರಕಲೆಯು ಬಹುಮುಖಿ ವಿನ್ಯಾಸದೊಂದಿಗೆ ಬೆಳೆಯುತ್ತಿದೆ. ಅದು ಸಾಂಸ್ಕೃತಿಕವಾಗಿ ಹಲವು ವಿನ್ಯಾಸಗಳಲ್ಲಿ ತನ್ನ ಹರಹನ್ನು ವಿಕಸಿಸಿಕೊಂಡಿದೆ. ಈಗ ಚಿತ್ರಕಲೆಯಲ್ಲಿ ತೊಡಗಿರುವವರಿಗೆ ಒಂದು ಸಂಪ್ರದಾಯ ಅಥವಾ ಪರಂಪರೆಯು ಸಿದ್ಧವಾಗಿದೆ. ಪೂರ್ವದ ಕಲೆಗಿಂತ ಭಿನ್ನವಾಗಿ ರಚಿಸಬಹುದು ಇಲ್ಲವೇ ಅದರ ಜತೆಗೆ ಅನುಸಂಧಾನ ಮಾಡಿಕೊಳ್ಳಬಹುದು. ಆದರೂ ಚಿತ್ರಕಲೆಯು ಪರಂಪರೆಯ ಜತೆಗಿನ ಅನುಸಂಧಾನಕ್ಕಿಂತ ಭಿನ್ನತೆಗೆ ಹೆಚ್ಚು ಆಸಕ್ತಿಯನ್ನು ಹೊಂದಿರಲು ಸಾಧ್ಯವಿದೆ. ಒಂದು ಚಿತ್ರಕಲಾ ಪರಂಪರೆಯನ್ನು ಕಟ್ಟಿಕೊಳ್ಳಲು ಪ್ರಾಗೈತಿಹಾಸ ಕಾಲದಿಂದಲೂ ಅವಿರತವಾದ ಪ್ರಯತ್ನವಂತೂ ನಡೆಯುತ್ತಿದೆ. ಪ್ರಾಚೀನ ಚಿತ್ರಕಲೆಯ ನೆಲೆ-ಬೆಲೆಯನ್ನು ನಿರ್ಣಯಿಸುವುದು. ಚಿತ್ರಕಲೆಯಲ್ಲಿ ಆಸಕ್ತಿಯನ್ನು ಹುಟ್ಟಿಸಲು ಚಿತ್ರಕಲೆಯ ವಿಶ್ಲೇಷಣೆಯನ್ನು ಮಾಡುವುದು ಅಗತ್ಯವಾಗಿದೆ. ಹೀಗಾಗಿ ಚಿತ್ರಕಲೆಯು ವರ್ಣನಾತ್ಮಕವಾದ, ರಸಪರವಾದ, ಭಾವನಾತ್ಮಕವಾದ, ಶೋಧನಾತ್ಮಕವಾದ ವಿಧಾನಗಳಿಂದ ಕೂಡಿದೆ ಎಂಬುದನ್ನು ಕಲಾವಿಮರ್ಶಕರು ಗುರುತಿಸುತ್ತಾರೆ. ಈ ಹಿನ್ನೆಲೆಯಲ್ಲಿ ಕನ್ನಡ ಪ್ರಾಚೀನ ಚಿತ್ರಕಲೆಯು ಕನ್ನಡಕ್ಕೆ ನೀಡಿರುವ ವಿಶಿಷ್ಟತೆ ಏನು? ಕನ್ನಡ ಪ್ರಾಚೀನ ಚಿತ್ರಕಲೆಗೆ ಪ್ರಭಾವ ಬೀರಿದ ಆ ಪ್ರಮುಖ ಕಲಾವಿದರ ಕೇಂದ್ರ ಶಕ್ತಿ ಯಾವುದು? ಆ ಪ್ರಮುಖ ಕಲಾವಿದರ ಚಿತ್ರಗಳಿಗೆ ಮತ್ತು ಕಲಾವಿಮರ್ಶಕರ ಮೌಲ್ಯಮಾಪನಕ್ಕೆ ಪ್ರಭಾವ-ಪ್ರೇರಣೆಗಳ ನೆಲೆಗಳು ಯಾವುವು? ಕನ್ನಡದ ಪ್ರಾಚೀನ ಚಿತ್ರಕಲೆಯನ್ನು ಕುರಿತು ಚಿತ್ರ ವಿಮರ್ಶಕರು ತಾಳಿದ ನಿಲುವುಗಳೇನು? ಎಂಬುದನ್ನು ಹುಡುಕಾಡುವ ಅಗತ್ಯವಿದ್ದು ಇದನ್ನು ಈ ಅಧ್ಯಯನದಲ್ಲಿ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಪ್ರಾಚೀನ ಚಿತ್ರಕಲೆಯು ಏಕರೂಪವಾಗಿ ಮೂಡಿಬಂದಿಲ್ಲ. ಕಾಲಾಂತರದಲ್ಲಿ ಹಲವು ಪಲ್ಲಟಗಳನ್ನು ತನ್ನ ಚಿತ್ರಭಿತ್ತಿಯ ಮೂಲಕ ಅಭಿವ್ಯಕ್ತಿಸಿದೆ. ಒಂದೇ ಕಾಲಾವಧಿಯಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿ ಕೆಲವು ಭಿನ್ನತೆಗಳು ಚಿತ್ರಕಲೆಯಲ್ಲಿ ಕಾಣುತ್ತವೆ. ಈ ಭಿನ್ನತೆ ಮತ್ತು ಸ್ಥಿತ್ಯಂತರಗಳ ಜತೆಗೆ ಆಯಾ ಕಾಲದ ಚಿತ್ರಗಳು ವ್ಯಕ್ತಪಡಿಸುವ ತಾತ್ವಿಕ ನಿಲುವುಗಳನ್ನು ಕಲಾತ್ಮಕತೆಯ ನೆಲೆಯಲ್ಲಿ ನೋಡಬಹುದು. ಆದರೆ ಆ ಚಿತ್ರಕಲೆಯು ಅಭಿವ್ಯಕ್ತಿಸುತ್ತಿರುವ ಚಾರಿತ್ರಿಕ ಮತ್ತು ಸಮಕಾಲೀನ ಪ್ರಜ್ಞೆಯ ಹಾಜರಿಯನ್ನು ಅನುಸಂಧಾನ ಮಾಡುವ ಉದ್ದೇಶವನ್ನು ಇರಿಸಿಕೊಳ್ಳಲಾಗಿದೆ. ಹೀಗೆ ಭೂತ, ವರ್ತಮಾನ ಮತ್ತು ಭವಿಷ್ಯತ್ತಿನ ಕಲಾಭಿವ್ಯಕ್ತತೆಯ ಇರುವಿಕೆಯನ್ನು ಮೌಲ್ಯಮಾಪನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಪ್ರಾಚೀನ ಚಿತ್ರಕಲೆಗಳಾದ ಗವಿಚಿತ್ರಗಳು, ಬಯಲು ಬಂಡೆ ಚಿತ್ರಗಳು, ಸುಡಾವೆ ಮಣ್ಣಿನ ಗೊಂಬೆಗಳು, ಮಡಕೆ ಚಿತ್ರಗಳು, ಗೀರು ಚಿತ್ರಗಳು ಮುಖ್ಯವಾಗಿವೆ. ಇವುಗಳ ಮಹತ್ವವನ್ನು ಇತಿಹಾಸಕಾರರಾಗಲಿ, ವಿದ್ವಾಂಸರಾಗಲಿ, ಕಲಾವಿದರಾಗಲಿ ಅಷ್ಟು ಗಂಭೀರವಾಗಿ ಒಂದು ಕಾಲಕ್ಕೆ ಪರಿಗಣಿಸಿರಲಿಲ್ಲ. ೧೯ನೆಯ ಶತಮಾನದ ಅಂತ್ಯ ಮತ್ತು ೨೦ನೆಯ ಶತಮಾನದ ಆರಂಭದಲ್ಲಿ ಚಿತ್ರಕಲೆಯ ಶೋಧಕಾರ್ಯ ಶುರುವಾಯಿತು. ಆದರೆ ಆ ಚಿತ್ರಗಳನ್ನು ಆ ಕಾಲದ ಸಾಮಾಜಿಕ–ಸಾಂಸ್ಕೃತಿಕ ದೃಷ್ಟಿಕೋನದಿಂದ ವಿಶ್ಲೇಷಿಸಲಿಲ್ಲವೆಂದು ಅನಿಸುತ್ತದೆ. ಆದ್ದರಿಂದಲೇ ಚರಿತ್ರೆ ಕಟ್ಟುವವರು ಶಿಲಾಯುಗ, ಮಡಿಕೆ ಇತ್ಯಾದಿ ಅವಶೇಷಗಳನ್ನು ಮಾತ್ರವೇ ಸಂಗ್ರಹಿಸುವತ್ತ ಗಮನ ಹರಿಸಿದರು. ಇದು ಚಿತ್ರಕಲೆಯ ಮೂಲಕ ಪ್ರಾಚೀನ ನಾಗರಿಕ ಜೀವನ ವಿಧಾನವನ್ನು ಅರಿಯುವುದಕ್ಕೆ ಸಹಾಯಕವಾಗಲಿಲ್ಲ. ಚಿತ್ರಕಲೆಯು ಮಾನವನ ಬದುಕಿನ ಭಾಗವಾಗಿದ್ದು ಪ್ರಾಗೈತಿಹಾಸಕಾಲದಿಂದಲೇ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಚಿತ್ರಕಲೆಯನ್ನು ಸಾಮಾಜಿಕವಾಗಿಯೂ ಸಾಂಸ್ಕೃತಿಕವಾಗಿಯೂ ಶೋಧಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಜನಪದ ಚಿತ್ರಕಲೆಗಳನ್ನು ಪ್ರಾಚೀನ ಚಿತ್ರಕಲೆಗಳಂತೆಯೇ ಪರಿಗಣಿಸಿ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ. ಜನಪದ ಚಿತ್ರಕಲೆಗೆ ನಿರ್ದಿಷ್ಟವಾದ ಕಾಲಮಾನವಿಲ್ಲ. ಚಿತ್ರಕಲೆಯು ಕೇವಲ ಸೌಂದರ್ಯಾನುಭೂತಿಯ ಪ್ರತಿಬಿಂಬ ಮಾತ್ರವಾಗಿಯೇ ನೋಡುವುದು ಸರಳವಾಗಿ ಬಿಡುತ್ತದೆಂದು ಅನ್ನಿಸುತ್ತದೆ. ಅದು ಹಲವು ವರ್ಷಗಳ ಪರಿಶ್ರಮದ ಫಲವಾಗಿಯೇ ಸೌಂದರ್ಯದ ಅನುಭೂತಿಯನ್ನು ನೀಡುತ್ತದೆ. ಪ್ರಾಚೀನ ಕಾಲದಿಂದಲೂ ಕಾಲಕಾಲಕ್ಕೆ ಬದಲುಗೊಂಡು ಒಂದು ರೂಪ ತಾಳಬೇಕಾದರೆ ಆ ಕಲೆಯ ಜತೆಗೆ ಜನಪದರು ನಡೆಸಿದ ಕುಸುರಿ ಮಹತ್ವದ್ದೆಂದು ಭಾವಿಸಿಕೊಂಡು ಇಲ್ಲಿ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

ಚಿತ್ರಕಲೆಯಲ್ಲಿ ಒಂದು ಚಿತ್ರವನ್ನು ಕಲಾಕೃತಿಯೆಂದು ಭಾವಿಸಿಕೊಂಡು ಅದು ವಿಸ್ತರಿಸುವುದು ಮುಖ್ಯವಾಗುತ್ತದೆ. ಆಗ ಆ ಕಲಾಕೃತಿಯ ಅಭಿವ್ಯಕ್ತಿಯ ಹಿನ್ನೆಲೆಯನ್ನು ಗಮನಿಸಬೇಕಾಗುತ್ತದೆ. ಆಗಲೇ ಲೋಕ, ಕಲಾವಿದ, ಕಲಾಕೃತಿ, ಕಲಾಹೃದಯಿ ಎಂಬ ನಾಲ್ಕು ಕಲಾವರ್ತುಲಗಳು ಚಿತ್ರಕಲೆಯಲ್ಲಿ ಮುಖ್ಯವಾಗುತ್ತವೆ. ಇವುಗಳನ್ನು ಅನುಸಂಧಾನಿಸಿಕೊಂಡೇ ಚಿತ್ರಕಲೆಯ ಮಹತ್ವವನ್ನು ವಿಶ್ಲೇಷಿಸುವ ಉದ್ದೇಶವನ್ನು ಇಲ್ಲಿ ಹೊಂದಿದೆ.

ಚಿತ್ರವನ್ನು ಸಾಮಾನ್ಯವಾಗಿ ಚಿತ್ರಕಾರನು ಮಾನಸಿಕವಾಗಿ ಕಲಾಪ್ರಜ್ಞೆಯಿಂದ ಚಿತ್ರಿಸುತ್ತಾನೆ. ವಾಸ್ತವವಾಗಿ ಲೋಕದಲ್ಲಿ ಈ ಸ್ಥಿತಿಯು ಇದೆಯೋ ಇಲ್ಲವೋ ಎಂಬುದನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸುವುದು ಒಂದು ಕಡೆಯಾದರೆ, ಇಲ್ಲದ್ದನ್ನು ಕಲ್ಪಿಸಿಕೊಂಡು ರಚಿಸುವುದು ಸಹ ನಡೆಯುತ್ತದೆ. ಮಡಕೆಯಾಗಲಿ, ಪಾತ್ರೆಯಾಗಲಿ, ಬಟ್ಟೆಯಾಗಲಿ, ಗೋಡೆಯಾಗಲಿ ಮತ್ತು ನೆಲವಾಗಲಿ ಎಲ್ಲ ಕಡೆಯೂ ಸಹಜವಾಗಿಯೇ ಚಿತ್ರಕಲೆಯ ಕಸೂತಿಯಂತು ನಡೆದಿರುತ್ತದೆ. ಈ ಹವ್ಯಾಸ ನಿನ್ನೆ, ಮೊನ್ನೆಯಿಂದ ಬಂದದ್ದಲ್ಲ. ಇದು ಪ್ರಾಚೀನ ಕಾಲದಿಂದಲೂ ಹರಿದು ಬಂದಿದೆ. ಯಾಕೆ ಪ್ರಾಚೀನ ಕಾಲದ ಜನರು ಇದನ್ನು ರೂಢಿಸಿಕೊಂಡು ಬಂದರು? ಆ ಕಾಲದಿಂದಲೂ ಇದನ್ನು ಕಲೆಯಾಗಿ ಮಾತ್ರವೇ ಪರಿಗಣಿಸಿರಬೇಕೆ? ಹವ್ಯಾಸದ ಜೊತೆಯೇ ಇದೊಂದು ವ್ಯಾಪಾರೀಕರಣದ ವಿಧಾನ ಆಗಿರಬಹುದೇ? ಎಂಬುದನ್ನು ಹುಡುಕಾಡುವ ಉದ್ದೇಶವನ್ನು ಈ ಅಧ್ಯಯನವು ಹೊಂದಿದೆ.

ರಾಜಪದ್ಧತಿಯ ಆಳ್ವಿಕೆಯು ಶುರುವಾದ ಮೇಲೆ ಅರಸು ಮನೆತನಗಳಿಂದ ಚಿತ್ರಕಲೆಯ ಪೋಷಣೆಯು ನಡೆಯುತ್ತಿತ್ತು. ರಾಜರು ಅರಮನೆಯ ಕಂಬ, ಗೋಡೆ, ಜಗುಲಿ, ಶಯ್ಯಾಗೃಹ ಮುಂತಾದ ಕಡೆ ಚಿತ್ರಕಲಾವಿದರಿಂದ ಸೂಕ್ಷ್ಮವಾದ ಚಿತ್ರಕಲೆಯನ್ನು ಸೌಂದರ್ಯಾರಾಧನೆಯ ಹಿನ್ನೆಲೆಯಿಂದ ರಚಿಸಿಕೊಳ್ಳುವ ಆಸಕ್ತಿಯನ್ನು ಹೊಂದಿದ್ದರು. ಆದರೆ ಪ್ರಾಚೀನ ಕಾಲದಲ್ಲಿ ಇನ್ನೂ ನಾಗರಿಕತೆಗೆ ಅಣಿಯಿಡುತ್ತಿದ್ದ ಮಾನವನು ತನ್ನ ಭಾಷಿಕ ಪ್ರಜ್ಞೆಯ ನೆಲೆಯಿಂದಲೇ ಗವಿಬಂಡೆಗಳ ಮೇಲೆ ಗೆರೆ ಚಿತ್ರಗಳನ್ನು ರಚಿಸಲು ಶುರು ಮಾಡಿದನು. ಈ ಆದಿಮಾನವನು ಪ್ರಾಚೀನ ಕಲೆಯನ್ನು ಸೌಂದರ್ಯನೆಲೆ, ಭಾಷಿಕನೆಲೆ ಅಥವಾ ಅಭಿವ್ಯಕ್ತಿಯನೆಲೆಯಾಗಿ ತಂದಿರಬಹುದು. ಒಂದು ವೇಳೆ ಹಾಗೆ ತಂದಿದ್ದರೂ ಯಾಕೆ ಕಲೆಯ ಮೂಲಕವೇ ಅಭಿವ್ಯಕ್ತಿಸುವ ಆಸಕ್ತಿ ಬೆಳೆಯಿತು ಎಂಬುದನ್ನು ಅನ್ವೇಷಿಸುವ ಉದ್ದೇಶವನ್ನು ಹೊಂದಲಾಗಿದೆ. ಇನ್ನೊಂದು ಆಯಾಮದಲ್ಲಿ ಗಮನಿಸಿದರೆ ಒಂದು ಪ್ರಾಣಿಯ ಚಿತ್ರವನ್ನು ಬರೆದರೆ ಆ ಪ್ರಾಣಿಯ ಶಕ್ತಿಯನ್ನೆಲ್ಲ ತಮ್ಮ ಕೈಯಲ್ಲಿರಿಸಿಕೊಳ್ಳಬಹುದು ಎನ್ನುವ ನಂಬಿಕೆಯು ಅವರದ್ದಾಗಿತ್ತು.

ಪ್ರಾಚೀನ ಚಿತ್ರಕಲೆಯು ಚಾರಿತ್ರಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಎದುರಿಸಿದ ಪಲ್ಲಟಗಳ ಬಗೆಗೆ ಕುತೂಹಲವೆನಿಸುತ್ತದೆ. ಚಿತ್ರಕಲೆಯು ಚಾರಿತ್ರಿಕವಾಗಿ ಪಲ್ಲಟಗಳನ್ನು ಎದುರಿಸುವಾಗ ಅನೇಕ ಮೂಲಗಳ ಪ್ರೇರಣೆ-ಪ್ರಭಾವಗಳಿಗೆ ಒಳಗಾಗಿದೆ. ಪಲ್ಲಟಗಳಿಂದಾಗಿಯೇ ಚಿತ್ರಕಲೆಯು

ಹೊಸ ರೂಪವನ್ನು ಪಡೆಯಲು ಸಾಧ್ಯವಾಗುತ್ತದೆ. ಸಂಪ್ರದಾಯಬದ್ಧ ಚಿತ್ರಕಲೆಯ ರಚನೆಯನ್ನು ಮಾಡುತ್ತ ದೇವಾಲಯ ಮತ್ತು ಆಳುವ ರಾಜನಿಗೆ ಒಪ್ಪಿತವಾದ ಪದ್ಧತಿಯನ್ನು ಅನುಸರಿಸಲು ಸಾಧ್ಯವಾಯಿತು. ಆದರೆ ಈ ಒಪ್ಪಿತ ಪದ್ಧತಿಗಿಂತ ಪೂರ್ವದಲ್ಲಿಯೇ ಪ್ರಾಚೀನ ಚಿತ್ರಕಲೆಗಳು ಉಗಮಿಸಿದ ಕಾರಣ ಅವು ವಿಶಿಷ್ಟವಾಗಿವೆ. ಈ ವಿಶಿಷ್ಟತೆಯ ಪರಿಣಾಮ ಹಾಗೂ ಬೆಳವಣಿಗೆಯನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

ಚಿತ್ರಕಲೆಯನ್ನು ಅಧ್ಯಯನ ಮಾಡುವ ಕಾಲಕ್ಕೆ ಯೋಚಿಸಬೇಕಾದ ಇನ್ನೊಂದು ಸಂಗತಿಯೆಂದರೆ; ಪ್ರಾಚೀನ ಚಿತ್ರಕಲೆಯು ಅಂದಿನ ಸಂಸ್ಕೃತಿ ಮತ್ತು ನಾಗರಿಕತೆಗಳ ಮೇಲೆ ಮಾಡಿದ ಸಂಘರ್ಷದ ನೆಲೆಗಳು ಏನಾದರೂ ಇವೆಯೇ ಎಂದು ಅವಲೋಕಿಸುವ ಉದ್ದೇಶವನ್ನು ಹೊಂದಿದೆ.

ಪ್ರಾಚೀನ ಚಿತ್ರಕಲೆಗಳಾದ ಗವಿಚಿತ್ರಗಳು, ಗೀರು ಚಿತ್ರಗಳು ಮುಂದೆ ಸಾಂಪ್ರದಾಯಿಕ ಮತ್ತು ಜಾನಪದ ಚಿತ್ರಕಲೆಯಾಗಿ ಪರಿವರ್ತನೆಯನ್ನು ಹೊಂದಿತು. ಇದರಂತೆಯೇ ಮಧ್ಯಪ್ರದೇಶ, ಗುಜರಾತ, ರಾಜಸ್ಥಾನ ಮತ್ತು ಮಹಾರಾಷ್ಟ್ರದ ಗಡಿಭಾಗಗಳಲ್ಲಿ ಕಾಣುವ ಪ್ರಖ್ಯಾತ ಬಿಲ್ ಬುಡಕಟ್ಟು ಜನಾಂಗದ ಸಾಂಪ್ರದಾಯಿಕ ಚಿತ್ರಕಲೆಯೇ ಪಿಥೋರಾ. ಈ ಪಿಥೋರಾ ಕಲೆಯು ಆ ಜನಾಂಗದವರ ಕಲಾಭಿವ್ಯಕ್ತಿಯ ಅತ್ಯುತ್ತಮ ಉದಾಹರಣೆಯಾಗಿದೆ. ಇದನ್ನು ಈ ಜನಾಂಗದವರು ಬೆಳೆಸಿಕೊಳ್ಳಲು ಕಾರಣಗಳೇನು ಎನ್ನುವುದು ಮುಖ್ಯವಾದ ಸಂಗತಿಯಾಗಿದೆ. ಕರ್ನಾಟಕದಲ್ಲಿರುವ ಬೆಳದಿಂಗಳ ಕಲೆ, ಹಸೆಕಲೆ, ರಂಗೋಲಿ ಕಲೆಗಳು ಜಾನಪದ ಕಲೆಗಳಾಗಿವೆ. ಇವು ಕಥಾ ಸನ್ನಿವೇಶವನ್ನು ಹೇಳುವುದಿಲ್ಲ. ಆದರೆ ಪಿಥೋರಾ ಚಿತ್ರಕಲೆಯು ಒಂದು ಪೌರಾಣಿಕ ಮತ್ತು ಧಾರ್ಮಿಕ ಕಥಾಭಿತ್ತಿಯನ್ನು ಹೇಳಬಲ್ಲದು. ದೇವಾಲಯಗಳಲ್ಲಿ ರಾಮಾಯಣ ಮತ್ತು ಮಹಾಭಾರತದ ಕಥಾಚಿತ್ರಣಗಳನ್ನು ಕಾಣಬಹುದು. ಅದರಂತೆಯೇ ಆಧುನಿಕ ಕಾಲದ ಕೆಲವು ಚಿತ್ರಣಗಳನ್ನು ಬಿಲ್‌ರು ತಮ್ಮ ಮನೆಯ ಗೋಡೆಗಳ ಮೇಲೆ ಒಂದು ಕಥಾಚಕ್ರವನ್ನು ಬಿಡಿಸುತ್ತಾರೆ. ಈ ಕಲಾಸಿರಿವಂತಿಕೆಯನ್ನು ಅವರು ಅನುಸರಿಸಲು ಮತ್ತು ಬೆಳೆಸಲು ಕಾರಣಗಳೇನು ಎನ್ನುವುದನ್ನು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

ಪಿಥೋರಾ ಚಿತ್ರಕಲೆಯನ್ನು ಕನ್ನಡದ ಪ್ರಾಚೀನ ಚಿತ್ರಕಲೆಯೊಂದಿಗೆ ತೌಲನಿಕವಾಗಿ ಅಧ್ಯಯನ ಮಾಡುವುದಿಲ್ಲ. ಪಿಥೋರಾವನ್ನು ಪ್ರತ್ಯೇಕವಾದ ಅಧ್ಯಾಯದಲ್ಲಿ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ. ಏಕೆಂದರೆ ಈ ಎರಡು ಪ್ರಕಾರಗಳು ವಿಭಿನ್ನವಾದ ಚಿತ್ರಕಲೆಯ ಆಯಾಮವನ್ನು ಹೊಂದಿವೆ. ಈ ಆಯಾಮವನ್ನು ಅಧ್ಯಯನದ ಸಾತತ್ಯಕ್ಕಾಗಿ ಹೀಗೆ ಮಾಡಲಾಗಿದೆ.

ಬಿಲ್ ಜನಾಂಗದ ಚಿತ್ರಕಲೆ ಮತ್ತು ಅವರ ಸಾಂಸ್ಕೃತಿಕ ಜೀವನ ವಿಧಾನವನ್ನು ಅಧ್ಯಯನ ಮಾಡಬೇಕಾಗುತ್ತದೆ. ಕಾರಣ ಇವೆರಡಕ್ಕೂ ಅವಿನಾಭಾವ ಸಂಬಂಧವಿರುವುದು. ಸಾಮಾಜಿಕವಾಗಿ ಅನೇಕ ಕಟ್ಟುಪಾಡುಗಳನ್ನು ಹೊಂದಿರುವುದರಿಂದ ಇವರ ಚಿತ್ರಕಲೆ ಸಮಾಜದ ಮುಖ್ಯವಾಹಿನಿಗೆ ಇದುವರೆಗೂ ಬಂದಿರಲಿಲ್ಲ. ಇವರು ತಮ್ಮ ಚಿತ್ರಕಲೆಯ ಮೂಲಕವೂ ಇಂದು ಆಧುನಿಕ ಸಮಾಜದ ಕಡೆ ಮುಖ ಮಾಡಿದ್ದಾರೆ. ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಇವರ ಚಿತ್ರಕಲೆಗೆ ವಿಶೇಷವಾದ ಮಾನ್ಯತೆ ದೊರೆತಿದೆ. ಆದುದರಿಂದ ಇವರ ಚಿತ್ರಕಲೆಯ ವೈವಿಧ್ಯತೆ ಮತ್ತು ಅದರ ಆಶಯವನ್ನು ತಿಳಿಯುವ ಉದ್ದೇಶವಿದೆ. ಪಿಥೋರಾ ಚಿತ್ರ ಕಲಾವಿದರ ಕಲಾಬದುಕನ್ನು ವಿಶ್ಲೇಷಿಸುವ ಉದ್ದೇಶವನ್ನು ಇಟ್ಟುಕೊಳ್ಳಲಾಗಿದೆ.

ಪಿಥೋರಾ ಚಿತ್ರಕಲೆಯು ಬಿಲ್ ಬುಡಕಟ್ಟು ಜನಾಂಗದ ಸಾಂಪ್ರದಾಯಿಕ ಆಚರಣೆಯ ಭಾಗ. ಈ ಚಿತ್ರಕಲೆಯು ಪ್ರಕೃತಿದತ್ತ ಕಲೆಯಾಗಿದೆ. ಅಲ್ಲದೆ ವಂಶಪರಂಪರೆಯಿಂದ ಬಂದ ಕಲೆಯೂ ಹೌದು. ಇದನ್ನು ಇಂದಿಗೂ ಮುಂದುವರೆಸಿಕೊಂಡು ಬರುತ್ತಿರುವ ಈ ಜನಾಂಗದ ಬಗ್ಗೆ ಸಹಜವಾಗಿ ಕುತೂಹಲವುಂಟಾಯಿತು. ಈ ಕುತೂಹಲದಿಂದಲೇ ಈ ಬುಡಕಟ್ಟುಗಳನ್ನು ಸಂದರ್ಶಿಸಲಾಯಿತು. ಮಧ್ಯಪ್ರದೇಶದ ಧಾರ್, ಜಾಬುವಾ ಮತ್ತು ಭಾಬರಾದ ಬುಡಕಟ್ಟು ಪ್ರದೇಶಗಳನ್ನು ಸಂದರ್ಶನ ಮಾಡಲಾಯಿತು. ಗುಜರಾತದ ಗಡಿಯಲ್ಲಿರುವ ಅಲಿರಾಜ್‌ಪುರದ ಬಿಲ್ ಜನಾಂಗದ ಉಪಪಂಗಡವಾದ 'ರಾಥವಾ' ವನ್ನು ಸಂದರ್ಶನ ಮಾಡುವುದರಿಂದ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವನ್ನು ಹೊಂದಿದೆ.

ಪಿಥೋರಾ ಚಿತ್ರಕಲೆಗೆ ಬೇಕಾದ ಪೂರಕ ಸಾಮಗ್ರಿಗಳನ್ನು ಅವರು ಸಂಗ್ರಹಿಸುವ ವಿಧಾನವನ್ನು ಮತ್ತು ಆ ಚಿತ್ರಕಲೆಯ ಬೆಳವಣಿಗೆಗೆ ಅವರು ತೊಡಗಿರುವ ರೀತಿಯನ್ನು ಅಧ್ಯಯನಕ್ಕೆ ಒಳಪಡಿಸುವುದು ಸೂಕ್ತವಾಗಿದೆ. ಭಾರತದಂತಹ ಬೃಹತ್ ರಾಷ್ಟ್ರಗಳಲ್ಲಿ ಕಲೆಯ ಶ್ರೀಮಂತಿಕೆ ಬಿಲ್‌ನಂತಹ ಬಹುತೇಕ ಜನಾಂಗಗಳಲ್ಲಿವೆ. ಅಂತಹ ಕಲೆಗಳಲ್ಲಿ ಕೆಲವು ನಶಿಸುತ್ತಿವೆ. ಇನ್ನು ಕೆಲವು ಬೆಳೆಯುತ್ತಿವೆ. ಪಿಥೋರಾ ಬೆಳೆಯುತ್ತಿರುವ ಕಲೆ. ಈ ಜನಾಂಗವು ಆ ಕಲೆಯನ್ನು ಪೋಷಿಸಿಕೊಂಡು ಬರುತ್ತಿರುವ ವಿಧಾನವನ್ನು ಗುರುತಿಸುವ ಉದ್ದೇಶವನ್ನು ಹೊಂದಿದೆ.

## ೧.೩ ಅಧ್ಯಯನದ ಮಹತ್ವ

ಕನ್ನಡದ ಅಥವಾ ಕರ್ನಾಟಕದ ಪ್ರಾಚೀನ ಗೋಡೆಯ ಚಿತ್ರಕಲೆಯನ್ನು ಪ್ರಾಗೈತಿಹಾಸಿಕ ಮತ್ತು ಜಾನಪದ ನೆಲೆಗಟ್ಟಿನಿಂದ ಅಧ್ಯಯನಕ್ಕೆ ಒಳಪಡಿಸಿರುವುದು ಇಲ್ಲಿಯ ಮಹತ್ವ ಅಲ್ಲದೆ ಕರ್ನಾಟಕದ ನೆಲೆಗಳ ಜತೆಗೆ ಬಿಲ್ ಮತ್ತು ಅದರ ಉಪಬುಡಕಟ್ಟುಗಳನ್ನಿಟ್ಟುಕೊಂಡು ಒಂದು ವಿಶಿಷ್ಟವಾದ ಚಿತ್ರಕಲೆಯನ್ನು ಕರ್ನಾಟಕಕ್ಕೆ ಪರಿಚಯಿಸುವುದು ಇದರ ಮತ್ತೊಂದು ಮಹತ್ವವಾಗಿದೆ. ಪ್ರಾಚೀನ ಅಥವಾ ಸಂಪ್ರದಾಯಬದ್ಧವಾದ ಪಿಥೋರಾ ಚಿತ್ರಕಲೆಯನ್ನು ಬಿಲ್‌ರು ರೂಪಿಸಿಕೊಂಡ ವಿಧಾನ ಧಾರ್ಮಿಕವಾದದ್ದು. ಅದೇ ಬಿಲ್‌ರು ಆಧುನಿಕ ಪರಿಪ್ರೇಕ್ಷ್ಯದೊಳಗೆ ಬಂದಾಗ ರೂಪಿಸಿಕೊಂಡ ಪಿಥೋರಾ ಇನ್ನೂ ಮಹತ್ವವಾದದ್ದು. ಹೊಸ ಕಲಾವಿದರಿಂದಾಗಿ ಸಂಪ್ರದಾಯಬದ್ಧವಾಗಿದ್ದ ಪಿಥೋರಾವನ್ನು ಆಧುನಿಕರಣಗೊಳಿಸಿ ಬಿಟ್ಟರು. ಇದು ಪಿಥೋರಾದ ಜೀವಂತಿಕೆಯ ಸಂಕೇತವಾಗಿದೆ. ಹಾಗಾಗಿಯೇ ಈ ಅಧ್ಯಯನದಲ್ಲಿ ಹೊಸ ಕಲಾವಿದರ ಪಿಥೋರಾದ ವ್ಯಾಖ್ಯಾನಕ್ಕಿಂತ ಅವರ ಚಿತ್ರಶೈಲಿ ಮಹತ್ವದ್ದಾಗಿದೆ. ಇದನ್ನು ಕರ್ನಾಟಕಕ್ಕೆ ಪರಿಚಯಿಸುವುದು ಈ ಅಧ್ಯಯನದ ಮಹತ್ವಗಳಲ್ಲೊಂದು.

ಸಾಮಾನ್ಯವಾಗಿ ಮನುಷ್ಯ ಆಧುನಿಕನಾದಂತೆ ಸಂಪ್ರದಾಯಬದ್ಧವಾದ ಆಚರಣೆಗಳನ್ನು ತೀರ ಕಡಿಮೆ ಮಾಡಿಬಿಡುತ್ತಾನೆ. ಆದರೆ ಬಿಲ್‌ರು ಪಿಥೋರಾ ಚಿತ್ರಕಲೆಯ ಎರಡು ವಿಶಿಷ್ಟ ಮಾದರಿಗಳನ್ನು ಇನ್ನೂ ಜೀವಂತವಾಗಿಸಿದ್ದಾರೆ ಎಂಬುದನ್ನು ಕನ್ನಡದ ಕಲಾವಿದರಿಗೆ ತಿಳಿಸುವ ಮಹತ್ವವನ್ನು ಹೊಂದಿದೆ. ಬಿಲ್‌ರು ಎರಡು ಚಿತ್ರಶೈಲಿಗಳನ್ನು ಅನುಸರಿಸುತ್ತಿದ್ದಾರೆ. ಒಂದು, ಧಾರ್ಮಿಕ ಆಚರಣೆಯ ಭಾಗವಾಗಿ ಬಿಲ್ ಸಂಪ್ರದಾಯ ಪಿಥೋರಾ ಚಿತ್ರಶೈಲಿ. ಎರಡು, ರೂಪಾಂತರ ಪಿಥೋರಾ ಚಿತ್ರಶೈಲಿಯನ್ನು ಅನುಸರಿಸುತ್ತಾರೆ. ಮೊದಲನೆಯದರಲ್ಲಿ ಪಿಥೋರಾ ಪೂಜೆಯ ಹಿನ್ನೆಲೆಯಲ್ಲಿ ಚಿತ್ರಗಳನ್ನು ರಚಿಸಿ ಧಾರ್ಮಿಕ ಆಚರಣೆಯ ಭಾಗವಾಗಿ ಸಫಲರಾಗುತ್ತಾರೆ. ಎರಡನೆಯದರಲ್ಲಿ ಹೊಸ ಶೈಲಿಯಲ್ಲಿ ಬರೆದ ಚಿತ್ರಗಳನ್ನು ಮಾರುಕಟ್ಟೆಯಲ್ಲಿ ಮಾರುತ್ತಾ ಆರ್ಥಿಕವಾಗಿ ಸಫಲತೆಯನ್ನು ಸಾಧಿಸುವ ಇನ್ನೊಂದು ಮಾರ್ಗವನ್ನು ಕಂಡುಕೊಂಡಿದ್ದಾರೆ. ಈ ವಿಚಾರದಲ್ಲಿ ಕರ್ನಾಟಕದ ಚಿತ್ರಕಲಾವಿದರು ಎರಡರಲ್ಲಿ ಒಂದನ್ನು ಅನುಸರಿಸುತ್ತಾರೆ. ತಮ್ಮದೇ ಆದ ಪರಂಪರೆಯನ್ನು ಆಧುನಿಕರಣಕ್ಕೆ ಹೇಗೆ ಒಗ್ಗಿಸಿಕೊಳ್ಳಬೇಕೆಂಬುದನ್ನು ಬಿಲ್‌ರನ್ನು ನೋಡಿ ಕಲಿಯಬೇಕಿದೆ ಎಂದು ಅನ್ನಿಸುತ್ತದೆ. ಈ ದೃಷ್ಟಿಯಿಂದ ಕನ್ನಡಕ್ಕೆ ಈ ಅಧ್ಯಯನವು ಮಹತ್ವದೆಂದು ಭಾವಿಸಲಾಗಿದೆ.

ಈ ಅಧ್ಯಯನವು ಚಿತ್ರಕಲೆಯ ಶೈಕ್ಷಣಿಕ ಅಗತ್ಯವನ್ನು ಪೂರೈಸಬಲ್ಲದು ಎಂಬುದು ಇದರ ಇನ್ನೊಂದು ಮಹತ್ವವಾಗಿದೆ. ಚಿತ್ರಕಲಾವಿದ ವಿದ್ಯಾರ್ಥಿಗಳಿಗೆ ಚಿತ್ರಕಲೆಯ ಹೊಸ ಸಾಧ್ಯತೆಗಳನ್ನು ಆಲೋಚಿಸುವಲ್ಲಿ ಇದು ಪೂರಕವಾದುದು. ಚಿತ್ರಕಲೆಯ ಅಧ್ಯಯನದಲ್ಲಿ ಹೆಚ್ಚಾಗಿ

ವರ್ಣನೆಯಿರುತ್ತದೆ. ಚಿತ್ರಗಳ ದಾಖಲೆಗಳಿರುತ್ತವೆ. ಈ ಅಧ್ಯಯನವು ಈ ವಿಚಾರಗಳಿಗಿಂತ ತೀರ ಭಿನ್ನವಾದುದು. ಸಮಾಜ, ಸಂಸ್ಕೃತಿ, ಧರ್ಮ ಮತ್ತು ನಾಗರಿಕತೆಗಳ ಹಿನ್ನೆಲೆಯಲ್ಲಿ ಚಿತ್ರಗಳ ವಿಶ್ಲೇಷಣೆಯನ್ನು ಮಾಡುವವರಿಗೆ ಸಹಕಾರಿಯಾಗಬಲ್ಲದು.

## ೧.೪ ಅಧ್ಯಯನದ ವ್ಯಾಪ್ತಿ

ಕನ್ನಡದ ಪ್ರಾಚೀನ ಚಿತ್ರಕಲೆಗೆ ಸಂಬಂಧಿಸಿದಂತೆ ಉತ್ತರ ಕರ್ನಾಟಕದ ಆನೆಗೊಂದಿ, ಕೊಪ್ಪಳ, ಸಿಂದಗಿ, ರಾಯಚೂರು, ಬಾದಾಮಿ ಪ್ರದೇಶಗಳನ್ನು ಅನುಲಕ್ಷಿಸಿ ಗವಿಚಿತ್ರಕಲೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಾಚೀನ ಚಿತ್ರಕಲೆಯ ಭಾಗವಾಗಿ ಬಂದಿರುವ ಜಾನಪದ ಚಿತ್ರಕಲೆಯ ಬೆಳದಿಂಗಳ ಚಿತ್ರಕಲೆಯನ್ನು ಧಾರವಾಡ ಜಿಲ್ಲೆಯ ಕಲಘಟಗಿ, ಅಮ್ಮಿನಬಾವಿ, ನಿಗದಿ ಮತ್ತು ಧಾರವಾಡ ಗ್ರಾಮಾಂತರ ಪ್ರದೇಶಗಳನ್ನು ಅನುಲಕ್ಷಿಸಿ ಅಧ್ಯಯನಕ್ಕೆ ಒಳಗೊಡಿಸಲಾಗಿದೆ.

ಪಿಥೋರಾ ಚಿತ್ರಕಲೆಯನ್ನು ಕರ್ನಾಟಕಕ್ಕೆ ಪರಿಚಯಿಸುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೊಳ್ಳಲಾಯಿತು. ಈ ಹಿನ್ನೆಲೆಯಿಂದಾಗಿ ಈ ಚಿತ್ರಕಲೆಯನ್ನು ಧಾರ್ಮಿಕ ಆಚರಣೆಯಾಗಿ ಮಾಡುತ್ತಿರುವ ಬಿಲ್ ಜನಾಂಗವನ್ನು ಮತ್ತು ಆ ಜನಾಂಗದ ಚಿತ್ರಕಲೆಯನ್ನು ಅಧ್ಯಯನಕ್ಕೆ -ಒಳಪಡಿಸಲಾಗುವುದು. ಬಿಲ್‌ರು ವಾಸಿಸುತ್ತಿರುವ ಮಧ್ಯಪ್ರದೇಶದ ಧಾರ್, ಜಾಬುವಾ, ಭಾಬರಾ ಮತ್ತು ಗುಜರಾತಿನ ಅಲಿರಾಜಾಪುರ ಪ್ರದೇಶಗಳನ್ನು ಅಧ್ಯಯನಕ್ಕೆ ವ್ಯಾಪ್ತಿಯಾಗಿ ಇಟ್ಟುಕೊಳ್ಳಲಾಗಿದೆ.

## ೧.೫ ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನವು ಪ್ರಾಚೀನ ಚಿತ್ರಕಲೆಗೆ ಸಂಬಂಧಿಸಿದ ಕಲ್ಲಾಸರೆ ಚಿತ್ರಗಳು. ವಿಶೇಷವಾಗಿ ಪ್ರಾಗೈತಿಹಾಸ ಕಾಲದ ಬಹುಮುಖ್ಯ ಕಲಾಪ್ರಕಾರಗಳಾದ ಗವಿ ಮತ್ತು ಬಯಲುಬಂಡೆ ಚಿತ್ರಗಳು ಹಾಗೂ ಜಾನಪದ ಚಿತ್ರಕಲೆಯಾದ ಬೆಳದಿಂಗಳ ಚಿತ್ರಕಲೆಗಳ ವಿಶ್ಲೇಷಣೆಯನ್ನು ಒಳಗೊಂಡಿದೆ. ಏಕೆಂದರೆ ಉತ್ತರ ಕರ್ನಾಟಕದ ಆನೆಗೊಂದಿ, ಕೊಪ್ಪಳ, ಸಿಂದಗಿ, ರಾಯಚೂರು, ಬಾದಾಮಿ ಪ್ರದೇಶಗಳು ಗವಿಚಿತ್ರಗಳ ದೃಷ್ಟಿಯಿಂದ ಶ್ರೀಮಂತ ಪ್ರದೇಶಗಳಾಗಿವೆ. ಅಲ್ಲದೆ ಉತ್ತರ ಕರ್ನಾಟಕದ ವರ್ಣಚಿತ್ರಕಲೆಯ ಕೇಂದ್ರ ನೆಲೆ ಎನಿಸಿರುವುದರಿಂದ ಪ್ರಧಾನವಾಗಿ ಈ ಭಾಗವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಕ್ಷೇತ್ರಕಾರ್ಯ:** ಅಧ್ಯಯನವು ಪುರಾತತ್ವ ದೃಷ್ಟಿಯದ್ದಾದರೂ ಆ ನೆಲೆಗಳನ್ನು ಹುಡುಕುವ ವಿಧಾನವನ್ನು ಅನುಸರಿಸಿದೆ. ಆ ನೆಲೆಗಳಲ್ಲಿ ಕಾಣುವ ಪ್ರಾಚೀನ ಚಿತ್ರಕಲೆಗಳಾದ ಗವಿಚಿತ್ರಗಳು ಮತ್ತು ಬೆಳದಿಂಗಳ ಚಿತ್ರಗಳನ್ನು ಅಧ್ಯಯನ ಮಾಡಲು ಆ ಚಿತ್ರಗಳು ದೊರೆಯುವ ಸ್ಥಳಗಳಿಗೆ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿದೆ. ಪ್ರಾಚೀನ ಚಿತ್ರಕಲೆಗಳಾದ ಗವಿಚಿತ್ರಗಳ ನೆಲೆಗಳನ್ನು ಹುಡುಕಾಡುವ ಮತ್ತು ಈಗಾಗಲೇ ದೊರೆತಿರುವ ಸ್ಥಳಗಳಿಗೆ ಭೇಟಿ ನೀಡಿದಾಗ ಕೆಲವು ಚಿತ್ರಗಳು ಮೂಲಸ್ವರೂಪವನ್ನು ಕಳೆದುಕೊಂಡಿವೆ. ಅಲ್ಲದೆ ಕಲ್ಲುಗಣಿಗಾರಿಕೆಗಳಿಗೆ ತುತ್ತಾಗಿ ತುಂಬಾ ಕಡೆ ಆದಿಮಾನವನ ಚಿತ್ರಕಲೆಗಳು ನಶಿಸಿರುವುದು ಕ್ಷೇತ್ರಕಾರ್ಯದಿಂದಾಗಿ ತಿಳಿಯಲು ಸಾಧ್ಯವಾಯಿತು. ಬೆಳದಿಂಗಳ ಹಬ್ಬದ ಚಿತ್ರಣಗಳು ಆಚರಣೆಯ ಸಂದರ್ಭದಲ್ಲಿ ಧಾರವಾಡ ಜಿಲ್ಲೆಯ ಕಲಘಟಗಿ, ಅಮ್ಮಿನಬಾವಿ, ಕೆಲವು ಗ್ರಾಮಾಂತರ ಪ್ರದೇಶಗಳಲ್ಲಿ ಕಂಡುಬಂದಿರುವುದನ್ನು ಕ್ಷೇತ್ರಕಾರ್ಯದ ಮೂಲಕ ದಾಖಲಿಸಿಕೊಂಡು ಅಧ್ಯಯನ ಮಾಡುವ ವಿಧಾನವನ್ನು ಇಲ್ಲಿ ಅನುಸರಿಸಲಾಗಿದೆ. ಹೊಸ ಕಲಾಪ್ರಕಾರವೊಂದನ್ನು ಪರಿಚಯಿಸುವ ಮತ್ತು ವಿಶ್ಲೇಷಿಸುವ ದೃಷ್ಟಿಯಿಂದ ಮಧ್ಯಪ್ರದೇಶ ಮತ್ತು ಗುಜರಾತಿನಲ್ಲಿ ವಾಸಿಸುತ್ತಿರುವ ಬಿಲ್ ಬುಡಕಟ್ಟಿನ ಪ್ರದೇಶಗಳಿಗೆ ಭೇಟಿ ನೀಡಿ ಚಿತ್ರಕಲೆ ಸಂಗ್ರಹವನ್ನು ಮಾಡಲಾಗಿದೆ.

**ಸಂದರ್ಶನ:** ಪಿಥೋರಾ ಚಿತ್ರಕಲೆಗೆ ಸಂಬಂಧಿಸಿದಂತೆ ಆ ಚಿತ್ರಕಲೆಯನ್ನು ರಚಿಸುತ್ತಿರುವ ಬಿಲ್ ಜನಾಂಗದ ಚಿತ್ರಕಾರರನ್ನು ಸಂದರ್ಶನ ಮಾಡಿ ಮಾಹಿತಿಯನ್ನು ಸಂಗ್ರಹಿಸಲಾಯಿತು. ಈ ಮಾಹಿತಿಯನ್ನು ಸಂಶೋಧನಾತ್ಮಕವಾಗಿ ಅಧ್ಯಯನ ಮಾಡಿ ವಿಶ್ಲೇಷಿಸುವ ನಿಲುವನ್ನು ಈ ಅಧ್ಯಯನದಲ್ಲಿ ಅನುಸರಿಸಲಾಗಿದೆ. ಬಿಲ್ ಜನಾಂಗದ ಸಂಸ್ಕೃತಿ ಮತ್ತು ನಾಗರಿಕತೆಯನ್ನು ವಿಶ್ಲೇಷಣೆ ಮಾಡುವ ವಿಧಾನವನ್ನು ಅನುಸರಿಸಲಾಗಿದೆ. ಈ ಜನಾಂಗದವರ ಚಿತ್ರಕಲೆಯು ಪೌರಾಣಿಕ ನೆಲೆಯ ಒಂದು ಆಚರಣೆಯಾಗಿದೆ. ಇದನ್ನು ಆ ಜನಾಂಗದ ವ್ಯಕ್ತಿಗಳನ್ನು ಸಂದರ್ಶಿಸುವ ಮುಖಾಂತರ ಅಧ್ಯಯನದ ಸ್ವರೂಪವನ್ನು ರೂಪಿಸಿಕೊಳ್ಳಲು ಈ ವಿಧಾನವನ್ನು ಅನುಸರಿಸಲಾಯಿತು.

**ಧ್ವನಿಮುದ್ರಣ ಮತ್ತು ಛಾಯಚಿತ್ರಣ:** ಪಿಥೋರಾ ಚಿತ್ರಕಲೆಯ ಸಂಪ್ರದಾಯವನ್ನು ತಿಳಿಯುವುದು ಮಹತ್ತರ ಸಂಗತಿಯಾಗಿದೆ. ಏಕೆಂದರೆ ಅಲ್ಲಿಯ ಭಾಷೆ ಕನ್ನಡವಲ್ಲ. ಅವರದ್ದು ಬಿಲ್ ಭಾಷೆಯೇ ಆಗಿರುವುದು ವಿಷಯ ಸಂಗ್ರಹಿಸಲು ತೊಡಕಾಯಿತು. ನಂತರದಲ್ಲಿ ಬಿಲ್‌ರ ಕೆಲವು ಜನಗಳಿಗೆ ಹಿಂದಿ ಭಾಷೆ ಬರುತ್ತಿದ್ದದ್ದು ಪಿಥೋರಾ ಬಗ್ಗೆ ತಿಳಿಯಲು ಸಹಕಾರಿಯಾಯಿತು. ರಾಥವಾದವರಿಗೆ ಹಿಂದಿ ಬರುವುದು ಕಡಿಮೆ ಆಗ ಬಿಲ್‌ರಿಂದ ಮಾಹಿತಿ ಪಡೆದು ಧ್ವನಿಸಂಗ್ರಹಿಸಲಾಯಿತು. ಪಿಥೋರಾದ ಬಗೆಗೆ ಹೆಚ್ಚು ವಿಡಿಯೋ ಮತ್ತು ಧ್ವನಿಯನ್ನು ಏಕಕಾಲಕ್ಕೆ ಮಾಡುವ ಮೂಲಕ ಹೆಚ್ಚು ಪೂರಕವಾಗಿ ಮಾಹಿತಿ ಸಂಗ್ರಹಿಸಲಾಯಿತು.

**ತೌಲನಿಕತೆ:** ಪ್ರಾಚೀನ ಚಿತ್ರಕಲೆಯಾಗಿರುವ ಜಾನಪದ ಚಿತ್ರಕಲೆ ಮತ್ತು ಪಿಥೋರಾ ಚಿತ್ರಕಲೆಯ ತೌಲನಿಕ ಅಧ್ಯಯನ ಮಾಡಿ ವಿಶ್ಲೇಷಿಸುವ ವಿಧಾನವನ್ನು ಈ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ರಚನೆ, ರೇಖೆ, ಆಕಾರ, ಬಣ್ಣ, ನಂಬಿಕೆ, ಆಚರಣೆ ಮತ್ತು ವಿಧಿವಿಧಾನಗಳನ್ನು ಕುರಿತು ತೌಲನಿಕ ಅಧ್ಯಯನ ಮಾಡುವ ವಿಧಾನವನ್ನು ಅನುಸರಿಸಲಾಗಿದೆ.

ಪ್ರಕಟಿತ ಮತ್ತು ಅಪ್ರಕಟಿತ ಸಾಹಿತ್ಯ ಕೃತಿಗಳನ್ನು ಮತ್ತು ಪಿಎಚ್.ಡಿ., ಮಹಾಪ್ರಬಂಧಗಳನ್ನು ಅಧ್ಯಯನಕ್ಕೆ ಸಂಬಂಧಪಟ್ಟಂತೆ ಪೂರಕವಾಗಿ ಬಳಸಿಕೊಂಡು ಅಧ್ಯಯನವನ್ನು ಮಾಡಲಾಗಿದೆ.

# ಅಧ್ಯಾಯ ೨

# ಪರಿಕಲ್ಪನಾತ್ಮಕ ಚರ್ಚೆಗಳು

## ೨.೧ ಪರಿಕಲ್ಪನಾತ್ಮಕ ವಿಶ್ಲೇಷಣೆ

"ಕನ್ನಡ ಪ್ರಾಚೀನ ಚಿತ್ರಕಲೆ ಮತ್ತು ಪಿಥೋರಾ" ಎಂಬ ವಿಷಯವು ಎರಡು ವಿಭಿನ್ನವಾದ ತಾತ್ವಿಕ ನೆಲೆಗಳನ್ನೊಳಗೊಂಡ ಅಧ್ಯಯನವಾಗಿದೆ. ಕನ್ನಡದ್ದೇ ಆದ ಪ್ರಾಚೀನ ಚಿತ್ರಕಲೆ ಎಂಬುದು ಒಂದು. ಎರಡನೆಯದ್ದು ಕನ್ನಡದ್ದಲ್ಲದ ಪಿಥೋರಾ ಚಿತ್ರಕಲೆ. ಮೊದಲಿಗೆ ಕನ್ನಡದ ಪ್ರಚೀನ ಚಿತ್ರಕಲೆಯ ಬಗೆಗೆ ಗಮನಿಸಬಹುದು. ಇದರಲ್ಲಿ ಕನ್ನಡ ಎಂಬುದು, ಬಾಷೆ, ಜನ ಮತ್ತು ಪ್ರದೇಶವನು ಒಳಗೊಂಡಿದ್ದು, ಈ ದೃಷ್ಟಿಯಿಂದ ಕನ್ನಡ–ಕನ್ನಡಿಗ–ಕರ್ನಾಟಕ ಎಂಬ ಮೂರು ಅಂಶಗಳು ಒಂದು ಚೌಕಟ್ಟನ್ನು ಅಥವಾ ಒಂದು ಎಲ್ಲೆಯನ್ನು ಒಳಗೊಂಡ ನೆಲೆ. ಆದರೆ ಈ ಪ್ರಚೀನ ಚಿತ್ರಕಲೆಯು 'ಕನ್ನಡ'ವೆಂಬ ಪರಿಕಲ್ಪನೆಯು ಇನ್ನೂ ಹುಟ್ಟಿರದ ಸಂದರ್ಭದಲ್ಲಿ ಆದಿಮಾನವನಿಂದ ನಿರ್ಮಿತವಾದವು. ಅವು ಪ್ರಸ್ತುತ ಕನ್ನಡದ ಎಲ್ಲೆಯೊಳಗೆ ಸಿಕ್ಕಿರುವುದರಿಂದ 'ಕನ್ನಡ ಪ್ರಾಚೀನ ಚಿತ್ರಕಲೆ' ಎಂಬುದಾಗಿ ಅಧ್ಯಯನದಲ್ಲಿ ಗಮನಿಸಿದೆ. ಈ ಕಾರಣಕ್ಕಾಗಿಯೇ ಕನ್ನಡವನ್ನು ಒಂದು ಪ್ರದೇಶವೆಂದು ಗುರುತಿಸಿಕೊಂಡು ಇದರೊಳಗೆ ನಿರೂಪಿತಗೊಂಡಿರುವ ಕಲೆ, ಸಾಹಿತ್ಯ, ಸಂಸ್ಕೃತಿಯನ್ನು ವಿಶ್ಲೇಷಣೆಗೆ ಒಳಪಡಿಸುವುದು ಒಂದು ಆಯಾಮವಾಗಿದೆ. ಈ ಅಧ್ಯಯನದ ವಿಷಯವು ತುಂಬಾ ಸಂಕೀರ್ಣವಾದುದೆಂದು ಯಾರಿಗಾದರೂ ಕಂಡುಬರುತ್ತದೆ. ಪ್ರಾಚೀನ ಚಿತ್ರಕಲೆಯನ್ನು ಎಲ್ಲಿಂದ ಗುರುತಿಸಿಕೊಳ್ಳಬೇಕು ಎಂಬ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ.

ಪ್ರಾಚೀನವೆಂದರೆ ಎಲ್ಲಿಂದ–ಎಲ್ಲಿಯವರೆಗೆ ಎಂಬುದು ಇಲ್ಲಿ ಮುಖ್ಯವಾಗುತ್ತದೆ. ಈ ಪ್ರಾಚೀನ ಚಿತ್ರಕಲೆಯೊಳಗೆ ಜಾನಪದ ಚಿತ್ರಕಲೆಯನ್ನು ಹೇಗೆ ಗುರುತಿಸಿಕೊಳ್ಳಬೇಕು. ಕೆಲವು ಚಿತ್ರಕಲೆಗಳ ಆರಂಭಕ್ಕೆ ಕಾಲಘಟ್ಟಗಳೇ ಇಲ್ಲ. ಈ ದೃಷ್ಟಿಯಿಂದ ನೋಡಿದಾಗ ಕನ್ನಡ ಪ್ರಾಚೀನ

ಚಿತ್ರಕಲೆಯನ್ನು ಹೇಗೆ ಪರಿಭಾವಿಸಬೇಕು. ಪ್ರಾಗೈತಿಹಾಸಿಕ ಕಾಲಘಟ್ಟದ ಮಾನವನು ಕಲ್ಲು ಬಂಡೆಗಳ ಗೋಡೆಗಳ ಮೇಲೆ ಕೊರೆದ, ಬಿಡಿಸಿದ ಚಿತ್ರಗಳನ್ನು ಹೇಗೆ ಅರ್ಥೈಸಿಕೊಳ್ಳಬೇಕು. ಈ ಹಿನ್ನೆಲೆಯಿಂದಾಗಿ ಇಲ್ಲಿ ಎರಡು ನೆಲೆಗಳನ್ನು ಕಾಣಬಹುದು. ಒಂದು, ಭಾಷೆಯೇ ಸ್ಪಷ್ಟವಾಗಿ ರಚನೆಯಾಗಿಲ್ಲದ ಕಾಲದಲ್ಲಿ ಚಿತ್ರಗಳನ್ನು ಬರೆದ ಆದಿಮಾನವ ಕಾಲ. ಎರಡು, 'ಕನ್ನಡ ನಾಡು' ಎಂಬ ಗಡಿರೇಖೆಯನ್ನು ಹಾಕಿಕೊಳ್ಳದ ಕಾಲದಲ್ಲಿ ರಚಿತವಾದ ಚಿತ್ರಗಳ ಕಾಲ. ಪ್ರಸ್ತುತದಲ್ಲಿ ಅಧ್ಯಯನದ ಉದ್ದೇಶದಿಂದ ಕನ್ನಡ ನಾಡು ಎಂದು ಗುರುತಿಸಿಕೊಂಡ ಪ್ರದೇಶದಲ್ಲಿ ಸಿಕ್ಕಂತಹ ಚಿತ್ರಗಳೆಂದು ಪರಿಭಾವಿಸಿಕೊಳ್ಳಲು ಮತ್ತೊಂದು ಅವಕಾಶವಿದೆ.

(ಆದಿಮಾನವನು ರಚಿಸಿದ ಚಿತ್ರಗಳನ್ನು ಪ್ರಾಚೀನವೆಂದು ಕರೆದುಕೊಳ್ಳಲಾಗಿದೆ) ವಿವಿಧ ಜ್ಞಾನ ಶಿಸ್ತುಗಳು ಪ್ರಾಚೀನತೆಯನ್ನು ತಮ್ಮ ಶಿಸ್ತುಗಳ ತಾತ್ವಿಕ ನೆಲೆಗಟ್ಟಿನ ಆಧಾರದ ಮೇಲೆ ಬೇರೆ ಬೇರೆ ಕಾಲಘಟ್ಟಗಳಿಂದ ಗುರುತಿಸಿಕೊಳ್ಳಲಾಗಿದೆ. ಉದಾಹರಣೆಗೆ: ಚರಿತ್ರೆ, ಸಾಹಿತ್ಯ ಮುಂತಾದವು ವಿವಿಧ ಕಾಲಘಟ್ಟಗಳನ್ನು ಗುರುತಿಸಿಕೊಂಡಿರುವುದನ್ನು ಕಾಣಬಹುದು. ಈ ಅಧ್ಯಯನ ಸಂದರ್ಭದಲ್ಲಿ ಪ್ರಾಗೈತಿಹಾಸಿಕ ಕಾಲಘಟ್ಟದ್ದಾದರೂ ಅದನ್ನು ಪ್ರಾಚೀನವೆಂದು ಕರೆದುಕೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ. ಪ್ರಾಗೈತಿಹಾಸಿಕ ಮತ್ತು ಜಾನಪದ ಎರಡೂ ಚಿತ್ರಕಲೆಗಳಲ್ಲಿ 'ಗೋಡೆಯ' ಮೇಲೆ ಬರೆದ ಚಿತ್ರಗಳನ್ನು ಮಾತ್ರ ಪರಿಗಣಿಸಿದುದರಿಂದ ಈ ರೀತಿ ಮಾಡಲಾಗಿದೆ. ಈ ಆಯ್ಕೆಗೂ ಕಾರಣವಿದೆ, 'ಪಿಥೋರಾ' ಎಂಬ ಚಿತ್ರಕಲಾ ಪರಿಕಲ್ಪನೆಯೊಂದು ಆದಿಮಾನವನ ಹಾಗೆಯೇ ಪ್ರಾಕೃತಿಕ ಜಗತ್ತಿನ ಮನುಷ್ಯ, ಪ್ರಾಣಿ, ಪಕ್ಷಿ, ಸಸ್ಯ ಮುಂತಾದ ಚಿತ್ರಗಳನ್ನು ಗೋಡೆಗಳ ಮೇಲೆ ಸಮೃದ್ಧವಾಗಿ ಮಧ್ಯಪ್ರದೇಶದ ಬಿಲ್‌ರು ಬಿಡಿಸುತ್ತಾರೆ. ಜನಪದರಲ್ಲಿ 'ಬೆಳದಿಂಗಳ ಚಿತ್ರಕಲೆ'ಯನ್ನು ಗೋಡೆಯ ಮೇಲೆ ಬಿಡಿಸುತ್ತಾರೆ. ಅವರು ಹಾವು-ಚೇಳು, ಸೂರ್ಯ-ಚಂದ್ರ ಇತ್ಯಾದಿ ಚಿತ್ರಗಳನ್ನು ತೆಗೆಯುತ್ತಾರೆ. ಇದೊಂದು ಸಾಂಪ್ರದಾಯಿಕ ಆಚರಣೆ. ಚಿತ್ರ ಬರೆದು ಆ ಚಿತ್ರಗಳಿಗೆ ಪೂಜೆ ಸಲ್ಲಿಸುತ್ತಾರೆ. ಇದನ್ನು ಮುಂದಿನ ಅಧ್ಯಯನಗಳಲ್ಲಿ ವಿಶ್ಲೇಷಿಸಲಾಗಿದೆ.

ಆಧುನಿಕ ಕಾಲದಲ್ಲಿಯೂ ಗೋಡೆಗಳ ಮೇಲೆ ಚಿತ್ರಗಳನ್ನು ಬರೆಯುವ ಪದ್ಧತಿಯಿದೆ. ಈ ದೃಷ್ಟಿಯಿಂದ ಮಾತ್ರವೇ ಇದನ್ನು ಪ್ರಾಚೀನವೆಂದು ಕರೆದುಕೊಳ್ಳಬಹುದಲ್ಲ ಎಂದು ಯಾರಿಗಾದರೂ ಅನ್ನಿಸಬಹುದು. ಆಧುನಿಕ ಕಾಲದ ಚಿತ್ರಗಳಿಗೂ, ಪ್ರಾಚೀನ ಚಿತ್ರಗಳಿಗೂ ಕೆಲವು ಸಾಮ್ಯತೆ ಇರುವಂತೆ ಭಿನ್ನತೆಯೂ ಇದೆ. ಆದಿಮಾನವನ ಚಿತ್ರಕಲೆ, ಬೆಳದಿಂಗಳ ಚಿತ್ರಕಲೆ ಎರಡೂ ಸಂಪ್ರದಾಯಬದ್ಧವಾದವು. ಇವರು ಚಿತ್ರ ಬಿಡಿಸುವುದು ಆಚರಣೆಯ ಒಂದು ಭಾಗವಾಗಿ ನಂತರದಲ್ಲಿ ಅದೊಂದು ಅವರಿಗೆ ಸಂಸ್ಕೃತಿ, ಪರಂಪರೆಯ ಭಾಗವಾಗಿ ಬೆಳೆದು ಬಿಟ್ಟಿತು. ಪ್ರಾಚೀನ ಚಿತ್ರಕಲೆಯೆ ಆಧುನಿಕ ಕಾಲದಲ್ಲಿ ಕೆಲವು ಸ್ಥಿತ್ಯಂತರಗಳೊಂದಿಗೆ ಮಾರ್ಪಟ್ಟಿರುವುದನ್ನು ಕಾಣಬಹುದು. ಏಕೆಂದರೆ ಇತರ ಕಲೆಗಳಂತೆ ಚಿತ್ರಕಲೆಯೂ ಬಹು

ಪ್ರಾಚೀನ ಕಾಲದಿಂದಲೂ ಒಂದು ಪರಂಪರೆಯಾಗಿ ಹರಿದು ಬಂದಿದೆ. ಅಲ್ಲದೇ ಮನುಷ್ಯನ ಸಂಗಾತಿಯಾಗಿ, ವಿರಾಮದ ಭಾಗವಾಗಿ, ಆಚರಣೆಯ ಭಾಗವಾಗಿ, ಸಂಸ್ಕೃತಿಯ ಭಾಗವಾಗಿ ಅದು ವಿಭಿನ್ನವಾಗುತ್ತಾ ಹೋಗಿದೆ. ತನ್ನ ಅನುಭವದ ಮನೋಧರ್ಮ ಮತ್ತು ಸಂಪ್ರದಾಯಬದ್ಧವಾಗಿ ಆಚರಿಸಲೇಬೇಕಾದ ಮನೋಧರ್ಮ ಎರಡನ್ನೂ ಒಳಗೊಂಡಿದೆ.

ಈ ಹಿನ್ನೆಲೆಯಲ್ಲಿಯೇ ಆದಿಮಾನವನನ್ನು ಒಳಗೊಂಡಂತೆ, ಕೆಲವು ಬುಡಕಟ್ಟು ಸಮುದಾಯಗಳು ಮತ್ತು ಸಂಪ್ರದಾಯಬದ್ಧ ಜನಪದರು ಚಿತ್ರಕಲೆಯ ಜೊತೆಗೆ ಆಂತರಿಕ ಸಂಬಂಧವನ್ನು ಇಟ್ಟುಕೊಂಡಿದ್ದಾರೆ. ಸೋಲಿಗರು, ಕುರುಬರು, ಯರವರು, ಪಣಿಯರು, ಹಸಲರು, ದೀವರು, ಗೊಂಡರು, ಕುಣಬಿ ಮತ್ತು ಗೌಳಿಗರು ಗೋಡೆಯ ಮೇಲೆ ಚಿತ್ರಗಳನ್ನು ಬರೆಯುತ್ತಾರೆ. ಈ ಚಿತ್ರಗಳನ್ನು ಬರೆಯುವಾಗ ಮೂಲ ಉದ್ದೇಶವೊಂದನ್ನು ಇಟ್ಟುಕೊಂಡು ಬರೆಯುವುದಿಲ್ಲ ಅನ್ನಿಸುತ್ತದೆ. ಉದಾಹರಣೆಗೆ: ಸೋಲಿಗರು ಹುಲಿ, ಹಾವು, ಆನೆ, ನವಿಲು, ದೇವಾಲಯದಲ್ಲಿನ ಬಿರುದುಗಳ ಚಿತ್ರಗಳನ್ನು ಬರೆಯುತ್ತಾರೆ. ಈ ಚಿತ್ರಗಳು ಸಾಮಾನ್ಯವಾಗಿ ಮನೆಯ ಅಲಂಕಾರಕ್ಕಾಗಿ ರಚನೆಗೊಂಡಿರುತ್ತವೆ. ಪೂಜೆ ಅಥವಾ ಆಚರಣೆಯ ಭಾಗವಾಗಿ ಬಿಡಿಸಿರುವುದಿಲ್ಲ. ಅಲ್ಲದೇ ತನ್ನದೇ ನಿರ್ದಿಷ್ಟವಾದ ಚಿತ್ರಶೈಲಿಯೊಂದು ಇರುವುದಿಲ್ಲ. ಆದರೆ ಆದಿಮಾನವನ ಚಿತ್ರಗಳಿಗೆ ಚಿತ್ರಶೈಲಿಯೆಂಬುವುದು ಇತ್ತು. ಬೆಳದಿಂಗಳ ಚಿತ್ರಗಳನ್ನು ಹೀಗೆ ಬರೆಯಬೇಕೆಂಬ ಒಂದು ಶೈಲಿಯಿದೆ.

'ಕನ್ನಡ ಪ್ರಾಚೀನ ಚಿತ್ರಕಲೆ' ಯಲ್ಲಿ ಮುಖ್ಯವಾಗಿ ಆದಿಮಾನವನ ಚಿತ್ರಗಳು ಮತ್ತು ಜನಪದರ 'ಬೆಳದಿಂಗಳ ಚಿತ್ರಕಲೆ' ಯನ್ನು ಗಮನಿಸಲಾಗಿದೆ. ಈ ಎರಡು ಚಿತ್ರಕಲೆಗಳಿಗೆ ಸುದೀರ್ಘವಾದ ಇತಿಹಾಸವಿದ್ದರೂ ನಿರ್ದಿಷ್ಟವಾಗಿ ಇದೇ ಕಾಲವೆಂದು ಗೆರೆ ಕೊರೆದು ಹೇಳಲು ಸಾಧ್ಯವಿಲ್ಲ. ಅಲ್ಲದೆ ಕೆಲವು ಬುಡಕಟ್ಟುಗಳ ಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಬಹುದಾಗಿತ್ತು. ಅಧ್ಯಯನದಿಂದ ಬಿಡಲು ಕಾರಣ ಆ ಬುಡಕಟ್ಟುಗಳ ಚಿತ್ರಶೈಲಿಗಳು ತುಂಬ ವಿಭಿನ್ನವಾಗಿವೆ. ಅಲ್ಲದೇ ಕೆಲವು ಅಧ್ಯಯನಗಳು ಅದರಲ್ಲಿ ಈಗಾಗಲೇ ಆಗಿವೆ. ಅದು ಪುನರಾವರ್ತನೆಯಾಗಬಹುದೆಂದು ಕೆಲವು ಬುಡಕಟ್ಟುಗಳನ್ನು ಹೆಸರಿಸಲಾಗಿದೆ. ಕರ್ನಾಟಕದ ಪ್ರಾಚೀನ ಚಿತ್ರಕಲೆಗಳನ್ನು ವಿವರಿಸುತ್ತಾ ಧಾರವಾಡ ಪ್ರದೇಶದ ಬೆಳದಿಂಗಳ ಚಿತ್ರಕಲೆ ಮತ್ತು ಕೊಪ್ಪಳ-ಹಂಪಿಯ ಪ್ರಾಚೀನ ಆದಿಮಾನವ ಚಿತ್ರಕಲೆಯನ್ನು ವಿಶ್ಲೇಷಿಸಲಾಗಿದೆ.

ಮಾನವನ ಪ್ರಾಚೀನತೆಯನ್ನು 'ಆದಿಮಾನವ ಹಂತ' ವೆಂದು ಗುರುತಿಸಿಕೊಂಡಾಗ ಅವನ ಬದುಕಿನ ಸ್ಥಿತಿಗತಿಗಳು ಭಿನ್ನವಾದವು. ಅವನ ಚಿತ್ರಣವೇ ಭಯ, ಆತಂಕ, ರೋಗ-ರುಜಿನ, ಭೂಕಂಪನ, ಪ್ರವಾಹಗಳಿಗೆ ಅವನ ಪ್ರತಿಕ್ರಿಯೆ ಸೌಮ್ಯವು ಮತ್ತು ಸಾಹಸಮಯವೂ

ಆಗಿತ್ತು. ಸೌಮ್ಯದೊಡನೆಯೇ ಅವನ ಪ್ರತಿಕ್ರಿಯೆ ದೈವದೊಡನೆ, ಆಚರಣೆಗಳೊಡನೆ ಮತ್ತೊಂದು ತಿರುವು ಪಡೆಯಲು ಸಾಧ್ಯವಾಯಿತು. ಹೀಗೆ ಆಚರಣೆಗಳೊಡನೆ ಪ್ರಾಚೀನ ಚಿತ್ರಕಲೆಗಳು ಬಹುತೇಕವಾಗಿ ತಳಕು ಹಾಕಿಕೊಂಡಿವೆ.

ಧಾರ್ಮಿಕ ಹಿನ್ನೆಲೆಯ ದೈವೀ ಪರಿಕಲ್ಪನೆಯಲ್ಲಿ ಮತ್ತು ಆರಾಧನಾ ಸಂದರ್ಭಗಳಲ್ಲಿ ಚಿತ್ರಕಲೆಯು ಮೂಡಿದೆ. ಆದಿಮಾನವನಿಂದ ಶುರುವಾದ ಪ್ರಾಥಮಿಕ ಹಂತದ ಬೆಳವಣಿಗೆ ಅದೊಂದು ಸಂಪ್ರದಾಯವಾಗಿ ಇಂದಿಗೂ ಬೆಳೆದು ಬಂದಿದೆ. ಭಾರತೀಯ ಯಾವುದೇ ಸಂಪ್ರದಾಯಬದ್ಧ ಆಚರಣೆಯ ಸಂದರ್ಭಗಳಲ್ಲಿ ಚಿತ್ರಕಲೆಯ ಯಾವುದಾದರೂ ಒಂದು ರೂಪವು ಅಲ್ಲಿ ಪ್ರವೇಶ ಪಡೆಯುತ್ತದೆ. ಹೀಗೆ ಅನೇಕ ರೂಪಗಳು ಬೆಳೆದು ಬರುವಲ್ಲಿ ಆದಿಮಾನವನ ಗವಿಚಿತ್ರಗಳಲ್ಲಿ ಕಾಣುವ ಹಸೆಯಂತಹ ಚಿತ್ರಗಳು ಸಾಕ್ಷಿಯಾಗಬಲ್ಲವು. ಈ ದೃಷ್ಟಿಯಿಂದಾಗಿ ಪ್ರಾಚೀನ ಚಿತ್ರಕಲೆಯು ಆಧುನಿಕ ಚಿತ್ರಕಲೆಯ ತಾಯಿಬೇರು. ಆದಿಮಾನವನ ಸಂಸ್ಕೃತಿಯನ್ನು ಸಹ ಅವನು ಚಿತ್ರಿಸಿದ ಚಿತ್ರಗಳು ಅಭಿವ್ಯಕ್ತಿಸಬಲ್ಲವು. ಪ್ರಾಗೈತಿಹಾಸಿಕ ಕಾಲದಿಂದಲೂ ಚಿತ್ರಕಲೆಯು ಕಾಲದಿಂದ ಕಾಲಕ್ಕೆ ಸೃಷ್ಟಿಯಾಗುತ್ತ ಬಂದ ಐತಿಹಾಸಿಕ ದಾಖಲೆಯನ್ನು ನೀಡಬಲ್ಲದು. ಹೀಗಾಗಿ ಪ್ರಾಗೈತಿಹಾಸಿಕ ಕಾಲದ ಆದಿಮಾನವನ ಮತ್ತು ಜನಪದರ ಬೆಳದಿಂಗಳ ಚಿತ್ರಕಲೆಗಳು ಪ್ರಾಚೀನವಾದವುಗಳೆಂದು ಇಲ್ಲಿ ಭಾವಿಸಲಾಗಿದೆ. ಹೀಗೆ ಭಾವಿಸಲು ಮುಖ್ಯ ಕಾರಣ, ಆದಿಮಾನವನು ಪ್ರಕೃತಿಯಲ್ಲಿ ಜರುಗುವ ಬದಲಾವಣೆಗೆ ಭಯಪಟ್ಟುಕೊಂಡು ಕೆಲವು ಆಚರಣೆಗಳನ್ನು ತಂದನು. ಅಂತಹ ಆಚರಣೆಗಳಲ್ಲಿ ಚಿತ್ರಕಲೆಯೂ ಒಂದು. ಇದೇ ಮುಂದೆ ಒಂದು ಕಲೆಯಾಗಿ ಬೆಳವಣಿಗೆ ಹೊಂದಿತು. ಜನಪದರು ಅಷ್ಟೆ ಗೋಡೆಯ ಮೇಲೆ ಬೆಳದಿಂಗಳ ಹಬ್ಬದ ಸಂದರ್ಭದಲ್ಲಿ ಬಿಡಿಸುವ ಚಿತ್ರಗಳ ಆಚರಣೆಯ ಭಾಗವಾಗಿ ಮೂಡಿರುವುದು.

ಈ ಹಿನ್ನೆಲೆಯಲ್ಲಿಯೇ ಕರ್ನಾಟಕದಲ್ಲಿ ಪ್ರಾಚೀನ ಚಿತ್ರಕಲೆಯ ವಿವರಗಳು ಸಾಕಷ್ಟು ದೊರೆಯುತ್ತವೆ. ಆದಿಮಾನವನ ಮೊದಲ ಪಾಠ ಶುರುವಾಗಿದ್ದು ಚಿತ್ರಕಲೆಯ ಮೂಲಕವಾಗಿ. ಭಾಷಾ ಉಗಮ ಪೂರ್ವದಲ್ಲಿ ಚಿತ್ರಕಲೆಯು ಅದರ ಸ್ಥಾನವನ್ನು ತುಂಬಿತ್ತು. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಬೇರೆ ಬೇರೆ ಪ್ರಕಾರದ ಚಿತ್ರಕಲೆಗಳು ಅಸ್ತಿತ್ವದಲ್ಲಿದ್ದರೂ ಪ್ರಧಾನವಾಗಿ ಆದಿಮಾನವನ ಚಿತ್ರಕಲೆ ಮತ್ತು ಬೆಳದಿಂಗಳ ಚಿತ್ರಕಲೆಯನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ದೃಷ್ಟಿಯಿಂದ ಕರ್ನಾಟಕದಲ್ಲಿ ಕಂಡುಬರುವ ಪ್ರಾಚೀನ ಚಿತ್ರಕಲೆಯನ್ನು ಪರಿಶೀಲಿಸಬಹುದಾಗಿದೆ.

ಇನ್ನು ಪಿಥೋರಾ ಚಿತ್ರಕಲೆಯು ಕರ್ನಾಟಕದಲ್ಲಿ ಆಚರಿಸುವ ಬೆಳದಿಂಗಳ ಹಬ್ಬಕ್ಕಿಂತ ವಿಭಿನ್ನವಾಗಿ ಆಚರಿಸುವ ಒಂದು ಚಿತ್ರಕಲಾ ಪರಂಪರೆಯ ಹಬ್ಬ. ಸಂಪ್ರದಾಯಬದ್ಧವಾಗಿ ಅನೇಕ ತಲೆಮಾರುಗಳಿಂದ ಬಿಲ್ ಬುಡಕಟ್ಟು ಜನರು ಆಚರಿಸುತ್ತಿರುವ ಹಬ್ಬ. ಈ ಹಬ್ಬದಲ್ಲಿ ಪಿಥೋರಾ ಚಿತ್ರ ರಚನೆಯೇ ವಿಶೇಷವಾದದ್ದು. ಪಿಥೋರಾ ಚಿತ್ರ ರಚನೆಯಲ್ಲಿ ಎರಡು ಮಾದರಿಗಳನ್ನು ನೋಡಬಹುದು.

೧. ಸಂಪ್ರದಾಯಬದ್ಧ ಪಿಥೋರಾ ಚಿತ್ರಕಲೆ

೨. ಪಿಥೋರಾ ಚಿತ್ರಕಲೆಯ ರೂಪಾಂತರ

**೧. ಸಂಪ್ರದಾಯಬದ್ಧ ಪಿಥೋರಾ ಚಿತ್ರಕಲೆ:**

ಈ ಚಿತ್ರಕಲೆಯಲ್ಲಿ ಬುಡಕಟ್ಟು ಜನರು ಯಾವುದೇ ಬದಲಾವಣೆಯಿಲ್ಲದೆ ಬಡವಾ ಹೇಳಿದಂತೆ ಚಿತ್ರ ರಚಿಸಬೇಕು. ಇದೊಂದು ಸಂಪ್ರದಾಯ ಮತ್ತು ಸಂಸ್ಕೃತಿಯ ನೆಲೆಗಟ್ಟಿನ ಮೇಲೆ ಬಿಡಿಸುವಂತಹದ್ದು. ಯಾವುದೇ ಕಾರಣಕ್ಕೂ ಸಂಪ್ರದಾಯವನ್ನು ಮೀರುವಂತಿಲ್ಲ. ಇದೊಂದು ಆಚರಣೆಯ ಪ್ರಕಾರವಾಗಿರುವುದರಿಂದ ನಿರ್ದಿಷ್ಟವಾಗಿ ಹೀಗೆ ರಚಿಸಬೇಕೆಂಬ ನಿಯಮವುಳ್ಳದಾಗಿರುತ್ತದೆ.

ಈ ಚಿತ್ರಕಲೆಯಲ್ಲಿ ಮತ್ತೆ ಮೂರು ಪ್ರದೇಶಗಳ ಶೈಲಿಗಳನ್ನು ಗುರುತಿಸಬಹುದು.

ಅ) ಭಾವರಾ, ಅಲಿರಾಜಪುರ, ಜಾಬುವಾ ಕ್ಷೇತ್ರಗಳ ಪಿಥೋರಾ

ಆ) ಕಟ್ಟಿವಾಡ ಪ್ರದೇಶದ ಪಿಥೋರಾ

ಇ) ಭಾಗ, ಧಾರ ಪ್ರದೇಶಗಳ ಪಿಥೋರಾ

ಈ ಮೂರು ಪ್ರದೇಶಗಳ ಪಿಥೋರಾದ ಸಂರಚನೆ ಅಲ್ಪ ಸ್ವಲ್ಪ ಭಿನ್ನತೆಯಿಂದ ಕೂಡಿದ್ದಾಗಿದೆ. ಆಚರಣೆಯ ಸ್ವರೂಪವು ಒಂದೇ ಆಗಿರುತ್ತದೆ. ಈ ಭಾಗಗಳಲ್ಲಿ ಬೇರೆ ಬೇರೆ ಸಂದರ್ಭದಲ್ಲಿ ಪಿಥೋರಾ ಆಚರಣೆಯನ್ನು ಬಿಲ್‌ರು ಮಾಡಬಹುದು. ಆದರೆ ಆಚರಣೆಯ ಸ್ವರೂಪ ಹೆಚ್ಚು ಕಡಿಮೆ ಒಂದೇ ಆಗಿರುತ್ತದೆ. ಈ ಸಾಂಪ್ರದಾಯಿಕ ಚಿತ್ರಕಲೆಯಲ್ಲಿ ಇತ್ತೀಚೆಗೆ ಆಧುನಿಕ ಬಣ್ಣಗಳನ್ನು ಬಳಸಿದರೂ ಪಿಥೋರಾ ಆಚರಣೆಯ ಸ್ವರೂಪದಲ್ಲಿ ಯಾವ ಬದಲಾವಣೆಯನ್ನು ಮಾಡಿಕೊಂಡಿಲ್ಲ.

**೨. ಪಿಥೋರಾ ಚಿತ್ರಕಲೆಯ ರೂಪಾಂತರ:**

ಹೊಸ ಆಧುನಿಕ ಉಪಕರಣಗಳನ್ನು ಮತ್ತು ಬಣ್ಣಗಳನ್ನು ಉಪಯೋಗಿಸಿ ಪಿಥೋರಾ ಬರೆಯುತ್ತಾರೆ. ಈ ಪಿಥೋರಾವು ಸಂಪ್ರದಾಯಬದ್ಧವಾದ ಪಿಥೋರಾ ಅಲ್ಲ. ಪೋಸ್ಟರ್,

ಎಕ್ರಲಿಕ್, ತೈಲವರ್ಣ ಮುಂತಾದವುಗಳಿಂದ ವಿಭಿನ್ನವಾದ ಹೊಸ ಪಿಥೋರಾವನ್ನು ಸೃಷ್ಟಿಸಿಕೊಂಡಿದ್ದಾರೆ. ಮೂಲ ಪಿಥೋರಾ ಬಿಲ್‌ರ ಒಂದು ಸಂಸ್ಕೃತಿಯಾದರೆ, ನವ ಪಿಥೋರಾ ಬಿಲ್‌ರ ರೂಪಾಂತರವಾಗಿದೆ. ಈ ರೀತಿ ರೂಪಾಂತರವಾಗಿರುವುದರಿಂದ ಪಿಥೋರಾ ಚಿತ್ರಕಾರರಿಗೆ ಹೊಸ ಚಿತ್ರಸೃಷ್ಟಿ ಸಾಧ್ಯವಾಗಿದೆ. ಇದರಿಂದ ಬಿಲ್‌ರ ಸೃಜನಶೀಲತೆ ಮತ್ತು ಕ್ರಿಯಾಶೀಲತೆಯಿಂದಾಗಿ ಅವರು ಅಂತರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಳ್ಳಲು ಇತ್ತೀಚೆಗೆ ಸಾಧ್ಯವಾಗುತ್ತಿದೆ. ಪಿಥೋರಾದ ಸಂರಚನೆ, ಪರಂಪರೆ, ಆಕೃತಿ, ಸಂದರ್ಭ, ಸನ್ನಿವೇಶ, ಬಣ್ಣ, ರೇಖೆ ವಿವರಣೆಗಳು ಪಿಥೋರಾದಲ್ಲಿ ಪ್ರವೇಶ ಪಡೆದಿವೆ.

ಈ ಎರಡು ರೀತಿಗಳು ಪಿಥೋರಾ ಚಿತ್ರಕಲೆಗೆ ಹೊಸ ಆಯಾಮವನ್ನು ನೀಡಿವೆ. ಈ ದೃಷ್ಟಿಯಿಂದ ಪಿಥೋರಾವನ್ನು ಗಮನಿಸಿದಾಗ ಆಧುನಿಕವಾಗಿ ರೂಪಾಂತರವಾಗುವ ಮೂಲಕ ತನ್ನ ಅಸ್ತಿತ್ವವನ್ನು ಇದು ಉಳಿಸಿಕೊಂಡು ಬಂದಿದೆ. ಈ ಕಲೆಯು ಬಿಲ್‌ರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಸ್ಥಿತಿಗತಿಯ ಮೇಲೆ ರಚನೆಗೊಳ್ಳುವುದು. ಹೀಗಾಗಿ ಪಿಥೋರಾ ಚಿತ್ರಕಲೆಯ ಸಂದರ್ಭದಲ್ಲಿ ಬಿಲ್‌ರ ಸಮಾಜೋ ಸಾಂಸ್ಕೃತಿಕ ಅಧ್ಯಯನವನ್ನು ಮಾಡಲಾಗಿದೆ. ಏಕೆಂದರೆ ಬಿಲ್‌ರ ಸಾಮಾಜಿಕ–ಸಾಂಸ್ಕೃತಿಕ ಜೀವನದ ನೆಲೆಗಟ್ಟಿನಲ್ಲಿ ಪಿಥೋರಾ ಅರಳುವುದು.

ಪಿಥೋರಾ ಪರಿಕಲ್ಪನೆಯು ಬಿಲ್‌ರ ಒಂದು ಧಾರ್ಮಿಕ ಆಚರಣೆ ಭಾಗವಾಗಿದೆ. ಬಿಲ್‌ರ ಬದುಕು ಪಿಥೋರಾದ ಜೊತೆ ಜೊತೆಗೆ ನಡೆಯುತ್ತದೆ. ಪಿಥೋರಾ ಚಿತ್ರಕಲೆಯು ಅವರ ಸಾಂಪ್ರದಾಯಿಕ ನಂಬಿಕೆಯಲ್ಲಿ ಜರುಗುತ್ತದೆ. ಪಿಥೋರಾವನ್ನು ಬಿಲ್‌ರು ವಿವಿಧ ಲೋಕಜಗತ್ತಿನೊಂದಿಗೆ ಜರುಗುವ ಘಟನೆಗಳನ್ನು ಆಧರಿಸಿ ರಚಿಸುವುದು ಇದೆ. ಅಲ್ಲದೇ ತಮ್ಮ ಜೀವನದ ಸಮೃದ್ಧಿಗಾಗಿಯೂ ಆಚರಿಸುವುದಾಗಿದೆ. ಸಾಂಪ್ರದಾಯಿಕ ಬಿಲ್‌ರು ಹರಕೆ, ಮಳೆ, ಮದುವೆ, ಸಮೃದ್ಧಿಯ ಅಪೇಕ್ಷೆಯ ಹಿನ್ನೆಲೆಯಲ್ಲಿ ಆಚರಿಸುವ ಹಬ್ಬ. ಈ ಹಬ್ಬವು ಊರಿನ ಎಲ್ಲರೂ ಏಕಕಾಲಕ್ಕೆ ಆಚರಿಸಿಬೇಕೆಂಬ ನಿಯಮವಿಲ್ಲ. ಆರ್ಥಿಕವಾಗಿ ಯಾವಾಗ ಸಮರ್ಥರಾಗಿರುವರೋ ಆಗ ಅದನ್ನು ವಿಜೃಂಭಣೆಯಿಂದ ಆಚರಿಸುವರು. ಆರ್ಥಿಕವಾಗಿ ಸಮರ್ಥರಾದಷ್ಟು ಪಿಥೋರಾ ವೈಭವದಿಂದ ಜರುಗುವುದು.

ಬಿಲ್‌ರನ್ನು ಹೊರತುಪಡಿಸಿದರೆ ಭಾರತದ ಬುಡಕಟ್ಟು ಸಮುದಾಯದಲ್ಲೂ ಈ ತರಹದ ಆಚರಣೆ ಕಂಡುಬರುವುದಿಲ್ಲ. ಈ ರೀತಿಯಾಗಿಯೇ ಕಂಡುಬರಬೇಕೆಂಬುವುದು ಅಪೇಕ್ಷೆಯಲ್ಲ. ಪ್ರತಿಯೊಂದು ಬುಡಕಟ್ಟಿಗೂ ತನ್ನದೇ ಆದ ಸಾಂಸ್ಕೃತಿಕ ಅಸ್ಮಿತೆ ಇರುತ್ತದೆ. ಅಂತಹ ಅಸ್ಮಿತೆಯ ಭಾಗವಾಗಿ ಬಿಲ್‌ರಲ್ಲಿ ಪಿಥೋರಾ ಕಂಡುಬರುತ್ತಿದೆ. ಪಿಥೋರಾದ ಆಚರಣೆಯ ಒಡಲೊಳಗೆ ಸಾಂಸ್ಕೃತಿಕ ಅನನ್ಯತೆಯಿದ್ದರೂ ಮೂಲತಃ ಅದಕ್ಕೆ ತನ್ನವರು ಸಮೃದ್ಧವಾಗಿರಬೇಕೆಂಬ ಆಶಯವೂ

ಇದೆ. ಹೀಗಾಗಿ ಪಿಥೋರಾ ಏಕಮುಖಿಯಾದ ಆಚರಣೆಯಲ್ಲ ಅದು ಬಹುಮುಖಿಯಾಗಿ ವಿಸ್ತಾರಗೊಳ್ಳುತ್ತದೆ. ಅಲ್ಲದೆ ಅದನ್ನು ಒಂದು ಮನೆಯಲ್ಲಿ ಅಚರಿಸಿದರೂ ತನ್ನ ಊರಿನ ಜನರನ್ನು, ಸಂಬಂಧಿಕರನ್ನು, ಬಂಧು-ಬಳಗವನ್ನು, ಪೂಜಾರಿಗಳನ್ನು, ಚಿತ್ರಕಾರರನ್ನು, ವಾದ್ಯದವರನ್ನು, ಬಲಿಕೊಡುವವರನ್ನು, ಸಾರಾಯಿ ಕಾಯಿಸುವವರನ್ನು, ಗೋಡೆಯನ್ನು ಸಿದ್ಧಪಡಿಸುವವರನ್ನು ಹೀಗೆ ಹಲವರನ್ನು ಒಳಗೊಂಡ ಚಕ್ರಬಂಧ ಕ್ರಿಯೆಯಾಗಿದೆ.

ಸಂಪ್ರದಾಯಬದ್ಧ ಪಿಥೋರಾದಲ್ಲಿ ಮನೆಯ ಅಲಂಕಾರಕ್ಕಾಗಿ ಚಿತ್ರಗಳ ರಚನೆಯ ಆಚರಣೆಯನ್ನು ಮಾಡುವುದಿಲ್ಲ. ರೂಪಾಂತರವಾದ ಪಿಥೋರಾವನ್ನು ಪ್ರಸ್ತುತದಲ್ಲಿ ಗೋಡೆಯ ಅಲಂಕಾರಕ್ಕಾಗಿ, ಕಛೇರಿಯ ಅಲಂಕಾರಕ್ಕಾಗಿ ಪಿಥೋರಾ ಕಲಾವಿದರಿಂದ ಬಿಡಿಸುವ ಪದ್ಧತಿಯು ಶುರುವಾಗಿದೆ. ಹೀಗಾಗಿ ಪಿಥೋರಾವನ್ನು ಕೇವಲ ಸಂಪ್ರದಾಯಬದ್ಧವಾದ ಆಚರಣೆಯ ದೃಷ್ಟಿಯಿಂದ ಮಾತ್ರವಲ್ಲದೇ ಹೊಸ ಕಾಲಘಟ್ಟದಲ್ಲೂ ಹೊಸ ರೀತಿಯಾಗಿ ತನ್ನನ್ನು ಬೆಳೆಸಿಕೊಳ್ಳುತ್ತಿದೆ. ಇದಕ್ಕೆ ಪ್ರಮುಖ ಕಾರಣವೆಂದರೆ, ಪಿಥೋರಾ ಕಲಾವಿದರು ಸೃಜನಶೀಲತೆ ಮತ್ತು ಕ್ರಿಯಾಶೀಲತೆಯಿಂದ ಬರೆಯುತ್ತಿರುವುದು. ತನ್ನ ಹಿಂದಿನ ತಲೆಮಾರಿನ ಹಾಗೆಯೇ ಹೊಸ ತಲೆಮಾರಿನ ಕಲಾವಿದರು ಸಂಪ್ರದಾಯಬದ್ಧವಾದ ಪಿಥೋರಾಕ್ಕೆ ಅಂಟಿಕೊಂಡು ಕುಳಿತಿಲ್ಲ. ಪಿಥೋರಾವನ್ನು ಆಚರಿಸುವ ಸಂದರ್ಭದಲ್ಲಿ ಸಾಂಪ್ರದಾಯಿಕವಾಗಿಯೇ ಇರುತ್ತಾರೆ. ಅದು ಮುಗಿದ ಮೇಲೆ ಬೇರೆ ಬೇರೆ ರೀತಿಯ ಚಿತ್ರಗಳನ್ನು ಕ್ಯಾನವಾಸ್ ಮೇಲೆಯೂ ಬರೆಯುತ್ತ ಹೊಸ ಜಗತ್ತಿಗೆ ಕಲಾವಿದರು ತೆರೆದುಕೊಳ್ಳುತ್ತಿದ್ದಾರೆ.

ಈಗಿನ ಪಿಥೋರಾ ಕಲಾವಿದರು ದೇವರ ನಂಬಿಕೆಯ ವಿಷಯವನ್ನು ತೆಗೆದುಕೊಂಡರೂ ಸಂಪೂರ್ಣವಾದ ಸನ್ನಿವೇಶವನ್ನು ನಕಲು ಮಾಡುವುದಿಲ್ಲ. ಆ ಚಿತ್ರಗಳಲ್ಲಿ ಬದಲಾವಣೆಯನ್ನು ತರಲು ಬಯಸುತ್ತಾರೆ. ತಾಂತ್ರಿಕವಾಗಿ ವಿಶೇಷ ಬದಲಾವಣೆಯನ್ನು ಮಾಡಿಕೊಂಡು ಚಿತ್ರರಚನೆ ಮಾಡುತ್ತಾರೆ. ಆ ಚಿತ್ರಗಳನ್ನು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಮಾರಾಟವನ್ನು ಬಿಲ್ ಕಲಾವಿದರು ಮಾಡುತ್ತಿದ್ದಾರೆ. ಉದಾಹರಣೆಗೆ: ಗಂಗೂಬಾಯಿಯೆಂಬ ಕಲಾವಿದೆಯ 'ಟ್ರಿ ಮ್ಯಾಟರ್ಸ್' ಚಿತ್ರಕೃತಿ. ಈ ಬುಡಕಟ್ಟು ಜನಾಂಗವು ತಮ್ಮ ಸಾಂಪ್ರದಾಯಿಕ ಕಲೆಯ ಕಟ್ಟುಪಾಡುಗಳನ್ನು ಮೀರಿ ತಮ್ಮ ಜೀವನೋಪಾಯಕ್ಕೆ ಪಿಥೋರಾವನ್ನು ರೂಪಾಂತರ ಮಾಡಿಕೊಂಡಿತು.

ಈ ಹಿನ್ನೆಲೆಯಲ್ಲಿ ಪಿಥೋರಾವನ್ನು ಸಂಪ್ರದಾಯಬದ್ಧತೆ ಮತ್ತು ರೂಪಾಂತರವೆಂಬ ಎರಡು ಭಿನ್ನ ದೃಷ್ಟಿಯಿಂದ ಕಾಣಬಹುದು. ಈ ಅಧ್ಯಯನವು ಪಿಥೋರಾ ಪರಿಕಲ್ಪನೆಯನ್ನು ಕೇವಲ ಸಂಪ್ರದಾಯಬದ್ಧವಾಗಿ ಮಾತ್ರ ಗಮನಿಸದೇ ರೂಪಾಂತರ ನೆಲೆಯಲ್ಲೂ ಗಮನಿಸಿ ಅಧ್ಯಯನ ಮಾಡಲಾಗಿದೆ. ಈ ಅರ್ಥದಲ್ಲಿ ಪಿಥೋರಾ ಪರಿಕಲ್ಪನೆಯನ್ನು ಗಮನಿಸಬೇಕಿದೆ.

ಪಿಥೋರಾದ ಬಣ್ಣ ಸಂಯೋಜನೆ, ರಚನೆ ಇತ್ಯಾದಿಗಳೆಲ್ಲವೂ ಅದರ ಸಂಯೋಜನೆಗೆ ಒಳಪಟ್ಟಿದ್ದರಿಂದ ಪಿಥೋರಾವನ್ನು ಕೇವಲ ಆಚರಣೆಯ ಭಾಗವಾಗಿಯೂ ಗಮನಿಸುವುದರ ಜೊತೆಗೆ ರೂಪಾಂತರವನ್ನು ದೃಷ್ಟಿಯಲ್ಲಿಟ್ಟುಕೊಳ್ಳಲಾಗಿದೆ.

## ೨.೨ ಚಿತ್ರಕಲೆ: ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಕರ್ನಾಟಕದಲ್ಲಿ ಚಿತ್ರಕಲೆಯನ್ನು ಕುರಿತ ಅಧ್ಯಯನಗಳು ೮೦ರ ದಶಕದ ನಂತರ ಶುರುವಾದವು. ಅದಕ್ಕೂ ಪೂರ್ವದಲ್ಲಿ ಚಿತ್ರಕಲೆಯ ಬಗ್ಗೆ ಲೇಖನಗಳು, ಕೃತಿಗಳು ಪ್ರಕಟಗೊಳ್ಳುತ್ತಿದ್ದವು. ಆದರೆ ಚಿತ್ರಕಲೆಯನ್ನು ಉದ್ದೇಶಿಸಿದ ಗಂಭೀರವಾದ ಅಧ್ಯಯನಗಳು ನಡೆದವು. ಅಂತಹ ಅಧ್ಯಯನಗಳು ಮರುಭೂಮಿಯಲ್ಲಿ ಓಯಾಸಿಸ್ಸು ಕಂಡಂತೆ ಆಗುವ ಅನುಭವವನ್ನು ಕೊಡುತ್ತಿದ್ದವು. ಇದುವರೆಗಿನ ಕರ್ನಾಟಕ ಚಿತ್ರಕಲಾ ಸಾಹಿತ್ಯದ ಬಗೆಗಿನ ಅಧ್ಯಯನಗಳನ್ನು ಈ ರೀತಿಯಾಗಿ ವಿಂಗಡಿಸಿಕೊಂಡು ಚರ್ಚಿಸಲಾಗಿದೆ.

೧. ಚಿತ್ರಕಲೆ: ಅಧ್ಯಯನಗಳ ಸಮೀಕ್ಷೆಗಳು

೨. ಚಿತ್ರಕಲೆ: ಕೃತಿಗಳ ಸಮೀಕ್ಷೆ

೩. ಚಿತ್ರಕಲೆ: ಲೇಖನಗಳ ಸಮೀಕ್ಷೆ

### ೨.೨.೧ ಚಿತ್ರಕಲೆ: ಅಧ್ಯಯನಗಳ ಸಮೀಕ್ಷೆ

ಕರ್ನಾಟಕದ ಚಿತ್ರಕಲೆಯ ಸಂದರ್ಭದಲ್ಲಿ ಹಸ್ತಪ್ರತಿಯ ಮೂಲಕ ಚಿತ್ರಕಲೆಯನ್ನು ಕುರಿತು ಅಧ್ಯಯನವನ್ನು ಮಾಡಲಾಗಿದೆ. ಹಸ್ತಪ್ರತಿಗಳು ಪ್ರಾಚೀನ ಕಾಲದಲ್ಲಿನ ಚಿತ್ರಕಲೆ ಮತ್ತು ಸಾಹಿತ್ಯಕ್ಕೆ ಇರುವ ಸಂಬಂಧಗಳನ್ನು ತನ್ನಲ್ಲಿ ಅವಿತುಕೊಂಡಿವೆ. ಈ ಹಿನ್ನೆಲೆಯಲ್ಲಿ ಬಿ. ಕೆ. ಹಿರೇಮಠ ಅವರು 'ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ' ಎಂಬ ವಿಷಯದ ಮೇಲೆ ಪಿ. ಎಚ್.ಡಿ ಯನ್ನು ಮಾಡಿದ್ದಾರೆ. ಈ ಪ್ರಂಬಂಧದಲ್ಲಿ ಒಟ್ಟು ಹತ್ತು ಅಧ್ಯಾಯಗಳಿವೆ. ಈ ಅಧ್ಯಾಯಗಳಲ್ಲಿ ಏಳನೆಯ ಅಧ್ಯಾಯ ಚಿತ್ರಕಲೆಗೆ ಸಂಬಂಧಿಸಿದ್ದಾಗಿದೆ. ಈ ಅಧ್ಯಾಯದಲ್ಲಿ ವಿಶಿಷ್ಟ ಕಲೆ ಪತ್ರಚ್ಛೇದನ, ಚಿತ್ರರಚನೆಗೆಳ ವಿಂಗಡಣೆ, ಅಲಂಕಾರಿಕ ನಕ್ಷಾರಚನೆಗಳು, ಸಾಂದರ್ಭಿಕ ಚಿತ್ರರಚನೆಗಳು, ಅಲಂಕಾರ ರಚನೆಗಳು, ಉದ್ದೇಶಿತ ಅಲೆಕಾರ ರಚನೆಗಳು, ಶಸ್ತ್ರ ಸಂಬಂಧಿ ರಚನೆಗಳು, ಕಥಾ ಸಂಬಂಧಿ ಚಿತ್ರರಚನೆಗಳು ಎನ್ನುವ ನೆಲೆಗಳನ್ನಿಟ್ಟುಕೊಂಡು ಪರಿಶೀಲಿಸಿದ್ದಾರೆ. ವರ್ಣಚಿತ್ರಕಲೆ ಎನ್ನುವ ವಿಭಾಗದಲ್ಲಿ ಚಿತ್ರಕಲೆಯ ಹಿನ್ನೆಲೆ, ಚಿಕಣಿ ಚಿತ್ರಕಲೆ, ಭಾರತ ಮತ್ತು ಕರ್ನಾಟಕದಲ್ಲಿನ ಚಿತ್ರಕಲೆ ಬೆಳೆದು ಬಂದ ರೀತಿ, ವರ್ಣಚಿತ್ರಗಳ ವಿಂಗಡಣೆ,

ಚಿತ್ರಕಾರರ ಉಲ್ಲೇಖ, ಚಿತ್ರರಚನೆಯ ಹಂತಗಳು, ಸಿದ್ಧತಾ ರಂಗ, ಸಮತಲ ನಿರ್ಮಾಣ, ವರ್ಣಸಾಮಗ್ರಿ, ಅವುಗಳ ತಯಾರಿಕೆ, ಕುಂಚಗಳ ತಯಾರಿಕೆ, ಪ್ರಕಾರಗಳು, ಚಿತ್ರದ ವಸ್ತು-ವಿಷಯಗಳು, ಚಿತ್ರಕಾರನ ಸಮಸ್ಯೆಗಳು ಹೀಗೆ ಚಿತ್ರಕಲೆಯನ್ನು ಹಲವು ವಿನ್ಯಾಸಗಳೊಂದಿಗೆ ಚರ್ಚಿಸಲಾಗಿದೆ.

ಈ ಅಧ್ಯಯನ ಹಸ್ತಪ್ರತಿಯಿಂದ ಆರಂಭವಾಗಿ ಚಿತ್ರಕಲೆಯ ಅಧ್ಯಾಯದಿಂದ ಮುಕ್ತಾಯವಾಗುತ್ತದೆ. ಪ್ರಾಚೀನ ಕಾಲದಲ್ಲಿ ದೇವಸ್ಥಾನಗಳಲ್ಲಿ, ಅರಮನೆಗಳಲ್ಲಿ ಚಿತ್ರಗಳನ್ನು ಪ್ರಸಿದ್ಧ ಚಿತ್ರಕಾರರು ರಚಿಸುತ್ತಿದ್ದರು. ಈ ಚಿತ್ರಗಳು ಆಂತರಿಕ ಕದನ, ಮುಸ್ಲಿಂ ಕದನ ದಾಳಿಗಳಿಂದ ನಾಶವಾಗುತ್ತಿದ್ದವು. ಈ ನಾಶವನ್ನು ತಪ್ಪಿಸಲು ಹಸ್ತಪ್ರತಿಗಳಲ್ಲಿ, ಓಲೆಗರಿಗಳಲ್ಲಿ ಚಿತ್ರಕಲೆಯು ಆರಂಭವಾಯಿತು. ಈ ನೆಲೆಯಿಂದ ಬಿ. ಕೆ. ಹಿರೇಮಠರು ಹಸ್ತಪ್ರತಿಗಳ ಅಧ್ಯಯನದ ಜತೆಗೆ ಚಿತ್ರಕಲೆಯನ್ನು ಅಧ್ಯಯನ ಮಾಡಿರುವುದು ಮಹತ್ತರವಾದ ಸಂಗತಿಯಾಗಿದೆ.

'ಕರ್ನಾಟಕದ ಜನಪದ ಚಿತ್ರಕಲೆ' ಎನ್ನುವ ಎಸ್. ಸಿ. ಪಾಟೀಲರ ಪ್ರಬಂಧವು ಕನ್ನಡದಲ್ಲಿ ಚಿತ್ರಕಲೆಗೆ ಸಂಬಂಧಿಸಿದ ಮೊದಲ ಪಿಎಚ್.ಡಿ ಮಹಾಪ್ರಬಂಧವಾಗಿದೆ. ಈ ಪ್ರಬಂಧದಲ್ಲಿ ಒಟ್ಟು ಏಳು ಅಧ್ಯಾಯಗಳಿವೆ. ಅಧ್ಯಾಯ ಎರಡರಲ್ಲಿ ಜನಪದ ಚಿತ್ರಕಲೆ ಮತ್ತು ಶಿಷ್ಟ ಪದ ಚಿತ್ರಕಲೆಯನ್ನು ತೌಲನಿಕವಾಗಿ ಅಧ್ಯಯನ ಮಾಡಿದ್ದಾರೆ. ಕಲೆಯ ಅರ್ಥ, ಉಗಮ, ವಿಕಾಸ, ಕಲೆಯ ಪ್ರಕಾರಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಕ್ಷೇತ್ರಾಧ್ಯಯನದ ಮೂಲಕ ರೂಪುಗೊಂಡ ಮಹಾಪ್ರಬಂಧವದು.

ಮೂರನೆಯ ಅಧ್ಯಾಯದಲ್ಲಿ ಜನಪದ ಚಿತ್ರಕಲೆಯ ಇತಿಹಾಸವನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಪ್ರಾಗ್ಯೈತಿಹಾಸಿಕ ಚಿತ್ರಕಲೆಗಳಾದ ಬಯಲು ಬಂಡೆಯ ಚಿತ್ರಗಳು, ಗವಿವರ್ಣಚಿತ್ರಗಳು, ಭಿತ್ತಿಚಿತ್ರಗಳು, ಮುಂತಾದವುಗಳು ಉತ್ತರ ಕರ್ನಾಟಕವನ್ನು ಕ್ಷೇತ್ರಕಾರ್ಯವಾಗಿಸಿಕೊಂಡು ಶೋಧಿಸಿದ್ದಾರೆ. ಕನ್ನಡ ಗ್ರಂಥಗಳಲ್ಲಿ ಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ಜನಪದ ಮೂಲದ ಹಸ್ತಪ್ರತಿ ಚಿತ್ರಗಳು, ವರ್ಗೀಕರಣಗಳನ್ನು ಮಾಡಿಕೊಂಡು ಅಧ್ಯಯನ ಮಾಡಿದ್ದಾರೆ.

ಅಧ್ಯಾಯ ನಾಲ್ಕರಲ್ಲಿ ಸೌಂದರ್ಯಮೂಲ ಜನಪದ ಚಿತ್ರಕಲೆಯಲ್ಲಿ ಹಚ್ಚೆ, ಕೌದಿ, ಮೆಹಂದಿ, ಇತ್ಯಾದಿಗಳನ್ನು, ಅಧ್ಯಾಯ ಐದರಲ್ಲಿ ಧರ್ಮ ಮೂಲ ಜನಪದ ಚಿತ್ರಕಲೆಯಲ್ಲಿ ಬೆಳದಿಂಗಳ ಚಿತ್ರಕಲೆ, ರಂಗೋಲಿ ಚಿತ್ರಕಲೆ, ಸೀಗೆಹುಣ್ಣಿಮೆಯಲ್ಲಿ ಬಿಡಿಸುವ ಬುಟ್ಟಿಯ ಮೇಲಿನ ಚಿತ್ರ, ಇತ್ಯಾದಿಗಳು ಧರ್ಮಮೂಲವೆಂದು ಗುರುತಿಸಿದ್ಧಾರೆ, ವೃತ್ತಿಮೂಲದಿಂದಲೂ ಜನಪದ ಚಿತ್ರಕಲೆಯನ್ನು ಆರನೆಯ ಅಧ್ಯಾಯದಲ್ಲಿ ಮಾಡಿದ್ದಾರೆ. ಹೀಗೆ 'ಕರ್ನಾಟಕದ ಜನಪದ ಚಿತ್ರಕಲೆಯ ವಿಷಯದಲ್ಲಿ ಸಾಧ್ಯಂತವಾಗಿ ಚಿತ್ರಕಲೆಯನ್ನು ವಿವರಿಸುವ ಪ್ರಯತ್ನವನ್ನು ಅಧ್ಯಯನಕಾರರು ಮಾಡಿರುವರು.

'ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು' ಎಂಬ ಸಂಶೋಧನಾ ಪ್ರಂಬಂಧವನ್ನು ಅ. ಲ. ನರಸಿಂಹನ್ ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿ ಪದವಿ ಪಡೆದಿದ್ದಾರೆ. ಈ ಪ್ರಬಂಧದಲ್ಲಿ ಒಟ್ಟು ೮ ಅಧ್ಯಾಯಗಳಿವೆ, ಎರಡನೆಯ ಅಧ್ಯಾಯದಿಂದ ಏಳನೆಯ ಅಧ್ಯಾಯದವರೆಗೆ ಕ್ರಮವಾಗಿ ಚಿತ್ರಕಲೆಯ ಸಾಮಾಜಿಕ ಅಂಶಗಳು, ಚಿತ್ರಕಲೆಯಲ್ಲಿ ಧಾರ್ಮಿಕ ಅಂಶಗಳು, ಲಲಿತಕಲೆಗಳೊಂದಿಗೆ ಸಹಸಂಬಂಧದ ಅಂಶಗಳು, ಇತಿಹಾಸ ಮತ್ತು ಚಿತ್ರಕಲೆ. ಕಲಾಪರಿಕರಗಳು, ಕಲೆ ಮತ್ತು ಕಲಾವಿದನ ಚಿತ್ರಕಲಾಶೈಲಿಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಈ ಅಧ್ಯಯನವು ತುಂಬಾ ವಿಶಿಷ್ಟವಾಗಿದೆ ಬೌದ್ಧ, ಜೈನ, ಶೈವ, ವೈಷ್ಣವ, ಇಸ್ಲಾಂ, ಕ್ರೈಸ್ತ ಧರ್ಮದ ವಿವಿಧ ಕಲಾಘಟ್ಟದ ಚಿತ್ರಗಳನ್ನು ವಿಶ್ಲೇಷಿಸಿದೆ. ವಿವಿದ ಯುದ್ಧಗಳ ಮುಖೇನ ಚಿತ್ರಕಲೆಯಲ್ಲಿ ವಿಶ್ಲೇಷಿಸಿಕೊಂಡಿರುವುದನ್ನು ಈ ಪ್ರಬಂಧವು ಸಮರ್ಥವಾಗಿ ನಿಭಾಯಿಸಿದೆ.

'ಹಿಂದೂಸ್ತಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು' ಎನ್ನುವ ಅಧ್ಯಯನವು ಎರಡು ಲಲಿತಕಲಾ ಪ್ರಕಾರಗಳ ಸಂಯುಕ್ತ ಅಧ್ಯಯನವಾಗಿದೆ. ಈ ಅಧ್ಯಯನವನ್ನು ಸಂಪದಾ ಭಟ್ಟ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಪಿಎಚ್. ಡಿ ಪದವಿ ಪಡೆದಿದ್ದಾರೆ. ಸಂಗೀತದ ಅಂಶಗಳನ್ನು ಬಳಸಿಕೊಂಡು ರಚನೆಯಾದ ಚಿತ್ರಗಳಿಗೆ 'ರಾಗಮಾಲಾ ಚಿತ್ರಗಳು' ಎಂದು ಕರೆಯುತ್ತಾರೆ. ಇದು ಸಂಗೀತ ಮತ್ತು ಚಿತ್ರಕಲೆ ಎರಡೂ ಶಿಸ್ತುಗಳ ಅಧ್ಯಯನವಾಗಿದೆ. ಈ ಪ್ರಬಂಧವು ೮ ಅಧ್ಯಾಯಗಳಲ್ಲಿ ಹರಹನ್ನು ಚಾಚಿಕೊಂಡಿದೆ.

ಅಧ್ಯಾಯ ೨ರಲ್ಲಿ ಮಾರ್ಗ ಸಂಗೀತ ಮತ್ತು ದೇಸಿ ಸಂಗೀತವೆಂದು ವಿಭಾಗಿಸಿಕೊಂಡು ಭಾರತೀಯ ಸಂಗೀತವನ್ನು ಅಧ್ಯಯನ ಮಾಡಲಾಗಿದೆ. ಸಾಹಿತ್ಯದಲ್ಲಿರುವ ಹಾಗೆಯೇ ಇಲ್ಲಿಯೂ ಮಾರ್ಗ ಸಂಗೀತವು ಕಟ್ಟು-ನಿಟ್ಟಿನ ನೀತಿ-ನಿಯಮದಿಂದ ಕೂಡಿದ್ದಾಗಿದೆ. ಇದು ಸಾಮಾನ್ಯ ಜನರ ಸಂಗೀತವಲ್ಲ, ಆದರೆ ದೇಸಿ ಸಂಗೀತ ಈ ನೆಲೆಯಲ್ಲಿ ಜನಸಾಮಾನ್ಯರಿಂದಲೇ ಈ ಅಧ್ಯಯನದಲ್ಲಿ ರೂಪಿಸಲಾಗಿದೆ.

ಅಧ್ಯಯನ ಮೂರರಲ್ಲಿ ಪ್ರಾಚೀನ ಗುಹಾಚಿತ್ರಗಳಿಂದ ಶುರುವಾಗಿರುವ ಚಿತ್ರಕಲೆಯಿಂದ ಹಿಡಿದು, ಚಿತ್ರಕಲೆಯ ಐತಿಹಾಸಿಕ ಬೆಳವಣಿಗೆಯನ್ನು ಹೇಳಲಾಗಿದೆ. ರಾಗಮಾಲಾ ಚಿತ್ರಕಲೆಯ ಇತಿಹಾಸವನ್ನು ಇಲ್ಲಿ ವಿಶ್ಲೇಷಿಸಿದ್ದಾರೆ. ಅಧ್ಯಯನ ನಾಲ್ಕು ಮತ್ತು ಐದು ಸಂಗೀತಕ್ಕೆ ಸಂಬಂಧಿಸಿದ ಅಧ್ಯಯನಗಳಾಗಿವೆ. ಋತುಮಾನಗಳಿಗೆ ತಕ್ಕಂತೆ ಸಂಗೀತ, ಸಂಗೀತಪ್ರಧಾನ ಚಿತ್ರಗಳ ರಚನೆಯ ವಿವರಗಳು ಐದನೇಯ ಅಧ್ಯಾಯದಲ್ಲಿವೆ. ಇಲ್ಲಿ ಚಿತ್ರದ ರೇಖಾವಿನ್ಯಾಸ, ಬಣ್ಣಗಾರಿಕೆ ಮತ್ತು ವಿಷಯದ ಸಂಯೋಜನೆಯ ರೀತಿ, ಪ್ರಭಾವ, ಪ್ರೇರಣೆ, ಮತ್ತು ಪ್ರಮುಖ ಲಕ್ಷಣಗಳನ್ನು ಬಿಂಬಿಸಲಾಗಿದೆ. ಕರ್ನಾಟಕದ ದಖ್ಖನಿ ಚಿತ್ರಶೈಲಿ, ಸುರಪೂರ ಶೈಲಿ, ಮೈಸೂರು ಶೈಲಿಯ

ಚಿತ್ರಗಳನ್ನು ಉಲ್ಲೇಖಿಸಲಾಗಿದೆ. ಆರು ಮತ್ತು ಏಳನೇಯ ಅಧ್ಯಾಯಗಳು ರಾಗಮಾಲಾ ಚಿತ್ರಗಳು ಚಿತ್ರಕಲೆಗೂ ಮತ್ತು ಸಂಗೀತಕ್ಕೂ ಉಪಯೋಗವಾದ ಗಮನಾರ್ಹ ಕೃತಿಗಳಾಗಿವೆ. ಇಲ್ಲಿ ಚಿತ್ರಕಲೆಯ ಪ್ರಾಚೀನ ಗ್ರಂಥಗಳನ್ನು ಅಧ್ಯಯನಕ್ಕೆ ಒಳಪಡಿಸಿರುವುದು ವಿಶೇಷವಾಗಿದೆ.

'ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ: ಒಂದು ಅಧ್ಯಯನ' ಎಂಬ ಅಧ್ಯಯನವು ಯಾದಪ್ಪಾ ಪರದೇಶಿಯವರದ್ದಾಗಿದೆ. ಈ ಅಧ್ಯಯನದಲ್ಲಿ ಎಂಟು ಅಧ್ಯಾಯಗಳಿವೆ. ಈ ಕೃತಿಯು ಭಿತ್ತಿ ಚಿತ್ರಗಳ ಸ್ವರೂಪನ್ನು ಹೇಳಿದೆ ಅದರ ಇತಿಹಾಸವನ್ನು ಕರ್ನಾಟಕ, ಭಾರತ, ಪ್ರಪಂಚದ ಮಟ್ಟದಲ್ಲಿ ವಿಶ್ಲೇಷಿಸಿರುವುದು ಗಮನಾರ್ಹವಾಗಿದೆ. ಈ ಅಧ್ಯಯನವು ಭಿತ್ತಿ ಚಿತ್ರಕಲಾ ಪರಂಪರೆಯನ್ನು ಕರ್ನಾಟಕ ರಾಜವಂಶದವರು ಬೆಳೆಸಿರುವದನ್ನು ಹುಡುಕಾಡಿದೆ. ಆ ರಾಜವಂಶದ ಕಾಲದಲ್ಲಿನ ಕವಿಗಳು, ಪಂಡಿತರು ರಚಿಸಿದ ಕಾವ್ಯ, ಶಾಸ್ತ್ರಗಳನ್ನು ಈ ಅಧ್ಯಯನವು ಪರಿಶೀಲಿಸಿದೆ. ಚಿತ್ರರಚನೆಯ ಸ್ವರೂಪ ಮತ್ತು ಪರಿಕರಗಳ ಬಗ್ಗೆ ಮಾಹಿತಿಯನ್ನು ನೀಡಿದೆ. ಪ್ರಾಗೈತಿಹಾಸ ಭಿತ್ತಿಚಿತ್ರಕಲೆ, ಶಿಷ್ಟಪದ ಚಿತ್ರಕಲೆ, ಜನಪದ ಭಿತ್ತಿ ಚಿತ್ರಕಲೆಯೆಂದು ವಿಭಾಗ ಮಾಡಿಕೊಂಡಿದೆ.

'ಕರ್ನಾಟಕದ ಬುಟಕಟ್ಟು ಚಿತ್ರಕಲೆ' ಎಂಬ ಪ್ರಬಂಧವು ಎಂ. ಕೆ. ಗಿರೀಶಕುಮಾರ ರವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಪಿಎಚ್.ಡಿ. ಪದವಿ ಪಡೆದಿದೆ. ಕರ್ನಾಟಕದಲ್ಲಿ ಚಿತ್ರಕಲೆಯನ್ನು ಕುರಿತು ಬುಡಕಟ್ಟು ಜನಾಂಗದ ನೆಲೆಯಿಂದ ಅಧ್ಯಯನಗಳು ನಡೆದಿಲ್ಲ. ಕರ್ನಾಟಕದಲ್ಲಿ ಅನೇಕ ಬುಡಕಟ್ಟು ವಿಶೇಷವಾದ ಆಚರಣೆಗಳೊಂದಿಗೆ ನಡೆಯುತ್ತವೆ. ಅಂತಹ ಆಚರಣೆ ಸಂದರ್ಭದಲ್ಲಿ ಚಿತ್ರಕಲೆಯು ಮಹತ್ತರ ಪಾತ್ರ ವಹಿಸಿರುತ್ತದೆ. ಈ ಅಧ್ಯಯನವು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಕಲೆಯ ಉಗಮ, ವಿಕಾಸ, ಚಿತ್ರಕಲೆಯ ಆರಂಭದ ಘಟ್ಟ, ಐತಿಹಾಸಿಕ ಚಿತ್ರಕಲೆ, ಆಧುನಿಕ ಚಿತ್ರಕಲೆ, ಜನಪದ ಚಿತ್ರಕಲೆ, ಶಿಷ್ಟಪದ ಚಿತ್ರಕಲೆ, ಬುಡಕಟ್ಟು ಚಿತ್ರಕಲೆ ಹೀಗೆ ವಿಭಜಿಸಿಕೊಂಡು, ಬುಡಕಟ್ಟು ಚಿತ್ರಕಲೆಯ ಭಿನ್ನತೆಗಳನ್ನು, ವಿನ್ಯಾಸಗಳನ್ನು ಈ ಅಧ್ಯಯನವು ಮಾಡಿದೆ. ಅವರು ಹಾಲಕ್ಕಿ, ಕುಣಬಿ, ಗೌಳಿಗ, ಯರವರು, ಕಾಡು ಕುರುಬ, ಜೇನುಕುರುಬ, ಸೋಲಿಗ, ಹಲಸ ಮತ್ತು ದೀವ ಬುಡಕಟ್ಟು ಜನಸಮುದಾಯಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಅವರು ಚಿತ್ರಕಲೆಯನ್ನು ಚಿತ್ರಿಸುವುದು ಯಾವುದರ ಮೇಲೆ ಎಂಬುದನ್ನು ಹುಡುಕಾಡಿದ್ದಾರೆ. ಬಣ್ಣ ತಯಾರಿಸುವುದನ್ನು ಕ್ಷೇತ್ರ ಕಾರ್ಯದಲ್ಲಿ ಕಂಡುಕೊಂಡಿದ್ದಾರೆಂದು ಅವರ ಅಧ್ಯಯನವು ಸಾಬೀತುಪಡಿಸಿದೆ.

'ಕೊಪ್ಪಳ-ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ' ಎಂಬ ಪಿಎಚ್.ಡಿ. ಪ್ರಬಂಧವು ಶರಣಬಸಪ್ಪಾ ಕೋಲ್ಕಾರ ಅವರದ್ದಾಗಿದೆ. ಈ ಪ್ರಬಂಧವನ್ನು ಅವರು 'ಶಿಲಾಯುಗದ ಗವಿಚಿತ್ರಗಳು' ಎಂದು ಕೃತಿರೂಪದಲ್ಲಿ ಪ್ರಕಟಿಸಿದ್ದಾರೆ. ಅವರು ಗವಿವರ್ಣ ಮತ್ತು ಬಯಲು

ಬಂಡೆಗಳನ್ನು ಅನುಲಕ್ಷಿಸಿ ಅಧ್ಯಯನ ಮಾಡಿದ್ದಾರೆ. ಅವರು ಎಂಟು ಅಧ್ಯಾಯಗಳಲ್ಲಿ ತಮ್ಮ ಅಧ್ಯಯನವನ್ನು ವಿಶ್ಲೇಷಿಸಿದ್ದಾರೆ. ೧. ಪೀಠಿಕೆ ೨. ಪ್ರಾಗೈತಿಹಾಸ ಕಾಲದ ಕಲೆ: ಹಿಂದಿನ ಶೋಧನೆ, ಅಧ್ಯಯನ, ನೆಲೆಗಳು. ೩. ಕೊಪ್ಪಳ ಹಂಪಿ ಪ್ರದೇಶದ ಪರಿಚಯ ೪. ಕೊಪ್ಪಳ ಹಂಪಿ ಪ್ರದೇಶದ ಕಲಾನೆಲೆಗಳೆಂಬ ಅಧ್ಯಾಯದಲ್ಲಿ ಕೊಪ್ಪಳ ಹಂಪಿ ಪ್ರದೇಶಗಳಲ್ಲಿ ೬೯ ಹೊಸದಾಗಿ ಬಯಲು ಬಂಡೆಯ ಚಿತ್ರಗಳನ್ನು ಪತ್ತೆ ಹಚ್ಚಿದ್ದಾರೆ, ಇದು ಇವರ ಸಂಶೋಧನೆಯ ಮಹತ್ತರವಾದ ಮೈಲುಗಲ್ಲಾಗಿದೆ. ೫. ಚಿತ್ರಗಳ ವಿಷಯ, ವಿಶ್ಲೇಷಣೆ ಅಧ್ಯಾಯದಲ್ಲಿ ಚಿತ್ರಗಳ ಪರಿಚಯ ವಿವರಣೆಯಿದೆ ೬. ಚಿತ್ರಗಳ ತಾಂತ್ರಿಕ ವಿಶ್ಲೇಷಣೆ, ಪ್ರಾಚೀನ ಮಾನವನ ನೆಲೆಯ ಆಯ್ಕೆ, ಸಾಮಗ್ರಿ ವಿಧಾನ, ಶೈಲಿ, ಪ್ರಮಾಣ, ರಚನಾ ಉದ್ದೇಶಗಳನ್ನು ವಿಶ್ಲೇಷಿಸಿದ್ದಾರೆ. ೭. ಚಿತ್ರಗಳ ಕಾಲಮಾನ ೮. ಸಮಾರೋಪ

ಈ ಪ್ರದೇಶದ ಚಿತ್ರವು ಸರಳವಾಗಿವೆ. ಇವುಗಳ ವಿನ್ಯಾಸ ತುಂಬಾ ವಿಭಿನ್ನವಾಗಿ ಬಂದಿದೆ. ಚಿತ್ರಕಲೆಯ ಬೆಳವಣಿಗೆಗೆ ಆದಿಮಾನವನ ಪೂರ್ವ ಪೀಠಿಕೆಯಂತಿರುವುದೇ ಇಲ್ಲಿ ಕಂಡುಬರುವ ಗವಿವರ್ಣ ಚಿತ್ರಗಳು ಎಂದರೆ ತಪ್ಪಾಗಲಾರದು. ಈ ದೃಷ್ಟಿಯಿಂದ ಈ ಸಂಶೋಧನೆಯು ಪ್ರಾಗೈತಿಹಾಸಿಕ ಚಿತ್ರಕಲೆಯ ಉಗಮ, ವಿಕಾಸ, ಮಹತ್ವ, ಶೈಲಿಯನ್ನು ಕುರಿತು ಬೆಳಕು ಚೆಲ್ಲಿದೆ.

'ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ' ಎಂಬ ವಜೀರ್ ಬಾಷಾ ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಈ ಪದವಿಯನ್ನು ಪಡೆದಿದ್ದಾರೆ. ಇದರಲ್ಲಿ ೯ ಅಧ್ಯಾಯಗಳಿವೆ. ಕರ್ನಾಟಕದಲ್ಲಿ ಬೀದರ, ಗುಲ್ಬರ್ಗಾ, ರಾಯಚೂರು, ಬಿಜಾಪೂರ, ಸವಣೂರು, ಶ್ರೀರಂಗಪಟ್ಟಣ, ಮೈಸೂರಿನಲ್ಲಿ ಆಳ್ವಿಕೆ ನಡೆಸಿದ್ದರು. ಆ ಸಂದರ್ಭದಲ್ಲಿ ಅವರು ಚಿತ್ರಕಲೆಗೆ ಪ್ರೋತ್ಸಾಹ ನೀಡಿದ್ದಾರೆ. ಮುಸ್ಲಿಂರ ಸಮಾಧಿ, ದರ್ಗಾ, ಭವನ, ಅರಮನೆಗಳಲ್ಲಿ ಚಿತ್ರಕಲೆಗಳನ್ನು ಹೆಚ್ಚಾಗಿ ಕಾಣಬಹುದು. ಈ ಹಿನ್ನೆಲೆಯಲ್ಲಿ ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆಯ ಚಾರಿತ್ರಿಕ ಬೆಳವಣಿಗೆಯನ್ನು ಗುರುತಿಸಲು ಈ ಅಧ್ಯಯನವು ಪ್ರಯತ್ನಿಸಿದೆ. ಈ ಅಧ್ಯಯನದಲ್ಲಿ ಹಸ್ತಪ್ರತಿ ಚಿತ್ರಕಲೆಯನ್ನು ವಿಶ್ಲೇಷಿಸಿದ್ದಾರೆ. ಹಸ್ತಪ್ರತಿಯಲ್ಲಿ ಚಿತ್ರವನ್ನು ಬಿಡಿಸುವ ಬಗೆ, ವರ್ಣಲೇಪನದ ಬಗ್ಗೆ ಇಲ್ಲಿ ವಿವರಿಸಿದ್ದಾರೆ. ತೌಲನಿಕವಾದ ಅಧ್ಯಾಯವನ್ನು ವಿಭಿನ್ನ ಪ್ರಾಂತ್ಯದ ಮುಸ್ಲಿಂರ ಚಿತ್ರಗಳನ್ನು ಕುರಿತು ಅಧ್ಯಯನಕಾರರು ಮಾಡಿದ್ದಾರೆ. ಅವರು ಲೋಹದ ಮೇಲಿನ ಚಿತ್ರಕಲೆಯ ಬಗ್ಗೆ ವಿವರಿಸಿದ್ದಾರೆ. ಬಟ್ಟೆ, ಗಂಟೆ, ಆಯುಧ, ತೋಪು, ಶಿರಸ್ತ್ರಾಣ, ಕವಚಗಳಲ್ಲಿ ಚಿತ್ರಗಳನ್ನು ಬಿಡಿಸಿದ್ದಾರೆ. ಕುಂಭಕಲೆ, ಕೌಷ್ಟಕಲೆ, ಗಂಜೀಪಕಲೆ, ಹಸ್ತಿದಂತ, ಲೇಖನಕಲೆಗಳ ಮೇಲೆ ಇಸ್ಲಾಂಮಿಕ್ ಸಂಸ್ಕೃತಿಯ ಪ್ರಭಾವವಿರುವುದನ್ನು ಗುರುತಿಸಿದ್ದಾರೆ.

ಇಷ್ಟೇ ಅಲ್ಲದೆ, ಕ.ವಿ.ವಿ. ೨೦೦೪ – ಶಶಿಕಲಾ ಹೂಗಾರ ಅವರ "ಕರ್ನಾಟಕ ತೊಗಲುಗೊಂಬೆ ಒಂದು ಅಧ್ಯಯನ" ಕ.ವಿ.ವಿ. ೨೦೦೫ ಎಚ್. ಎನ್. ಚಿತ್ರಗಾರ ಅವರ

'ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ ಒಂದು ಅಧ್ಯಯನ' ೨೦೦೫ – ಎಸ್. ವಿ. ವೇಂಕಟೇಶಯ್ 'ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು', ಗು.ವಿ ೨೦೦೫ 'ವಿಶ್ವೇಶ್ವರಿ ತಿವಾರಿ ಅವರ 'ರಂಗೋಲಿ ಚಿತ್ರಕಲೆ ಒಂದು ಸಾಂಸ್ಕೃತಿಕ ಅಧ್ಯಯನ'. ಗು.ವಿ. ೨೦೦೬ – ಮಲ್ಲಿಕಾರ್ಜುನ ಸಿ. ಬಾಗೋಡಿ ಅವರ 'ಸುರಪುರ ಶೈಲಿಯ ಚಿತ್ರಕಲೆ ಒಂದು ಅಧ್ಯಯನ' ಗಳು ಚಿತ್ರಕಲೆಯ ವಿಭಿನ್ನವಾದ ಆಸಕ್ತಿಗಳನ್ನು ಅಧ್ಯಯನ ಮಾಡಿವೆ. ಚಿತ್ರಕಲೆಯ ಬಗೆಗೆ ನಡೆದ ಈ ಅಧ್ಯಯನಗಳು ಕನ್ನಡದಲ್ಲಿ ನಡೆದಿರುವುದು ಮಹತ್ತರ ಸಂಗತಿಯಾಗಿದೆ. ಈ ದೃಷ್ಟಿಯಿಂದ ಗಮನಿಸಿದಾಗ ಪಿಥೋರಾ ರೂಪಾಂತರವಾಗುವ ಮೂಲಕ ಬೆಳವಣಿಗೆ ಹೊಂದುತ್ತಿದೆ.

**೨.೨.೨ ಚಿತ್ರಕಲೆ: ಕೃತಿಗಳು**

ಕನ್ನಡದಲ್ಲಿ ಚಿತ್ರಕಲೆಯನ್ನು ಕುರಿತು ಅನೇಕ ಕೃತಿಗಳು ಬಂದಿವೆ. ಅವುಗಳು ಸಂಶೋಧನಾತ್ಮಕವಾಗಿಯೂ ಇವೆ. ನೇರವಾಗಿ ಚಿತ್ರಕಲೆಯನ್ನು ಕುರಿತ ಅಧ್ಯಯನರೂಪಿಯಾದ ಕೃತಿಗಳನ್ನು ಕನ್ನಡದ ಲೇಖಕರು ಬರೆದಿದ್ದಾರೆ. ಜಾಗತಿಕ ಚಿತ್ರಕಲೆ, ಭಾರತೀಯ ಚಿತ್ರಕಲೆ, ಕರ್ನಾಟಕ ಚಿತ್ರಕಲೆಯ ಬಗ್ಗೆ ಬಂದಿರುವ ಪುಸ್ತಕಗಳು ಇವೆ. ಕರ್ನಾಟಕಕ್ಕೆ ಸಂಬಂಧಿಸಿದ ಆಧ್ಯಯನ ರೂಪಿಯಾದ ಕೃತಿಗಳನ್ನು ಇಲ್ಲಿ ಸಮೀಕ್ಷೆ ಮಾಡಿ ವಿಶ್ಲೇಷಿಸಲಾಗಿದೆ.

ಉತ್ತರಕರ್ನಾಟಕ ಭಾಗದಲ್ಲಿ ಪ್ರಾಚೀನ ಕಾಲದ ಚಿತ್ರಕಲೆಗಳ ನೆಲೆಗಳಿವೆ. ಪ್ರಾಗೈತಿಹಾಸ ಕಾಲದ ಈ ನೆಲೆಗಳಲ್ಲಿ ಪ್ರಮುಖವಾಗಿ ಬಯಲುಬಂಡೆ ಚಿತ್ರಗಳು ಮತ್ತು ಗವಿವರ್ಣ ಚಿತ್ರಗಳು ಕಂಡುಬರುತ್ತವೆ. ಈ ಚಿತ್ರಗಳ ರಚನೆಯ ಶೈಲಿಯು ಮೃದು ಮತ್ತು ಸೂಕ್ಷ್ಮವಾದದ್ದೇನಲ್ಲ. ಆದರೂ ಚಿತ್ರಕಲೆ ಕ್ಷೇತ್ರದಲ್ಲಿ ಆದಿಮಾನವನ ಕೊಡುಗೆಯಾಗಿರುವದರಿಂದ ವಿಶಿಷ್ಟ ಸಂಪ್ರದಾಯ ಗವಿವರ್ಣ, ಬಯಲುಬಂಡೆ ಚಿತ್ರಗಳು ಈ ನೆಲೆಗಳಲ್ಲಿ ಕಂಡುಬರುತ್ತವೆ. ಇಂತಹ ನೆಲೆಗಳನ್ನು ಗುರುತಿಸಿದ ಹೆಗ್ಗಳಿಕೆ ಅ.ಸುಂದರ ಅವರಿಗೆ ಸಲ್ಲುತ್ತದೆ. ಅವರು ತಮ್ಮ ಕೃತಿಯಾದ 'ಕರ್ನಾಟಕದ ಪ್ರಾಗೈತಿಹಾಸ ಕಾಲದ ಕಲೆ' ಎಂಬ ಕೃತಿಯಲ್ಲಿ ಕರ್ನಾಟಕದ ಬಯಲುಬಂಡೆ ಮತ್ತು ಗವಿವರ್ಣ ಚಿತ್ರಗಳನ್ನು ಬೆಳಕಿಗೆ ತಂದರು. ಅವರ ಕೃತಿಯು ಈ ಚಿತ್ರಕಲೆಯ ಬಗ್ಗೆ ವಿಶೇಷವಾದ ಅಧ್ಯಯನವನ್ನು ಮಾಡಿದ ಪ್ರತಿಫಲವಾಗಿದೆ. ಪ್ರಾಗೈತಿಹಾಸ ಕಾಲದ ಚಿತ್ರಕಲೆಯನ್ನು ಐತಿಹಾಸಿಕವಾಗಿ ಅದರ ಉಗಮ ಮತ್ತು ಬೆಳವಣಿಗೆಯನ್ನು ವಿವೇಚಿಸಿದ್ದಾರೆ.

ಕೆ ಶಿವರಾಮ ಕಾರಂತರ 'ಕಲಾಪ್ರಪಂಚ' ಕೃತಿಯು ಚಿತ್ರ ಜಗತ್ತನ್ನು ಅನಾವರಣ ಮಾಡುತ್ತದೆ. ಪ್ರಾಚೀನದಿಂದ ಆಧುನಿಕತೆವರೆಗೂ, ಶಿಲಾಯುಗದಿಂದ ನಾಗರೀಕತೆವರಗೂ ಚಿತ್ರಕಲೆಯು ನಡೆದು ಬಂದ ದಾರಿಯನ್ನು ಸೂಕ್ಷ್ಮವಾಗಿ ಅವರು ಅಧ್ಯಯನ ಮಾಡಿದ್ದಾರೆ. 'ಶಿಲಾಯುಗದ ಮಾನವರ ಕಲಾಸಾಧನೆ' ಎಂಬ ಶಿರ್ಷಿಕೆಯ ಅಧ್ಯಾಯವು ಶಿಲಾಯುಗದ ಜನರ ಚಿತ್ರಕಲಾ

ಪ್ರೀತಿಯನ್ನು ಅಭಿವ್ಯಕ್ತಿಸುತ್ತದೆ. ಪ್ರಪಂಚದಾದ್ಯಂತ ಆದಿಮಾನವನು ಬೆಳೆಸಿದ ಚಿತ್ರಕಲೆಯ ಚಿತ್ರನಿದರ್ಶನಗಳನ್ನು ಕಾರಂತರು ಈ ಕೃತಿಯಲ್ಲಿ ಕೊಟ್ಟಿದ್ದಾರೆ. 'ಕರ್ನಾಟಕದ ಚಿತ್ರಕಲೆ' ಅವರ ಇನ್ನೊಂದು ಕೃತಿಯಾಗಿದೆ. ಕಲೆಯು ಹೇಗೆ ರೂಪಗೊಳ್ಳುತ್ತದೆ? ಕಲೆಯೆಂದರೇನು? ಪುರಾತನ ಚಿತ್ರಗಳು, ಚಾಲುಕ್ಯ, ವಿಜಯನಗರ, ಬಹುಮನಿರಾಜರ ಚಿತ್ರಕಲೆಗಳನ್ನು ಉಲ್ಲೇಖಿಸಿದ್ದಾರೆ. ಪಾಶ್ಚಾತ್ಯ, ಸ್ವದೇಶಿ, ನೆರೆಹೊರೆಯ ರಾಷ್ಟ್ರಗಳ ಚಿತ್ರಕಲೆಯ ಬಗ್ಗೆ ವಿಶ್ಲೇಷಿಸಿದ್ದಾರೆ. ಕರ್ನಾಟಕದ ಅಂಕಲೀಮಠ, ಆನೆಗೊಂದಿ, ಹಂಪಿ ಮುಂತಾದ ಪ್ರದೇಶಗಳ ಪ್ರಾಗೈತಿಹಾಸ ಚಿತ್ರಗಳ ಬಗ್ಗೆ ಹೇಳಿದ್ದಾರೆ.

ಆರ್. ಎಚ್. ಕುಲಕರ್ಣಿರವರು 'ಕಿನ್ನಾಳದ ಚಿತ್ರಕಲೆ' ಕೃತಿಯಲ್ಲಿ ಒಂದು ಗ್ರಾಮದಿಂದ ಅರಳಿದ ಪ್ರಕಾರವನ್ನು ಕುರಿತು ಬರೆದಿದ್ದಾರೆ. ಈ ಕಲೆಯನ್ನು ಕಿನ್ನಾಳದಲ್ಲಿ ಹಲವು ಕುಟುಂಬಗಳು ಅನುಸರಿಸಿರುವುದನ್ನು ಈ ಕೃತಿಯು ಪ್ರಸ್ತುತಪಡಿಸುತ್ತದೆ. ಈ ಕಲೆಯ ಜೊತೆಗೆ ಕಿನ್ನಾಳದ ಕಲಾವಿದರು, ಗೊಂಬೆಗಳ ತಯಾರಿಕೆ, ಅಲಂಕಾರಿಕ ಫಲಕಗಳ ತಯಾರಿಕೆ, ವಿವಿಧ ಬಗೆಯ ಬಣ್ಣದ ಆಟಿಕೆಗಳ ತಯಾರಿಕೆಯ ಕಡೆಗೆ ವಾಲಿರುವುದನ್ನು ಗುರುತಿಸಿದ್ದಾರೆ. ಚಿತ್ರಕಲೆಯು ಒಂದೇ ಪ್ರಕಾರದಲ್ಲಿ ಹುಟ್ಟಿ, ಒಂದೇ ಪ್ರಕಾರದಲ್ಲಿ ಕೊನೆಗೊಳ್ಳುವುದಿಲ್ಲವೆಂಬುದಕ್ಕೆ ಈ ಕಿನ್ನಾಳ ಕಲಾವಿದರೇ ಸಾಕ್ಷಿ. ರಾಮಾಯಣ, ಮಹಾಭಾರತದ ಪುರಾಣಗಳಿಗೆ ಸಂಬಂಧಿಸಿದ ಘಟನೆಗಳು ಅವರ ಕೃತಿಗಳಲ್ಲಿ ಬಿತ್ತರಗೊಳ್ಳುತ್ತವೆ. ಸ್ಥಳೀಯವಾಗಿ ದೊರಕುವ ಮೂಲಭೂತ ಪರಿಕರಗಳನ್ನು ಬಳಸಿಕೊಂಡಿರುವುದು ಕಾಣುತ್ತದೆ. ಜಾಗತೀಕರಣದ ಸಂದರ್ಭದಲ್ಲಿ ಈ ಕುಟುಂಬಗಳು ಮೂಲ ವೃತ್ತಿಯಿಂದ ವಾಲಿಕೊಂಡಿರುವುದನ್ನು ಕುಲಕರ್ಣಿಯವರ ಕೃತಿಯು ಶೋಧಿಸಿದೆ.

ವಿ. ಟಿ. ಕಾಳೆರವರ 'ಚಿತ್ರಕಲಾ ದರ್ಪಣ' ಮತ್ತು 'ಚಿತ್ರಕಲಾ ಪರಿಚಯ' ಎನ್ನುವ ಕೃತಿಗಳು ಚಿತ್ರಕಲೆಗೆ ಸಂಬಂಧಿಸಿದಂತೆ ಕಲಾವಿದರೇ ಬರೆದ ಕೃತಿಗಳಾಗಿವೆ. ಚಿತ್ರಕಲಾ ದರ್ಪಣದಲ್ಲಿ ಕಲೆಯೆಂದರೇನು? ಪ್ರಾಚೀನ ಕಲಾ ಸಂಸ್ಕೃತಿಗಳು, ಪಾಶ್ಚಾತ್ಯ ಕಲಾ ಸಂಪ್ರದಾಯಗಳು, ಭಾರತೀಯ ಕಲೆಯ ಪ್ರಮುಖ ಕಲಾಕೃತಿಗಳು ಮತ್ತು ಕಾಲಗಳು, ವರ್ಣಗಳು ಮತ್ತು ವರ್ಣ ವಿಧಾನಗಳು ಮುಂತಾದ ಅಧ್ಯಾಯಗಳಲ್ಲಿ ವಿಶ್ಲೇಷಣೆಯಿದೆ. ಚಿತ್ರಕಲಾ ಪರಿಚಯ ಎಂಬ ಕೃತಿಯು ಕಲಾಶಿಕ್ಷಣಕ್ಕೆ ಸಂಬಂಧಪಟ್ಟ ವಿಧಿವಿಧಾನದಿಂದ ರೂಪಿತವಾಗಿದೆ. ಚಿತ್ರಕಲಾ ಶಿಕ್ಷಣದ ಗುರಿ, ವಾಸ್ತುಸ್ಥಿತಿ, ಚಿತ್ರಕಲೆಯ ಪ್ರಾಚೀನತೆ, ನಾವೇಕೆ ಚಿತ್ರಕಲೆ ಕಲಿಯಬೇಕು? ಚಿತ್ರಕಲೆಯನ್ನು ಕಲಿಸುವ ಮಾಧ್ಯಮವಾಗಿ ಈ ಕೃತಿಯು ಮಹತ್ವದ್ದಾಗಿದೆ.

ಕೆ. ವಿ. ಕಾಳೆಯವರು 'ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ' ಎನ್ನುವ ಕೃತಿಯನ್ನು ಬರೆದಿದ್ದಾರೆ. ಬಣ್ಣಗಳನ್ನು ತಯಾರಿಸುವ ವಿಧಾನ, ಬಣ್ಣಗಳ ಬಳಕೆಯ ಬಗ್ಗೆ ಇಲ್ಲಿ ಚರ್ಚಿಸಿದ್ದಾರೆ. ತೈಲವರ್ಣ, ಜಲವರ್ಣ, ಹುಡಿಬಣ್ಣ, ಪ್ಲಾಸ್ಟರ್ ಬಣ್ಣ, ಅಕ್ರಾಲಿಕ್ ಬಣ್ಣ, ಪೇಸ್ಟಲ್ ಬಣ್ಣ ಮುಂತಾಗಿ

ವಿಂಗಡಿಸಿಕೊಂಡು ಈ ಕೃತಿಯಲ್ಲಿ ನಿರೂಪಿಸಿದ್ದಾರೆ. ಈ ಬಣ್ಣಗಳನ್ನು ಇತಿಹಾಸ ಪೂರ್ವದಲ್ಲಿ ಬಳಸಿದ ಬಗೆ, ಹಸ್ತಪ್ರತಿ ಚಿತ್ರಗಳಲ್ಲಿ ಬಳಕೆ, ತೊಗಲುಗೊಂಬೆ ಚಿತ್ರಕಲೆ, ಸೂತ್ರದಗೊಂಬೆ ಚಿತ್ರಕಲೆ, ಆಟಿಕೆಗೊಂಬೆಗಳಲ್ಲಿ ಬಣ್ಣದ ಬಳಕೆಯನ್ನು ಕುರಿತು ಇಲ್ಲಿ ಹೇಳಲಾಗಿದೆ. ಕಾವಿಕಲೆ, ಗಂಜೀಪ ಚಿತ್ರಕಲೆ, ಬಣ್ಣದ ಬಳಕೆ, ಮೈಸೂರು ಸಂಪ್ರದಾಯಿಕ ಚಿತ್ರಕಲೆ, ಬೈಲಾಟದ ಪ್ರಸಾದನಾ ಕಲೆ, ರಂಗಭೂಮಿ ಪರದೆಗಳು, ಯಕ್ಷಗಾನ ಮುಖವನಿಕೆ ಮತ್ತು ರಂಗಸಜ್ಜಿಕೆಗಳಲ್ಲಿ ಬಣ್ಣದ ಬಳಕೆಯನ್ನು ವೈಜ್ಞಾನಿಕ ವಿಧಾನದಿಂದಲೇ ಇಲ್ಲಿ ವಿವರಿಸುವ ಪ್ರಯತ್ನ ಮಾಡಿದ್ದಾರೆ.

'ವರ್ಣಸಂಚಯ' ಎಂಬ ಕೃತಿಯನ್ನು ಎಸ್.ಸಿ.ಪಾಟೀಲರವರು ರಚಿಸಿದ್ದಾರೆ, ಈ ಕೃತಿಯನ್ನು ಸಂಶೋಧನಾತ್ಮಕ ನೆಲೆಯಿಂದ ವಿಶ್ಲೇಷಣೆ ಮಾಡಿದ್ದಾರೆ. ಆದಿಮಾನವನ ಚಿತ್ರಕಲೆ, ಕಲೆಯ ತತ್ವಗಳು, ಶಿಷ್ಟಪದ ಚಿತ್ರಕಲೆ, ಕಲಾತಂತ್ರಗಾರಿಕೆ, ಹಸ್ತಪ್ರತಿ ಚಿತ್ರಕಲೆ, ಚಿತ್ರಕಲಾ ಶಿಕ್ಷಣ, ಜನಪದ ಚಿತ್ರಕಲೆ, ಆಧುನಿಕ ಕಲೆ ಮತ್ತು ಕಲೆಯ ಬಗೆಯ ವಿಮರ್ಶಾತ್ಮಕ ವಿಷಯಗಳನ್ನು ಒಳಗೊಂಡಿದೆ. 'ಕರ್ನಾಟಕದ ಜನಪದ ಚಿತ್ರಕಲೆ'ಯ ಅಧ್ಯಯನದ ಬಹುತೇಕ ವಿಷಯ ವಿಚಾರಗಳು ಮರುರೂಪಿತಗೊಂಡಿವೆ.

೧೯೩೦ರಲ್ಲಿ ಕೆ. ಶಿವರಾಮ ಕಾರಂತರ 'ಭಾರತೀಯ ಚಿತ್ರಕಲೆ' ಕೃತಿಯು ರಚನೆಯಾಯಿತು. ಇದರಲ್ಲಿ ಕಲೆಯ ನೆಲೆ, ಕಲೆಯ ಬಗೆ, ರೂಪಚಿತ್ರವೇ? ಭಾವಚಿತ್ರವೆ, ಭಾವತೆಯ ಚಿತ್ರಕಲೆಯ ಪ್ರಾಚ್ಯತೆ, ಬೌದ್ಧಕಾಲಿನ ಚಿತ್ರಕಲೆ, ಮೊಗಲ್ ಚಿತ್ರಕಲೆ, ರಜಪೂತ ಚಿತ್ರಕಲೆ, ನವಯುಗವೆಂಬ ವಿವಿಧ ಅಧ್ಯಾಯಗಳಲ್ಲಿ ಚಿತ್ರಕಲೆಯನ್ನು ಕುರಿತು ಬರೆದಿದ್ದಾರೆ. ೧೯೫೦ರಲ್ಲಿ 'ಕಲೆಯ ದರ್ಶನ' ಕೃತಿಯನ್ನು ರಚಿಸಿದ್ದಾರೆ. ಭಾರತೀಯ ಕಲೆ ಮತ್ತು ಪ್ರಾಚೀನ ಸಾಹಿತ್ಯದ ಕೃತಿಗಳನ್ನು ಸಾಂದರ್ಭಿಕವಾಗಿ ಉಲ್ಲೇಖಿಸಿದ್ದಾರೆ.

ಪಿ. ಆರ್. ತಿಪ್ಪೆಸ್ವಾಮಿಯವರು ೧೯೭೬ರಲ್ಲಿ 'ಬೆಳೆದು ಬಂದ ಭಾರತದ ಚಿತ್ರಕಲೆ' ಎಂಬ ಕೃತಿಯನ್ನು ರಚಿಸಿದ್ದಾರೆ. ಭಾರತದ ಪ್ರಾಚೀನ ಚಿತ್ರಕಲೆಯ ಬೆಳವಣಿಗೆಯನ್ನು ಹೇಳಿದ್ದಾರೆ. ಆಗ ಪ್ರಾಚೀನ ಸಾಹಿತ್ಯ ಕೃತಿಗಳನ್ನು ಸಮೀಕ್ಷಿಸಿ ಅದರ ಬೆಳವಣಿಗೆಯನ್ನು ಗುರುತಿಸಿದ್ದಾರೆ.

ಎಂ. ವಿ. ಸೀತಾರಾಮಯ್ಯನವರು 'ಸಾಹಿತ್ಯ ಮತ್ತು ಚಿತ್ರಕಲೆ' ಎಂಬ ಕೃತಿಯನ್ನು ೧೯೮೫ರಲ್ಲಿ ಬರೆದಿದ್ದಾರೆ. ಇವರ ಈ ಕೃತಿಯಲ್ಲಿ ಸಾಹಿತ್ಯ ಮತ್ತು ಚಿತ್ರಕಲೆಯ ತೌಲನಿಕ ಅಧ್ಯಯನವಿದೆ. ಸಾಹಿತ್ಯ ರೂಪ ಮತ್ತು ಕಲಾರೂಪಗಳ ಗುಣಲಕ್ಷಣಗಳನ್ನು ವಿವೇಚಿಸಿದ್ದಾರೆ.

ಎಂ. ಎಚ್. ಕೃಷ್ಣಯ್ಯರವರ 'ಶೃಂಗಾರ ಲಹರಿ'ಯನ್ನು ೧೯೮೯ರಲ್ಲಿ ರಚಿಸಿದರು. ಪ್ರಾಚೀನ ಭಾರತೀಯ ಚಿತ್ರಕಲೆಗಳಲ್ಲಿ ಶೃಂಗಾರ ಸನ್ನಿವೇಶಗಳನ್ನು ಹುಡುಕಾಡುವ ಪ್ರಯತ್ನವನ್ನು

ಅಲ್ಲಿ ಮಾಡಿದ್ದಾರೆ. ಪ್ರಾಚೀನ ಸಂಸ್ಕೃತಿ, ಕನ್ನಡ, ಗೀತಗೋವಿಂದ ಮತ್ತು ರವೀಂದ್ರನಾಥ ಠಾಗೋರರವರ ಬರಹಗಳಲ್ಲಿ ಚಿತ್ರಕಲೆ ಹಿನ್ನೆಲೆಯಲ್ಲಿ ಶೃಂಗಾರ ಪ್ರಸಂಗಗಳನ್ನು ತೌಲನಿಕವಾಗಿ ಅಧ್ಯಯನವನ್ನು ಮಾಡಿದ್ದಾರೆ.

**೨.೨.೩ ಚಿತ್ರಕಲೆ: ಲೇಖನಗಳು**

ಕನ್ನಡದಲ್ಲಿ ಚಿತ್ರಕಲೆಯ ಅಧ್ಯಯನಗಳಷ್ಟೇ ಅಲ್ಲದೇ ಲೇಖನಗಳು ಚಿತ್ರಕಲೆಯ ಒಂದು ನಿರ್ದಿಷ್ಟ ವ್ಯಾಪ್ತಿಯನ್ನು ಕುರಿತು ವಿಮರ್ಶಿಸತೊಡಗಿವೆ. ಈ ಲೇಖನಗಳು ಚಿತ್ರಕಲೆಯನ್ನು ಕುರಿತು ಸಮಗ್ರವಾದ ಅಧ್ಯಯನರೂಪಿಯಾಗದೇ ಒಂದು ವಿಷಯ ವ್ಯಾಪ್ತಿಯೊಳಗೆ ಸುವರ್ಣದ ಚೌಕಟ್ಟಿನಂತೆ ಕೆಲಸ ಮಾಡಿದೆ.

'ಚಿತ್ರಕಲಾ ಪ್ರಪಂಚ' ಎಂಬ ಸಂಪದನಾ ಕೃತಿಯಲ್ಲಿ ೭೦ ಲೇಖನಗಳಿವೆ. ಈ ಲೇಖನಗಳು ಕರ್ನಾಟಕದ ಇತಿಹಾಸಕಾರರು, ಸಾಹಿತಿಗಳು, ಚಿತ್ರಕಲಾವಿದರು, ಸಂಶೋಧಕರು ಬರೆದ ಬರಹಗಳಾಗಿವೆ. ಇದರಲ್ಲಿ ಕರ್ನಾಟಕ ಪ್ರಾಗೈತಿಹಾಸವನ್ನು ಕುರಿತ 'ಪ್ರಾಚೀನ ಚಿತ್ರಕಲೆ' ಬಿ. ವಿ. ಕೆ. ಶಾಸ್ತ್ರೀ ಅವರ 'ವಿಶಿಷ್ಟ ವರ್ಣ ಚಿತ್ರಕಲೆಯ ಆಗರ: ಬಾದಾಮಿ', ಅ. ಸುಂದರ ಅವರ 'ಚಿತ್ರದುರ್ಗ ಪರಿಸರದ ಪ್ರಾಗೈತಿಹಾಸದ ಚಿತ್ರಗಳು', ಎಚ್. ಶ್ರೀಶೈಲ ಆರಾಧ್ಯ ಅವರ 'ಚಿತ್ರದುರ್ಗ ಪರಿಸರದ ಪ್ರಾಗೈತಿಹಾಸಿಕ ಚಿತ್ರಗಳು' ಲೇಖನಗಳಿವೆ. ಈ ಲೇಖನಗಳು ಬಯಲು ಬಂಡೆ ಮತ್ತು ಗವಿವರ್ಣ ಚಿತ್ರಗಳ ಬಗೆಗಿನ ಸಂಶೋಧನಾತ್ಮಕ ಬರಹಗಳಿಂದ ಕೂಡಿದೆ. 'ಸಾಹಿತ್ಯ ಮತ್ತು ಚಿತ್ರಕಲೆ', ಜನಪದ ಚಿತ್ರಕಲೆ, 'ಸಾಂಪ್ರದಾಯಿಕ ಚಿತ್ರಕಲೆ', 'ಕಲೆಯ ವ್ಯಾಖ್ಯಾನ, 'ಸೌಂದರ್ಯ ಮತ್ತು ರಸ', ಮುಂತಾದ ಬಗೆಯ ವಿಷಯಗಳನ್ನು ಒಳಗೊಂಡ ಲೇಖನಗಳು ಈ ಸಂಪದನಾ ಕೃತಿಯಲ್ಲಿ ಕಾಣುತ್ತವೆ. ಕನ್ನಡದ ಪ್ರಸಿದ್ಧ ಲೇಖಕರು ಈ ಕೃತಿಗೆ ಲೇಖನಗಳನ್ನು ಬರೆದಿದ್ದಾರೆ. ಎಂ. ವಿ. ಸೀತಾರಾಮಯ್ಯ, ವಿ. ಎಂ. ಇನಾಮ್ದಾರ, ಎಚ್. ಶ್ರೀಕಂಠ ಶಾಸ್ತ್ರೀ, ಜಿ. ಶಂ. ಪರಮಶಿವಯ್ಯ, ಕೆ. ಕೆ. ಹೆಬ್ಬಾರ, ಎಸ್. ಎಲ್. ಭೈರಪ್ಪ, ರವಿಕುಮಾರ ಕಾಶಿ, ಎನ್. ಮರಿಶಾಮಾಚಾರ, ಅ. ಲ. ನರಸಿಂಹನ್ ಮುಂತಾದವರು ಬರೆದಿದ್ದಾರೆ.

ದ. ರಾ. ಬೇಂದ್ರೆಯವರ 'ಸಾಹಿತ್ಯ ವಿರಾಟ ಸ್ವರೂಪ' ಕೃತಿಯಲ್ಲಿ 'ಚೀರಘಟ್ಟಿ ಯಾರು? ಒಂದು ಊಹೆ' ಎನ್ನುವ ಲೇಖನದಲ್ಲಿ ಚಿತ್ರಕಲಾವಿದನ ಬಗ್ಗೆ ಪ್ರಸ್ತಾಪಿಸಿದ್ದಾರೆ. ಈ ಲೇಖನದಲ್ಲಿ ಚೀರಘಟ್ಟಿ ಎನ್ನುವವನು ಒಬ್ಬ ಚಿತ್ರಶಿಲ್ಪಿಯು ಐತಿಹಾಸಿಕ ವ್ಯಕ್ತಿಯೋ, ಪೌರಾಣಿಕ ಪುರುಷನೋ ಎಂಬ ಜಿಜ್ಞಾಸೆಯನ್ನು ಇಟ್ಟುಕೊಂಡು ಬರೆದ ವಿಮರ್ಶಾ ಲೇಖನ. ಈ ಲೇಖನಕ್ಕೆ ಪೂರಕವಾಗಿರುವ ಅಂಶಗಳಾದ ನಾಗಚಂದ್ರನ 'ಮಲ್ಲಿನಾಥ ಪುರಾಣ' ಗುಣವರ್ಮನ 'ಪುಷ್ಪದಂತ ಪುರಾಣ', ಪೊನ್ನನ 'ಶಾಂತಿ ಪುರಾಣ' ಈ ಕಾವ್ಯಗಳಲ್ಲೆಲ್ಲಾ ಚೀರಘಟ್ಟಿಯ

ಉಲ್ಲೇಖವಿದೆ. ಈ ಹಿನ್ನೆಲೆಯಲ್ಲಿ ಬೇಂದ್ರೆಯವರ ಈ ಲೇಖನವು ಪೊನ್ನನ ಪೂರ್ವದಲ್ಲಿಯೇ ಕರ್ನಾಟಕದಲ್ಲಿ ಚಿತ್ರಶಿಲ್ಪದ ಪರಂಪರೆಯು, ಚಿತ್ರಗಳನ್ನು ವಿಮರ್ಶಿಸುವ ಜನರು ಇದ್ದರೆಂದು ನಿರೂಪಿಸಿದ್ದಾರೆ.

'ಕಲೆ ಮತ್ತು ರಸಸ್ವಾದ' ಎನ್ನುವ ಕೃತಿಯನ್ನು ಎಂ. ಎಚ್. ಕೃಷ್ಣಯ್ಯ ಅವರು ಸಂಪಾದಿಸಿದ್ದಾರೆ. ಈ ಕೃತಿಯಲ್ಲಿ ವಿವಿಧ ಲೇಖಕರ ಹದಿಮೂರು ಲೇಖನಗಳಿವೆ. ಅ. ಲ. ನರಸಿಂಹನ್ ಅವರ ಎರಡು ಲೇಖನಗಳಾದ 'ಚಿತ್ರಕಲೆಯ ಪರಿಭಾಷೆ ಮತ್ತು ಸಾಮಗ್ರಿಗಳು' ಮತ್ತು 'ಪ್ರಾಚೀನ ಗ್ರಂಥಗಳ ಚಿತ್ರಕಲೆ' ಪ್ರಮುಖವಾಗಿವೆ. ಫಲಕಗಳನ್ನು ಕುರಿತು ಚರ್ಚಿಸಿದ್ದಾರೆ. ಇದರಲ್ಲಿ ಬಂಡೆಯ ಫಲಕಗಳು, ಗೋಡೆಯ ಫಲಕಗಳು, ಬಟ್ಟೆ, ಕಾಗದ, ಮರ, ಗಾರುದಂತದ ಮೇಲೆ ಬರೆದ ಫಲಕಚಿತ್ರಗಳನ್ನು ಕುರಿತ ವಿವರಗಳಿವೆ. ಬಣ್ಣಗಳನ್ನು ಬಳಸುವ ವಿಧಾನ ಮತ್ತು ಬಣ್ಣದ ಬಗೆಗಳನ್ನು ವಿವರಿಸಿದ್ದಾರೆ. ಬಣ್ಣದ ಪ್ರಕಾರಗಳು, ಬಣ್ಣದ ತತ್ವಗಳು, ಬಣ್ಣದ ತಯಾರಿಕೆಯನ್ನು ಕುರಿತ ವಿಶ್ಲೇಷಣೆಯಿದೆ. ಚಿತ್ರಕಲೆಯ ಪ್ರಕಾರಗಳನ್ನು ಹೇಳಿದ್ದಾರೆ. ರೇಖಾಚಿತ್ರ, ಭೂದೃಶ್ಯ, ಸ್ಥಿರಚಿತ್ರಣ, ಭಾವಚಿತ್ರಣ, ಸಂಯೋಜನೆ ಚಿತ್ರಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಅಲ್ಲದೇ ಚಿತ್ರಕಲಾ ಪರಂಪರೆಯನ್ನು ಕುರಿತು ಹೇಳಿದ್ದಾರೆ.

ಈ ಅಧ್ಯಯನಗಳನ್ನು ಪೂರಕವಾಗಿಟ್ಟುಕೊಂಡು "ಕನ್ನಡ ಪ್ರಾಚೀನ ಚಿತ್ರಕಲೆ ಮತ್ತು ಪಿಥೋರಾ" ಅಧ್ಯಯನವನ್ನು ವಿಭಿನ್ನವಾಗಿ ವಿಶ್ಲೇಷಣೆ ಮಾಡಿದ ಪ್ರಯತ್ನವಿದೆ. ಆದಿಮಾನವ–ಜನಪದರು–ಸಾಹಿತಿಗಳು ಮತ್ತು ಬುಡಕಟ್ಟು ಜನರು ಚಿತ್ರಕಲೆಯನ್ನು ದುಡಿಸಿಕೊಂಡು ಬಂದಿರುವ ಒಂದು ಪರಂಪರೆಯನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಅಲ್ಲದೆ ಕಾಲಾಂತರದಲ್ಲಿ ರೂಪಾಂತರಗೊಂಡಿರುವ ಪಿಥೋರಾವನ್ನು ವಿಶ್ಲೇಷಣೆ ಮಾಡುವ ಮೂಲಕ ಈ ಅಧ್ಯಯನವು ಭಿನ್ನವಾಗಲು ಪ್ರಯತ್ನಿಸಿದೆ.

## ಅಧ್ಯಾಯ ಮೂರು

# ಕನ್ನಡ ಪ್ರಾಚೀನ ಚಿತ್ರಕಲೆ

೩.೧ ಕನ್ನಡ ಪ್ರಾಚೀನ ಚಿತ್ರಕಲೆ: ಗವಿ ಚಿತ್ರಗಳು

೩.೨ ಜಾನಪದ ಚಿತ್ರಕಲೆ: ಬೆಳದಿಂಗಳ ಚಿತ್ರಕಲೆ

೩.೩ ಕನ್ನಡ ಸಾಹಿತ್ಯದಲ್ಲಿ ಚಿತ್ರಕಲೆ

# ಅಧ್ಯಾಯ ೩

# ಕನ್ನಡ ಪ್ರಾಚೀನ ಚಿತ್ರಕಲೆ

ಆದಿಮಾನವನು ತನ್ನ ಸುತ್ತಮುತ್ತಲಿನ ಪ್ರಕೃತಿಯನ್ನು ನೋಡಿ ಭಯ ಮತ್ತು ಆನಂದ ಎರಡನ್ನು ಅನುಭವಿಸಿದನು. ಈ ಭಯ ಮತ್ತು ಆನಂದವನ್ನು ಅಭಿವ್ಯಕ್ತಿಸುವ ಮಾಧ್ಯಮಗಳನ್ನು ಕಂಡುಕೊಳ್ಳಲು ಅವನು ಪ್ರಯತ್ನಿಸಿದನು. ಅವನ ಇಂತಹ ಪ್ರಯತ್ನದ ಫಲವಾಗಿಯೇ ಕಲೆಗಳು ಆರಂಭವಾದವು. ಮಾನವನ ದೈಹಿಕ ಚಹರೆಯ ಬದಲಾವಣೆಗಳು ಒರಟುತನದಿಂದ ಮೃದುತ್ವಕ್ಕೆ ತಿರುಗಿದ ಹಾಗೆಯೇ ಅವನ ಕಲಾವಂತಿಕೆಯಲ್ಲೂ ಸೂಕ್ಷ್ಮತೆ ಮತ್ತು ಮೃದುತ್ವದ ಕಲಾಭಿವ್ಯಕ್ತಿ ಆರಂಭವಾಯಿತು. ಆ ಭಯದ ವಾತಾವರಣದಿಂದ ಮುಕ್ತನಾಗಲು ತನ್ನ ಬಿಡುವಿನ ವೇಳೆಯಲ್ಲಿ ಕುಣಿತ, ಚಿತ್ರ, ಸಂಗೀತ ಮುಂತಾದ ಕಲೆಗಳನ್ನು ರೂಢಿಸಿಕೊಂಡನು.

ಮಾನವನು ಲೌಕಿಕ ಪ್ರಪಂಚದಲ್ಲಿ ಆಶಿಸುವುದು ಒಂದಲ್ಲ. ಅವನಿಗೆ ಇಂದ್ರಿಯ ಮನಸ್ಸು, ಬುದ್ಧಿ, ಆತ್ಮಕ್ಕೆ ಅನಿಸಿದ ರೀತಿಯಲ್ಲಿ ಬದುಕುವುದಕ್ಕಾಗಿ ಅವಿರತ ಪ್ರಯತ್ನವಿರುತ್ತದೆ. ಆ ಪ್ರಯತ್ನದ ಫಲವು ನಾಗರಿಕತೆ ಮತ್ತು ಸಂಸ್ಕೃತಿಯನ್ನು ಬೆಳೆಸಿರಬಹುದು. ತನ್ನ ಭಾವನೆಯನ್ನು ಕೇಳಿಕೊಳ್ಳಲು ಸಾಧ್ಯವಾಗದೆ ಇರುವಾಗ ಅವನಿಗೆ ತನ್ನ ನೋವು–ನಲಿವು, ಭಯ–ಆನಂದಗಳನ್ನು ಅಭಿವ್ಯಕ್ತಿಸಲು ಒಂದು ಮಾಧ್ಯಮ ಅಗತ್ಯವುಂಟಾಗಿರಬಹುದು. ಆ ಮಾಧ್ಯಮ ಭಾಷೆಯನ್ನೂ ಮೀರಿದ್ದಾಗಿರಬಹುದು. ಅದು ಸಂಸ್ಕೃತಿ ಮತ್ತು ನಾಗರಿಕತೆಯನ್ನು ಪ್ರತಿನಿಧಿಸುವಂತದ್ದಾಗಿರಬಹುದು. ಇಂತಹ ಸಂಸ್ಕೃತಿ, ನಾಗರಿಕತೆ, ಸಂಸ್ಕಾರವನ್ನು ಅಳೆಯಲು ಕಲೆ ಒಂದು ಮಾನದಂಡವಾಗಿ ಇಂದು ನಮಗೆ ದಕ್ಕಿರಬಹುದು. ಆ ಕಾಲಕ್ಕೆ ಅವರು ಕಂಡುಕೊಂಡದ್ದನ್ನು ನಾವು ಇಂದು ಕಲೆ, ಸಂಸ್ಕೃತಿ, ಸಂಸ್ಕಾರ, ನಾಗರಿಕತೆ, ಕಲೆಯ ವರ್ಗಾವಣೆ, ಮಾರ್ಗದರ್ಶನ, ಶಿಕ್ಷಣ ಹೀಗೆ ಏನೆಲ್ಲಾ ಗ್ರಹಿಸಿಕೊಳ್ಳಲು ಸಾಧ್ಯವಿದೆ. ಆದ್ದರಿಂದಲೇ ಅದನ್ನು ಪಾಶ್ಚಾತ್ಯರು "ಕಲೆಗಾಗಿ ಕಲೆ" ಎಂದು ಕರೆದುಕೊಂಡರು. ಆದರೆ ಅವರಿಗೆ ಆ ಕಾಲಕ್ಕೆ ಚಿತ್ರವೇ ಆದಿಮಾನವನ ಭಾಷೆಯಾಗಿರಬಹುದು.

ಪ್ರಾಚೀನ ಮಾನವನು ಬಂಡೆ, ಗವಿ, ಕಲ್ಲಾಸರೆಗಳಲ್ಲಿ ಬರೆದ ಚಿತ್ರಗಳನ್ನು ಗಮಸಿಸಬಹುದು. ಆ ಚಿತ್ರಗಳನ್ನು ರೂಪ, ಲಾವಣ್ಯ, ಅಥವಾ ಸೌಂದರ್ಯ ಮೀಮಾಂಸೆಯ ಹಿನ್ನೆಲೆಯಲ್ಲಿ ಗ್ರಹಿಸಿದಾಗ ಅವು ನಮಗೆ ಏನೂ ಅಲ್ಲದೇ ಇರಬಹುದು. ಆದರೆ ಆ ಕಾಲಕ್ಕೆ ಅವು ಮಹತ್ತರವಾದವು. ಏಕೆಂದರೆ ಬೆಂಕಿಯನ್ನು ಉತ್ಪಾದಿಸಲು ಮಾನವನು ಚಕಮಕಿ ಕಲ್ಲನ್ನೇ ಕಂಡು ಹಿಡಿದದ್ದು ಒಂದು ವೈಜ್ಞಾನಿಕತೆ ಎಂದು ಎಷ್ಟು ಭಾವಿಸಿಕೊಳ್ಳಬಹುದೋ ಅಷ್ಟೇ ಆ ಚಿತ್ರಗಳು ಕೂಡ ಮೊದಲ ಕಲಾವಂತಿಕೆಯನ್ನು ಬಿತ್ತರಿಸುತ್ತವೆ.

ಸುಮಾರು ಐವತ್ತುಸಾವಿರ ವರ್ಷಗಳ ಹಿಂದೆ ಜೀವಿಸಿದ್ದ ಆದಿ ಮಾನವನು ಮೊದಲ ಚಿತ್ರಕಾರನಾಗಿದ್ದಾನೆ. ಅವನು ತನ್ನ ನಿತ್ಯದ ಬದುಕಿನ ಚಟುವಟಿಕೆಗಳಲ್ಲಿ ಪ್ರಾಣಿಗಳ ಬೇಟೆಯಾಡಿ ಆಹಾರೋತ್ಪಾದನೆ ಮಾಡಿಕೊಳ್ಳುವುದು ಮೂಲೋದ್ದೇಶವಾಗಿದೆ. ಅದರ ಜೊತೆಗೆ ಪ್ರಾಣಿ, ಪಕ್ಷಿ, ಮನುಷ್ಯ, ಆಯುಧಗಳ ಚಿತ್ರಗಳನ್ನು ಕಲ್ಪನೆಯಲ್ಲಿ ತಂದಿಲ್ಲ. ಸ್ವತಃ ತಾನು ಬಳಸಿದ್ದನ್ನು ಮತ್ತು ಅನುಭವಿಸಿದ್ದನ್ನು ಬಂಡೆಗಳ ಮಾಡುಗಳಲ್ಲಿ ಪ್ರಾಕೃತಿಕವಾಗಿ ದೊರೆತ ಬಣ್ಣಗಳಿಂದ ಬಿಡಿಸಿರುವುದನ್ನು ಕಾಣಬಹುದು. ಬಣ್ಣದ ತಯಾರಿಕೆಯಲ್ಲಿ ಅವರ ಮಗ್ನತೆ ಎಷ್ಟಿರಬಹುದು ಎಂಬುದನ್ನು ಮನಗಾಣಲು ಇಂದಿಗೂ ಕಂಡುಬರುತ್ತಿರುವ ಬಂಡೆ/ಗವಿಚಿತ್ರಗಳನ್ನು ಗಮಸಿಸಬಹುದು. ನಿರ್ದಿಷ್ಟವಾಗಿ ಆ ಚಿತ್ರಗಳು ಇಂತಹ ಕಾಲಮಾನದಲ್ಲಿ ರಚನೆಯಾದವು ಎಂದು ಹೇಳಲು ಆಗಿಲ್ಲ. ಪ್ರಾಚೀನ ಶಿಲಾಯುಗದ ಮಾನವನು ಚಿತ್ರಿಸಿದ ವರ್ಣಚಿತ್ರಗಳನ್ನು, ಕೊರೆತದ ಚಿತ್ರಗಳನ್ನು ಕಾಣಲು ಸಾಧ್ಯವಿದೆ.

ಕನ್ನಡದ ಪ್ರಾಚೀನ ಚಿತ್ರಕಲೆಯನ್ನು ಸಂಶೋಧನೆಗೆ ಒಳಪಡಿಸಿದಾಗ ಮುಖ್ಯವಾಗಿ ಎರಡು ನೆಲೆಗಳು ಕಂಡು ಬಂದವು. ಒಂದು, ಪ್ರಾಗೈತಿಹಾಸ ಕಾಲದಲ್ಲಿ ಶುರುವಾದ ಚಿತ್ರಕಲೆಗಳು. ಎರಡು, ಪ್ರಾಚೀನ ಸಾಹಿತ್ಯದಲ್ಲಿ ಉಲ್ಲೇಖಿತಕೊಂಡ ಚಿತ್ರಕಲೆ. ಈ ಎರಡು ನೆಲೆಗಳನ್ನು ವಿವರಿಸುವುದು ಮುಖ್ಯ ಉದ್ದೇಶವಲ್ಲ. ವಿಶ್ಲೇಷಣೆ ಮಾಡುವುದು ಮುಖ್ಯವಾದ ಉದ್ದೇಶವಾಗಿದೆ. ಕನ್ನಡದ ಎಂಬುದು ಕರ್ನಾಟಕ ನಾಡನ್ನು ಪ್ರತಿಬಿಂಬಿಸುತ್ತದೆ. ಆದರೂ ಆದಿಮಾನವನ ಕಲ್ಲಾಸರೆ ಚಿತ್ರಗಳು ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿವೆ. ಅವುಗಳಲ್ಲಿ ಅಂತಹ ಮಹತ್ತರವಾದ ವ್ಯತ್ಯಾಸಗಳನ್ನು ಎಲ್ಲ ಪ್ರದೇಶಗಳಲ್ಲೂ ಕಾಣಲು ಸಾಧ್ಯವಿಲ್ಲ. ವಿಭಿನ್ನವಾಗಿರುವ ಕಲ್ಲಾಸರೆ ಚಿತ್ರಗಳನ್ನು ಗಮನಿಸಿಕೊಂಡು ಅಧ್ಯಯನಕ್ಕೆ ಒಳಪಡಿಸುವುದು ಈ ಅಧ್ಯಾಯದ ಮುಖ್ಯವಾದ ನಿಲುವಾಗಿದೆ.

ಕನ್ನಡ ನಾಡಿನಲ್ಲಿ ಜನಪದರು ಆಚರಿಸಿಕೊಂಡು ಬರುತ್ತಿರುವ ಕೆಲವು ಆಚರಣೆಗಳು ಸಹ ನಿರ್ದಿಷ್ಟವಾಗಿ ಇಂತಹ ಕಾಲದಲ್ಲಿ ಉಗಮಿಸಿದವು ಎಂಬುದಕ್ಕೆ ದಾಖಲೆಗಳಿಲ್ಲ. ಅವರ ಆಚರಣೆಗಳು ಇಂತಹ ಸಂದರ್ಭದಲ್ಲಿ ಆಚರಿಸಬೇಕು ಎಂಬುದು ಅವರಿಗೆ ತಿಳಿದಿತ್ತು. ಆದ್ದರಿಂದ

ಜನಪದರ ಹಬ್ಬ ಹರಿದಿನಗಳು, ಮದುವೆಕಾರ್ಯ, ಜಾತ್ರೆ ಮುಂತಾದ ಆಚರಣೆಗಳಲ್ಲಿ ಚಿತ್ರಕಲೆಯು ಒಂದು ಭಾಗವಾಗಿರುತ್ತದೆ. ಅದು ಕೇವಲ ಸೌಂದರ್ಯದ ದೃಷ್ಟಿಯಿಂದ ಮಾತ್ರವಲ್ಲ, ಧಾರ್ಮಿಕ ನಂಬಿಕೆ, ಆಚರಣೆ, ವಿಧಿಕ್ರಿಯೆ ಮುಂತಾದ ಹಿನ್ನೆಲೆಯಲ್ಲಿ ಆಯಾ ಆಚರಣೆಯ ಭಾಗವಾಗಿ ಅಭಿವ್ಯಕ್ತಗೊಳ್ಳುತ್ತದೆ. ಜನಪದರಲ್ಲಿ ಚಿತ್ರಕಲೆಯು ಉಗಮಗೊಂಡಿದ್ದು ಈ ಹಿನ್ನೆಲೆಯಲ್ಲಿ ಎಂದು ಹೇಳಬಹುದು.

ಆದಿ ಮಾನವನು ಪ್ರಾಕೃತಿಕ ಭಯದಿಂದಾಗಿ ಮೂಢನಂಬಿಕೆಗಳನ್ನು ಬೆಳೆಸಿದನು. ಇದನ್ನು ಗ್ರಹಿಸಿ ಅವನು ಅಸಾಂಸ್ಕೃತಿಕವಾಗಿ ಇದ್ದನೆಂದು ತಿಳಿಯುವುದು ತುಂಬ ಅಮಾನವೀಯವಾಗುತ್ತದೆ. ಅವನಿಗೂ ಒಂದು ಸಂಸ್ಕೃತಿ ಇದ್ದಿರಲೇಬೇಕು. ಆ ಕಾಲಮಾನಕ್ಕೆ ಅನುಗುಣವಾಗಿ ಮತ್ತು ಆ ಸಂದರ್ಭದ ಒತ್ತಡಕ್ಕೆ ಅನುಗುಣವಾಗಿ ಅವನಲ್ಲಿ ನಂಬಿಕೆಗಳು ಮತ್ತು ಜೀವನ ವಿನ್ಯಾಸಗಳು ಜರುಗಿರಬೇಕು, ಆದ್ದರಿಂದಲೇ ಮುಂದಿನ ಮಾನವ ಸಮಾಜದ ಬೆಳವಣಿಗೆಗೆ ಇದು ತಳಪಾಯವಾಗಿರಬಹದು. ಆದಿಮಾನವನು ತನ್ನ ಬದುಕಿಗೆ ಒಂದು ನೆಲೆಯನ್ನು ಕಂಡುಕೊಂಡದ್ದು ಕೌತುಕವಾಗುತ್ತದೆ. ನಾವು ಅದನ್ನು ಅನ್ವೇಷಿಸುವುದನ್ನು ವೈಜ್ಞಾನಿಕತೆಯ ಬೆನ್ನೇರಿಯೇ ಚಿಂತಿಸುತ್ತಿದ್ದೇವೆ. ಆದರೆ ಆದಿಮಾನವನು ಬರೆದ ಮೊದಲ ಚಿತ್ರಗಳು ಇಂದಿನ ಚಿತ್ರಗಳಂತೆ ಕಲಾಕೃತಿಗಳಲ್ಲ, ನಿಜ. ಆ ಚಿತ್ರಗಳು ಜೀವನ ಕ್ರಿಯೆಯ ಭಾಗವಾಗಿ ರಚಿಸಲ್ಪಟ್ಟವು. ಅನಂತರದಲ್ಲಿ ಅವುಗಳಿಂದ ವಿಕಸನಗೊಂಡಂತೆ ಬರವಣಿಗೆಯಲ್ಲಿ ಸೂಕ್ಷ್ಮತೆಯನ್ನು ಕಾಣಲು ಸಾಧ್ಯವಿದೆ. ಧಾರ್ಮಿಕವಾಗಿ ದೇವರ ಪರಿಕಲ್ಪನೆಗೂ ಇದು ನಾಂದಿ ಹಾಡಿರಬಹುದು ಎನ್ನಿಸುತ್ತದೆ. ಹೀಗೆ ಆದಿಮಾನವನು ಕಲಾತ್ಮಕತೆಯ ದೃಷ್ಟಿಯಿಂದ ವರ್ಣಚಿತ್ರಕಲೆಗೆ ತೊಡಗಿದನೋ ಇಲ್ಲವೋ ಆದರೆ ಆ ಕಾಲಕ್ಕೆ ಅವು ಕಲಾತ್ಮಕ ಚಿತ್ರಗಳ ಆರಂಭವಂತೂ ಆಯಿತು ಎಂದರೆ ತಪ್ಪಿಲ್ಲ. ಆ ಚಿತ್ರಗಳ ನಡುವೆ ಬಳಸಿರುವ ಕೆಲವು ಸಾಂಕೇತಿಕ ಚಿತ್ರಗಳು ಜನಪದರಲ್ಲಿ ಇಂದಿಗೂ ಉಳಿದುಕೊಂಡು ಬಂದಿವೆ. ಹಾಗಾಗಿ ಆದಿಮಾನವನು ಚಿತ್ರಕಲೆಯಲ್ಲಿ ಮೊದಲ ಚಿತ್ರಕಾರನಾಗಿ ಅವನು ಚಿತ್ರಕಲಾ ಪರಂಪರೆಯೊಂದನ್ನು ಹುಟ್ಟುಹಾಕಿದನು.

ಜಾನಪದ ಚಿತ್ರಕಲೆಗೆ ಆದಿಮಾನವನು ರಚಿಸಿದ ಸಾಂಕೇತಿಕ ಚಿತ್ರಗಳು ಪ್ರಭಾವಿಸಿರಬಹುದು. ಈ ಪ್ರಭಾವದಿಂದಲೇ ಸೂರ್ಯ, ಚಂದ್ರನ ಚಿತ್ರಗಳು, ಹಸೆ ಚಿತ್ರಗಳು, ರಂಗೋಲಿ, ಹಚ್ಚೆಯಂತಹ ಚಿತ್ರಗಳು ಆರಂಭವಾದವು. ದೇವರ ಕಲ್ಪನೆಯನ್ನು ಆದಿಮಾನವನು ಕಲ್ಪಿಸಿಕೊಂಡು ರಚಿಸಿದ ಚಿತ್ರಗಳು ಸಹ ಕಂಡುಬರುತ್ತವೆ. ಇಂದಿಗೂ ದೇವರ ಕಾರ್ಯದ ವೇಳೆಯಲ್ಲಿ, ಹಬ್ಬದ ಸಂದರ್ಭಗಳಲ್ಲಿ ಗೆರೆಗಳ ಮೂಲಕ ಹಾಕುವ ಚಿತ್ರಗಳನ್ನು ಗಮನಿಸಬಹುದು. ಈ ಹಸೆ ಅಥವಾ ರಂಗೋಲಿಯ ಮೂಲ ಆದಿಮಾನವನಿಂದಲೇ ಬಂದಿದೆ. ಮುಂದೆ ನಾಗರಿಕತೆ ಮತ್ತು ಸಂಸ್ಕೃತಿಗೆ ಮಾನವನು ಒಳಗಾದಂತೆ ಕಲೆಯನ್ನು ಬೆಳೆಸಿದನು. ಅದರಲ್ಲಿ

ಸ್ತ್ರೀಯರು ಕೂಡ ಚಿತ್ರಕಲೆಯಲ್ಲಿ ಪಾಲ್ಗೊಂಡಿರುವ ಸಾಧ್ಯತೆಯು ಹೆಚ್ಚಿದೆ. ಈ ಊಹೆಯು ಒಂದು ಪ್ರಾಕ್‌ಕಲ್ಪನೆಯಾಗಿರಬಹುದು. ಪುರುಷನು ಬೇಟೆಯಾಡಲು ಬಳಸಿರುವ ಹತಾರಗಳು ಮತ್ತು ಹತಾರಗಳ ತಯಾರಿಕೆಯನ್ನು ಸ್ತ್ರೀಯು ನೋಡಿದ್ದಾಳೆ. ಬೇಟೆಯಾಡಿ ತಂದಿರುವ ಸತ್ತ ಪ್ರಾಣಿಯನ್ನು ನೋಡಿದ್ದಾಳೆ, ತನ್ನ ಪುರುಷನ ಬಲಾಢ್ಯತೆಯನ್ನು ಕಲ್ಪಿಸಿಕೊಂಡಿದ್ದಾಳೆ. ಇದನ್ನು ಯೋಚಿಸಿರುವ ಆಕೆ ಗುಹೆಯಲ್ಲಿ ತನ್ನ ಬಿಡುವಿನ ವೇಳೆಯಲ್ಲಿ ಬೇಟೆಯಂತಹ ಚಿತ್ರಗಳನ್ನು ಬರೆದಿರಬಹುದಲ್ಲವೆ. ಅಲ್ಲದೆ ಅವುಗಳ ಜೊತೆಗೆ ಹಸೆಯಂತಹ ಸಾಂಕೇತಿಕ ಚಿತ್ರಗಳನ್ನು ಬರೆದಿದ್ದಾಳೆಂದು ಕಲ್ಪಿಸಿಕೊಳ್ಳಬಹುದಾಗಿದೆ. ಅಲ್ಲಿ ಏನೇ ನಡೆದಿರಬಹುದು, ಆದರೆ ಚಿತ್ರಗಳು ಇಂತಹ ಅನೇಕ ಯೋಚನೆಗೆ ಹಚ್ಚಬಲ್ಲದಂತು ನಿಜ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿಯೂ ಚಿತ್ರಕಲೆಯ ಪ್ರಸ್ತಾಪ ಅನೇಕ ಕೃತಿಗಳಲ್ಲಿ ಬಂದಿದೆ. ಹಳೆಗನ್ನಡ ಕಾವ್ಯಗಳನ್ನು ನೋಡಿದರೆ ಸಾಹಿತ್ಯ ಮತ್ತು ಚಿತ್ರಕಲೆಗೆ ಎಂತಹ ಆಂತರಿಕ ಸಂಬಂಧವಿದೆ ಎಂಬುದು ತಿಳಿದುಬರುತ್ತದೆ. ಇವೆರಡೂ ನೀಡಬಹುದಾದ ಭಾವ ಸಂವೇದನೆಯ ಸ್ವರೂಪ ಒಂದೇ ಆಗಿರುತ್ತದೆ. ಆದರೆ ಅಭಿವ್ಯಕ್ತಿಗೊಳ್ಳುವ ಮಾಧ್ಯಮ ಅಥವಾ ರೂಪ ಬೇರೆ ಬೇರೆ. ಪ್ರಾಚೀನ ಆದಿ ಮಾನವನು ಗವಿಗಳಲ್ಲಿ ಬರೆಯುತ್ತಿದ್ದಂದಿನಿಂದ ಬೆಳೆದ ಚಿತ್ರಕಲೆಯು ಜಾನಪದದಲ್ಲಿ ವಿವಿಧ ಶೈಲಿಗಳಲ್ಲಿ ಅಭಿವ್ಯಕ್ತಗೊಂಡಿತು. ಸಾಹಿತ್ಯವು ಸಹ ಅಕ್ಷರ ರೂಪದಲ್ಲಿ ಕಲೆಯನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತದೆ. ಇಷ್ಟೇ ಅಲ್ಲ, ಚಿತ್ರಕಲೆಯ ಬಗೆಗೆ ವಿವಿಧ ಕಾವ್ಯಗಳಲ್ಲಿ ಕವಿಯ ಅಭಿರುಚಿಯ ಪ್ರಮಾಣದಿಂದಾಗಿ ಇದು ಅಭಿವ್ಯಕ್ತಗೊಂಡಿದೆ. ಹೀಗಾಗಿ ಪ್ರಾಚೀನ ಕನ್ನಡ ಕಾವ್ಯದಲ್ಲಿ ಚಿತ್ರಕಲೆಯ ಬಗ್ಗೆ ಉಲ್ಲೇಖಗೊಂಡಿರುವ ನೆಲೆಗಳನ್ನು ಅಧ್ಯಯನಕ್ಕೆ ಒಳಪಡಿಸಿ ಇಲ್ಲಿ ವಿಶ್ಲೇಷಿಸಬೇಕಿದೆ. ಅದನ್ನು ಇಲ್ಲಿ ಮಾಡುವ ಒಂದು ಪ್ರಯತ್ನವಿದೆ.

ಈ ಹಿನ್ನೆಲೆಯಲ್ಲಿ ಕನ್ನಡ ಪ್ರಾಚೀನ ಚಿತ್ರಕಲೆಯನ್ನು ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ. ಅಧ್ಯಯನದ ಬೆಳವಣಿಗೆಗಾಗಿ ಈ ಕೆಳಗಿನಂತೆ ವಿಂಗಡಿಸಿಕೊಂಡು ಮುಂದೆ ಚರ್ಚಿಸಲಾಗಿದೆ.

೧. ಕನ್ನಡ ಪ್ರಾಚೀನ ಚಿತ್ರಕಲೆ: ಗವಿಚಿತ್ರಗಳು

೨. ಜಾನಪದ ಚಿತ್ರಕಲೆ: ಬೆಳದಿಂಗಳ ಚಿತ್ರಕಲೆ

೩. ಕನ್ನಡ ಸಾಹಿತ್ಯದಲ್ಲಿ ಚಿತ್ರಕಲೆ

### ೩.೧ ಕನ್ನಡ ಪ್ರಾಚೀನ ಚಿತ್ರಕಲೆ: ಗವಿ ಚಿತ್ರಗಳು

ಕರ್ನಾಟಕದ ಇತಿಹಾಸವನ್ನು ಚಿತ್ರಕಲೆಯ ದೃಷ್ಟಿಯಿಂದ ಅವಲೋಕಿಸಿದರೆ ಅದರಲ್ಲಿ ಭವ್ಯತೆ, ಸೌಂದರ್ಯ ಪ್ರಜ್ಞೆ, ವೈವಿಧ್ಯತೆಯ ವಿನ್ಯಾಸಗಳು ಕಾಣುತ್ತವೆ. ಪ್ರಾಗೈತಿಹಾಸಿಕ

ಕಾಲದಿಂದಲೂ ಇದರ ಇರುವಿಕೆಯನ್ನು ಗಮನಿಸಬಹುದಾದಂತಹ ಕಲ್ಲಾಸರೆಯ ಚಿತ್ರಗಳು ಇಲ್ಲಿ ದೊರಕಿವೆ. ಈ ಕಲ್ಲಾಸರೆಯ ಚಿತ್ರಗಳ ಶೋಧನೆಯ ಕಾರ್ಯವು ಸುಮಾರು ೧೫೦ ವರ್ಷಗಳಷ್ಟು ಹಿಂದೆಯೇ ನಡೆದಿದೆ. ಈ ಚಿತ್ರಗಳು ತಮ್ಮ ದಿನನಿತ್ಯದ ಬದುಕಿನ ಸಫಲತೆ, ತಾವು ಕಂಡಂತಹ ಪ್ರಾಣಿಗಳ ಗಾಂಭೀರ್ಯತೆ, ನೈಸರ್ಗಿಕ ಚೆಲುವಿಗೆ ಮೋಹಿತರಾಗಿ ಇಂತಹ ಚಿತ್ರಗಳನ್ನು ಬರೆದಿರಬಹುದು ಎಂಬ ನಿಟ್ಟಿನಲ್ಲಿ ಸಂಶೋಧನೆಗಳಾಗಿವೆ. ಇಂತಹ ಕೆಲವು ಸಂಶೋಧನೆಗಳ ಚಾರಿತ್ರಿಕ ಬೆಳವಣಿಗೆಯನ್ನು ಇಲ್ಲಿ ಗಮನಿಸಲಾಗಿದೆ.

**೩.೧.೧ ಸಂಶೋಧನಾತ್ಮಕ ಬೆಳವಣಿಗೆ**

ಆಕಸ್ಮಿಕವೆಂಬಂತೆ ಕರ್ನಾಟಕದಲ್ಲಿ ಪ್ರಾಗೈತಿಹಾಸಿಕವಾದ ದೃಶ್ಯಕಲೆಯ ಶೋಧನಾ ಚಟುವಟಿಕೆಗಳು ಆರಂಭವಾದವು. ಈ ಆರಂಭವು ಕುತೂಹಲದಾಯಕವಾಗಿತ್ತೇ ಹೊರತು ಸಂಶೋಧನೆಯ ಮಾದರಿಯದ್ದು ಆಗಿರಲಿಲ್ಲ. ಕರ್ನಾಟಕದಲ್ಲಿ ೧೮೮೦ರಲ್ಲಿ ಅಕಸ್ಮಿಕವಾಗಿಯೇ ಫ್ಲೂಲರ್ಟ ನಾಕ್ಸ ಮೊದಲು ಶೋಧಿಸಲು ಶುರುಮಾಡಿದರು. ಇವರು ಬಳ್ಳಾರಿಯ ಹತ್ತಿರದ ಕಪ್ಪಗಲ್ಲು ಸಮೀಪದಲ್ಲಿ ಕುಟ್ಟಿ/ಗೀರು ಕೊರೆದ ರೀತಿಯಲ್ಲಿ ಬಿಡಿಸಿದ ಚಿತ್ರಗಳನ್ನು ನೋಡಿದರು. ಇಲ್ಲಿಯ ಗವಿಗಳಲ್ಲಿ ಸುಮಾರು ೨೦ಕ್ಕಿಂತ ಹೆಚ್ಚು ಪಕ್ಷಿ ಮತ್ತು ಪ್ರಾಣಿಗಳ ಚಿತ್ರದ ಬಂಡೆಯಾಶ್ರಯಗಳಿವೆ. ೧೯೧೦ರಲ್ಲಿ ಸಿಂಗನಪುರದ ಗವಿಗಳನ್ನು ಒಬ್ಬ ರೈಲ್ವೆ ಅಧಿಕಾರಿಯು ಶೋಧಿಸುತ್ತಾನೆ. ಈತನು ಕಲ್ಕತ್ತೆಯ ಕಲಾಶಾಲೆಯ ಮುಖ್ಯಾಧಿಕಾರಿಯಾಗಿದ್ದ ಪರ್ಸಿಜಾನ್‌ರವರಿಗೆ ಈ ವಿಷಯವನ್ನು ತಿಳಿಸುತ್ತಾನೆ. ಅವರು ಈ ಸ್ಥಳವನ್ನು ಸಂದರ್ಶಿಸಿದ ಬಳಿಕ ಇವು ಪ್ರಾಚೀನ ಮಾನವರ ಕಲಾನಿರ್ಮಿತಿಗಳೆಂದು ನಿರ್ಧರಿಸುತ್ತಾರೆ. ಇಲ್ಲಿ ಕೊರೆದಿರುವ ಚಿತ್ರಗಳು ಕರ್ನಾಟಕದಲ್ಲಿ ದೊರೆತ ಚಿತ್ರಗಳಿಗಿಂತಲೂ ಉತ್ತಮವಾಗಿವೆ.

ಅನಂತರದಲ್ಲಿ ಆರ್ಚಿಬಾಲ್ಡ್ ಕಾರ್ಲೈಲ್ ಮತ್ತು ಜಾಜ್ರಿಕ್ ಬರ್ನ ಮಧ್ಯಪ್ರದೇಶದ ಕೆಲವು ಭಾಗಗಳಲ್ಲಿ ಶೋಧನೆ ನಡೆಸಿದರು. ಇದರ ಪ್ರತಿಫಲವಾಗಿ ಅವರಿಗೆ ಮಿರ್ಜಾಪುರದ ಸಮೀಪದ ಸುಮಾರು ಬೆಟ್ಟಗಳಲ್ಲಿನ ಕಲ್ಲಾಸರೆಗಳಲ್ಲಿ ವರ್ಣಚಿತ್ರಗಳನ್ನು ಗಮನಿಸಿದರು. ಇಂತಹ ಶೋಧನೆಗಳು ಕರ್ನಾಟಕದ ಮೇಲೆಯು ಪ್ರಭಾವಿಸಿತು.

೧೯೩೫ರಲ್ಲಿ ಲಿಯೋನಾರ್ಡ್‌ಮನ್ ಅವರು ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಹಿರೇಬೆನಕಲ್ ಗುಡ್ಡ ಪ್ರದೇಶಗಳಲ್ಲಿ ಮೂರು ಗವಿಚಿತ್ರಗಳನ್ನು ಹುಡುಕಿದರು. ನಂತರದಲ್ಲಿ ಅದೇ ಕಾಲಘಟ್ಟದಲ್ಲಿ ಭಿಲ್ಲಮರಾಯನ ಗುಡ್ಡದಲ್ಲಿ ಕುಟ್ಟಿದ ಮತ್ತು ಗೀರು ಚಿತ್ರಗಳನ್ನು ಕಂಡುಹಿಡಿದರು.

ಇವರ ಶೋಧನೆಯ ನಂತರ ೧೯೪೦ರ ದಶಕದಲ್ಲಿ ಹೈದರಾಬಾದ್ ಸಂಸ್ಥಾನದ ಪುರಾತತ್ವ ಸರ್ವೇಕ್ಷಣ ಮತ್ತು ಭೂವಿಜ್ಞಾನ ವಿಭಾಗಗಳು ಕ್ರಮವಾಗಿ ಕುಟ್ಟಿದ ಮತ್ತು ಗವಿವರ್ಣ

ಚಿತ್ರಗಳನ್ನು ಶೋಧಿಸಿದರು. ಅವು ಮಸ್ಕಿ ಕಲ್ಲೂರು, ಬಲಚಕ್ರ ಯಾದಗಿರಿ ಜಿಲ್ಲೆ ಮತ್ತು ಆಕನೂರು ಎಂಬಲ್ಲಿ ದೊರೆತಿದ್ದವು. ಇವುಗಳ ವಿಶ್ಲೇಷಣೆಯನ್ನು ತಮ್ಮ ಶಾಖೆಗಳ ವಾರ್ಷಿಕದಲ್ಲಿ ಪ್ರಕಟಿಸಲಾಯಿತು. ಈ ತರಹದ ಸಂಶೋಧನೆಗಳು ನಿರಂತರವಾಗಿ ನಡೆಯುತ್ತಲೇ ಇವೆ ಎಂಬುದುಕ್ಕೆ ಇದು ಒಂದು ಸಾಕ್ಷಿಯಾಗಬಲ್ಲದು.

೧೯೫೭ರಲ್ಲಿ ಮುಂಬೈ ಸರ್ಕಾರದ ಕನ್ನಡ ಸಂಶೋಧನ ಸಂಸ್ಥೆಯು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ವಿಲೀನವಾಯಿತು. ಈ ವಿಲಿನಕ್ಕೂ ಮೊದಲೇ ಈ ಸಂಸ್ಥೆಯು ೧೯೫೧ರಲ್ಲಿ ಕುಳ್ಳೊಳ್ಳಿ ಜಮಖಂಡಿ ತಾಲ್ಲೂಕ ಬಿಜಾಪುರ ಜಿಲ್ಲೆಯಲ್ಲಿಯ ಗೀರಿದ, ಕುಟ್ಟಿದ ಚಿತ್ರಗಳನ್ನು ಪ್ರಕಟಿಸಿತು. ನಂತರದಲ್ಲಿ ಅಲ್ಚಿನ್ ದಂಪತಿಗಳು ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಪಿಕ್ಲಿಹಾಳನಲ್ಲಿ ಕೆಲವು ಚಿತ್ರಗಳನ್ನು ಶೋಧಿಸಿದರು. ಇವರು ಇದರ ಬಗ್ಗೆ ೧೯೬೦ರಲ್ಲಿ 'ಪಿಕ್ಲಿಹಾಳ ಎಕ್ಸವೇಷನ್ಸ್' ಎಂಬ ಅಧ್ಯಯನವನ್ನು ಮಾಡಿ ಪ್ರಕಟಿಸಿದರು.

೧೯೬೫ರಲ್ಲಿ ಎಂ.ಎಸ್.ನಾಗರಾಜರಾವ್ ಮತ್ತು ಮಲ್ಹೋತ್ರ ಕೆ.ಸಿ. ತೆಕ್ಕಲಕೋಟೆಯ ಬಂಡೆ ಚಿತ್ರಗಳನ್ನು ಕುರಿತು 'ದಿ ಸ್ಟೋನ್ ಏಜ್ ಹಿಲ್ ಡ್ವೆಲ್ಲರ್ಸ್ ಆಫ್ ತೆಕ್ಕಲಕೋಟೆ' ಎಂಬ ಅಧ್ಯಯನವನ್ನು ಮಾಡಿದರು. ನಾಗರಾಜರಾವ್ ಎಂ.ಎಸ್. ಮತ್ತು ಅನ್ಸಾರಿ ಝುಡ್ ಡಿ. ಅವರು ಬಳ್ಳಾರಿಯ ಸಂಗನಕಲ್ಲನ್ನು ೧೯೬೯ರಲ್ಲಿ 'ಎಕ್ಸವೇಷನ್ಸ ವಿತ್ ಸಂಗನಕಲ್ಲು' ಎಂಬ ಅಧ್ಯಯನ ಕೈಗೊಂಡರು. ಇದರಿಂದ ತೆಕ್ಕಲಕೋಟೆ ಮತ್ತು ಸಂಗನಕಲ್ಲು ಪ್ರದೇಶಗಳಲ್ಲಿ ಪ್ರಾಚೀನ ಚಿತ್ರಕಲೆಯ ಬಗ್ಗೆ ವಿಶ್ಲೇಷಣಾತ್ಮಕ ಅಧ್ಯಯನವೊಂದು ನಾಗರಾಜ ಎಂ. ಎಸ್. ಇವರಿಂದ ಶುರುವಾಯಿತು. ತೆಕ್ಕಲಕೋಟೆಯಲ್ಲಿರುವ ಒಂದು ಕಲ್ಲಾಸರೆಯಲ್ಲಿ ಆರು ಮನುಷ್ಯರ, ಎರಡು ನಾಯಿ, ಒಂದು ಗೂಳಿಯ ಚಿತ್ರ ಒಂದು ಮಗ್ಗುಲಿನಲ್ಲಿದ್ದರೆ, ಇನ್ನೊಂದು ಮಗ್ಗಲಲ್ಲಿ ಮೂರು ಜನರ ಮತ್ತು ಹದಿಮೂರು ಜನರ ಗುಂಪು ಕೈ ಕೈ ಹಿಡಿದು ನರ್ತನ ಮಾಡುತ್ತಿರುವ ಚಿತ್ರಗಳಿವೆ. ಸಂಗನಕಲ್ಲಿನ ಒಂದು ಕಲ್ಲಾಸರೆಯಲ್ಲಿ ಚಿತ್ರವಿದೆ. ಇದು ಪ್ರಾಗೈತಿಹಾಸಿಕ ಕಾಲದ್ದಲ್ಲ, ಅದರ ಶೈಲಿ ಮತ್ತು ರೇಖಾ ವಿನ್ಯಾಸಗಳನ್ನು ಗಮನಿಸಿದರೆ ಅದು ಆದಿಮಾನವನು ರಚಿಸಿದ ಚಿತ್ರಗಳನ್ನು ಹೋಲುತ್ತದೆ ಎಂದು ಅಧ್ಯಯನಕಾರರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಬೆಳಗಲ್ಲು, ಕುರುಗೋಡು, ಅಪ್ಪಯ್ಯನಹಳ್ಳಿಗಳಲ್ಲಿ ಸಹ ಇದೇ ಕಾಲಾವಧಿಯಲ್ಲಿ ಸಂಶೋಧನೆಯನ್ನು ಹಲವಾರು ಸಂಶೋಧಕರು ಮಾಡಿದರು.

ಈ ಹಿಂದೆ ಲಿಯೋ ನಾರ್ಡಮನ್ ಅವರು ಹಿರೇಬೆನಕಲ್ಲಿನ ಸುತ್ತ ಮುತ್ತಲ ಚಿತ್ರದ ನೆಲೆಗಳನ್ನು ಶೋಧಿಸಿದ್ದರು. ಇವಲ್ಲದೇ ಹೊಸದಾಗಿ ಒಂಭತ್ತು ಕಡೆ ಚಿತ್ರಗಳನ್ನು ಅ.ಸುಂದರ ಅವರು ೧೯೬೮ರಲ್ಲಿ ಶೋಧಿಸಿದರು. ಇದರ ಬಗೆಗೆ ಸಂಶೋಧನಾತ್ಮಕವಾಗಿ 'ಫರ್ದರ್ ನೋಟಿಸಸ್ ಆಫ್ ರಾಕ್ ಪೆಂಟಿಂಗ್ಸ ಇನ್ ಬೆನಕಲ್, ರಾಯಚೂರ್ ಡಿಸ್ಟ್ರಿಕ್ಟ್' ಎಂಬ ಬರಹವನ್ನು ಮಾಡಿದರು.

೧೯೭೪ರಿಂದ ಕರ್ನಾಟಕದ ವಿವಿಧ ಭಾಗಗಳಿಗೆ ಸಂಚರಿಸಿ ಪ್ರಾಚೀನ ಚಿತ್ರಕಲೆಯ ಅನ್ವೇಷಣೆಯ ಕಾರ್ಯವನ್ನು ಕೈಗೊಂಡರು. ಅವುಗಳಲ್ಲಿ ಮುಖ್ಯವಾಗಿ ರಾಮದುರ್ಗ, ಬಾದಾಮಿ, ಹೊಸಮಹಾಕೂಟ, ಐಹೊಳೆ, ಕೊಪ್ಪಳದ ಬಿಳೆಬಾವಿ, ನಾರಾಯಣಪೇಟೆ, ಬಂಡಿಹರ್ಲಾಪುರ, ಮಲ್ಲಾಪುರ, ಆನೆಗೊಂದಿ, ತಿರುಮಲಾಪುರ (ಗಂಗಾವತಿ ತಾ.) ಮಾನ್ವಿ, ಬೈಲಮರ್ಚೇಡ್ ಈ ಪ್ರದೇಶಗಳಲ್ಲಿ ವರ್ಣಚಿತ್ರಗಳನ್ನು ಪತ್ತೆಹಚ್ಚಿದರು. ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಜಟಂಗರಾಮೇಶ್ವರ, ಚಿತ್ರದುರ್ಗದ ಚಂದ್ರವಳ್ಳಿ, ಕೊಪ್ಪಳ ಜಿಲ್ಲೆಯ ತಾವರೆಗೆರೆ, ಬಳ್ಳಾರಿ ಜಿಲ್ಲೆಯ ಕುರುಗೋಡು, ಹಳಕುಂದಿ, ಧಾರವಾಡದ ಹಳೇಮಾದಾಪುರ, ಅಂಕೋಲಾದ ಬೋಳೆ, ಶಿವಮೊಗ್ಗದ ಮುತ್ತನಹಳ್ಳಿ ಮುಂತಾದಕಡೆ ಕುಟ್ಟಿದ ಮತ್ತು ಗೀರು ಚಿತ್ರಗಳನ್ನು ಶೋಧಿಸಿದರು. ಇವುಗಳ ಬಗ್ಗೆ ಸಮಗ್ರ ಅಧ್ಯಯನ ನಡೆಸಿ ಸಂಶೋಧನಾತ್ಮಕ ಲೇಖನಗಳನ್ನು ಪ್ರಕಟಿಸಿದರು. ಇವರ 'ಕರ್ನಾಟಕ ಚರಿತ್ರೆ ಸಂಪುಟ ೧ರಲ್ಲಿ ಪ್ರಾಗೈತಿಹಾಸಿಕ ಕಾಲದ ಜನರ ಸಂಸ್ಕೃತಿ, ನಾಗರಿಕತೆ ಮತ್ತು ಕಲೆಯ ಬಗ್ಗೆ ಅಧ್ಯಯನದ ಬರಹಗಳನ್ನು ಮಂಡಿಸಿದ್ದಾರೆ.

೧೯೭೭ರಲ್ಲಿ ಎಂ.ಎಸ್.ಕೃಷ್ಣಮೂರ್ತಿ ಅವರು ಕುರುಗೋಡಿನ ಚಿತ್ರಕಲೆಯನ್ನು ಕುರಿತು ಅಧ್ಯಯನ ನಡೆಸಿದರು. ಅವರ 'ಕುರುಗೋಡು ಆ್ಯನ್ ಆರ್ಕಿಯಲಜಿಕಲ್ ನೋಟ್ ಆರ್ಕಿಯಲಜಿಕಲ್ ಸ್ಟಡೀಸ್', ೧೯೯೪ರಲ್ಲಿನ ಅ.ಸುಂದರ ಅವರು 'ಕರ್ನಾಟಕ ಪ್ರಾಗೈತಿಹಾಸ ಕಾಲದ ಕಲೆ', ೧೯೯೮ರಲ್ಲಿ ನರಸಿಂಹಮ್ ಡಬ್ಲ್ಯೂ ವಿ.ಎಸ್. ಅವರ 'ಕುರುಗೋಡು ಕೇವ್ ಆರ್ಟ', ೨೦೦೪ರಲ್ಲಿನ ಶರಣಬಸಪ್ಪ ಕೋಲ್ಕಾರ ಅವರ 'ಪ್ರಾಕ್ಚಾರಿತ್ರಿಕ ಚಿತ್ರಕಲೆ' ಇವೆಲ್ಲ ಕುರುಗೋಡಿನ ಮತ್ತು ಪ್ರಾಗೈತಿಹಾಸ ಕಾಲದ ಚಿತ್ರಕಲೆಯನ್ನು ಕುರಿತು ಮಹತ್ವದ ಬೆಳವಣಿಗೆಗಳಾಗಿವೆ.

೧೯೮೩ರಲ್ಲಿನ 'ಸಂಶೋಧನೆಯ ಹಾದಿಯಲ್ಲಿ' ಕೃತಿಯಲ್ಲಿ ಶ್ರೀಶೈಲ ಆರಾಧ್ಯರು ಚಂದ್ರವಳ್ಳಿ ಮತ್ತು ಬ್ರಹ್ಮಗಿರಿಯಲ್ಲಿ ಸುಮಾರು ಇಪ್ಪತ್ತೊಂದಕ್ಕೂ ಹೆಚ್ಚು ವರ್ಣ ಮತ್ತು ಬಯಲುಬಂಡೆ ಚಿತ್ರಗಳನ್ನು ಪತ್ತೆ ಹಚ್ಚಿರುವ ಮಾಹಿತಿಯು ದೊರೆಯುತ್ತದೆ. ಲಕ್ಷ್ಮಣ ತೆಲಗಾವಿಯವರು ಚಿತ್ರದುರ್ಗ ಜಿಲ್ಲೆಯಲ್ಲಿ ಇಪ್ಪತ್ತಕ್ಕೂ ಹೆಚ್ಚು ಕಡೆ ಸಂಶೋಧನೆ ನಡೆಸಿದ್ದಾರೆ. ಕಮಲಾಪುರದ ವರ್ಣದ ಮತ್ತು ಕೊರೆದ ಚಿತ್ರಗಳನ್ನು ಇದೇ ವೇಳೆಯಲ್ಲಿ ಇವರು ಸಂಶೋಧಿಸಿದ್ದಾರೆ. ವಸಂತ ಶೆಟ್ಟಿಯವರು ಕುಂದಾಪುರದ ಬಳಿಯಲ್ಲಿರುವ 'ಗಾವಳಿ' ಎಂಬಲ್ಲಿ ಬಯಲುಬಂಡೆ ಮತ್ತು ಗೀರು ಚಿತ್ರಗಳನ್ನು ಶೋಧಿಸಿದರು. ಈ ಬಗ್ಗೆ ಅವರು 'ಪ್ರಿ ಹಿಸ್ಟಾರಿಕ್ ರಾಕ್ ಬ್ರೂಯಿಸಿಂಗ್ಸ ಫ್ರಾಮ್ ದಕ್ಷಿಣಕನ್ನಡ'ದಲ್ಲಿ ದಾಖಲಿಸಿದ್ದಾರೆ. ಎಚ್.ಆರ್.ರಘುರಾಮ್ ಭಟ್ಟರು ಸೊಂದಾದಲ್ಲಿ ಚಿತ್ರಗಳನ್ನು ಹುಡುಕಾಟ ಮಾಡಿದರು. ಕೆಲವು ನೆಲೆಗಳನ್ನು ಶೋಧಿಸಿದರು.

ಹಂಪಿ ಸುತ್ತಮುತ್ತಲ ಪ್ರದೇಶಗಳಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ ಮತ್ತು ರಾಜ್ಯ ಸರ್ಕಾರದ ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯದವರು ಬಂಡೆಯಾಸರೆಯ ಚಿತ್ರಗಳನ್ನು, ಗವಿಚಿತ್ರಗಳನ್ನು, ಗೀರು ಚಿತ್ರಗಳನ್ನು ಶೋಧಿಸಿದ್ದಾರೆ.

ರು.ಮ.ಷಡಕ್ಷರಯ್ಯ ಮತ್ತು ಸ್ವಿಡ್ಜರಲ್ಯಾಂಡಿನ ಈ.ಓ.ಟಿಲ್ನರ್ ಮತ್ತು ಶ್ರೀ ಶೆಟ್ಟಿಯವರು ಮಲ್ಲಾಪುರದ ಗವಿಚಿತ್ರಗಳನ್ನು ಶೋಧಿಸಿದರು. ಗೋರ್ಡನ್ ಎಂಬುವರು ಬೆಂಗಳೂರು ಜಿಲ್ಲೆಯ ಗೋಕಗಿರಿ ಬೆಟ್ಟ ಹಾಗೂ ದೊಡ್ಡ ಕನ್ನೆಳ್ಳಿ ಚಿತ್ರಗಳನ್ನು ಪರಿಶೀಲಿಸಿದರು. ಇವರ ೧೯೫೮ರಲ್ಲಿ 'ದಿ ಪ್ರಿ ಹಿಸ್ಟಾರಿಕ್ ಬ್ಯಾಗ್ರೌಂಡ ಆಫ್ ಇಂಡಿಯನ್ ಕಲ್ಚರ್' ಎಂಬಲ್ಲಿ ಈ ಚಿತ್ರಕಲೆಯ ಬಗ್ಗೆ ದಾಖಲಿಸಿದರು.

೧೯೯೬ರಲ್ಲಿ ವಿಶ್ವನಾಥ ಜೆ. ಮತ್ತು ಮಂಜುನಾಥ ಎಂ. ಜೆ. ಇವರು ಬೆಂಗಳೂರಿನ ಜಿಲ್ಲೆಯ ಸಾಸಲುವಿನಲ್ಲಿ ಕೆಲವು ಚಿತ್ರಗಳನ್ನು ಹುಡುಕಿದರು. ಅದನ್ನು ಇವರು 'ಸಾಸಲುವಿನ ಬೃಹತ್ ಶಿಲಾಯುಗದ ಸ್ಮಾರಕಗಳು ಮತ್ತು ರೇಖಾಚಿತ್ರಗಳು' ಎಂಬ ಲೇಖನವನ್ನು ಪ್ರಕಟಿಸಿದರು. ಮುಕ್ತರಾಜರವರು ೧೯೯೫ರಲ್ಲಿ 'ಸೂಳೆಕಲ್ ಮಠದ ಗುಹಾಚಿತ್ರಗಳು' ಎಂಬ ಲೇಖನವನ್ನು ಸೂಳೇಕಲನಲ್ಲಿ ದೊರೆತ ಚಿತ್ರಗಳನ್ನು ದಾಖಲಿಸಿದರು.

ವಿಲಾಸ ಮ. ಜೋಗುಳ ಅವರು ೧೯೯೬ರಲ್ಲಿ 'ತಾವರಗೇರಾದಲ್ಲಿ ಕಲ್ಲಾಸರೆಯ ವರ್ಣಚಿತ್ರಗಳ ಶೋಧನೆ' ಎಂಬ ಲೇಖನದಲ್ಲಿ ತಾವರಗೇರಾವನ್ನು ಪರಿಚಯಿಸಿದರು. ದೇವರಕೊಂಡಾ ರೆಡ್ಡಿ ೨೦೦೧ರಲ್ಲಿ 'ಗಬ್ಬೂರಿನಲ್ಲಿ ಪ್ರಾಗೈತಿಹಾಸಿಕ ಅವಶೇಷಗಳ ಪತ್ತೆ' ಎಂಬ ಲೇಖನದ ಮೂಲಕ ರಾಯಚೂರಿನ ಗಬ್ಬೂರಿನಲ್ಲಿ ಪ್ರಾಚೀನ ರೇಖಾ ಚಿತ್ರಗಳನ್ನು ಶೋಧಿಸಿದ್ದಾರೆ.

ಹೀಗೆ ಕರ್ನಾಟಕದ ರಾಯಚೂರು, ಚಿತ್ರದುರ್ಗ, ಕೊಪ್ಪಳ, ಗದಗ, ಬಳ್ಳಾರಿ, ಬಿಜಾಪುರ, ಬಾಗಲಕೋಟೆ, ಬೆಳಗಾವಿ, ಗುಲಬರ್ಗಾ, ಹಾವೇರಿ, ಶಿವಮೊಗ್ಗ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಮಂಡ್ಯ ಮುಂತಾದ ಜಿಲ್ಲೆಗಳಲ್ಲಿನ ಕಲ್ಲಾಸರೆಯ ವರ್ಣಚಿತ್ರ, ಗೀರು ಕುಟ್ಟಿದ ಚಿತ್ರಗಳನ್ನು ಪ್ರಮುಖವಾಗಿ ಕಾಣಬಹುದು. ಈ ನೆಲೆಗಳನ್ನು ೧೯, ೨೦ ಮತ್ತು ೨೧ ನೇ ಶತಮಾನದಲ್ಲಿ ಹಲವಾರು ವಿದ್ವಾಂಸರು ಸಂಶೋಧಿಸಿರುವುದನ್ನು ಕಾಣಬಹುದು, ಈ ಸಂಶೋಧನೆಯ ಐತಿಹಾಸಿಕ ಬೆಳವಣಿಗೆಯಿಂದ ಪ್ರಾಚೀನ ಚಿತ್ರಕಲೆಯ ರೂಪ ಮತ್ತು ಆ ನೆಲೆಗಳ ವೈವಿಧ್ಯವನ್ನು ಗಮನಿಸಬಹುದು. ಈ ಚಿತ್ರಕಲೆಯ ಆಕೃತಿ ಮತ್ತು ಆಶಯಗಳ ಉದ್ದೇಶವೇನು ಎಂಬುದನ್ನು ನಿಖರವಾಗಿ ಹೇಳಲು ಸಾಧ್ಯವಾಗಿಲ್ಲ. ಆದರೆ ಹಲವು ಪ್ರಾಚ್ಯ ಕಲ್ಪನೆಯನ್ನು ನೀಡಿದ್ದಾರೆ. ಈ ಅಧ್ಯಯನಗಳು ಪ್ರಾಚೀನ ಚಿತ್ರಕಲೆಯ ಮೊದಲ ಹಂತವನ್ನು ಪರಿಚಯಿಸುತ್ತವೆ. ಅಲ್ಲದೇ ಆದಿಮಾನವರ ಹವ್ಯಾಸಗಳ ಮೇಲೆ ಬೆಳಕು ಚೆಲ್ಲುತ್ತವೆ. ಪ್ರಾಗೈತಿಹಾಸಿಕ ಕಾಲದ ಮಾನವನ ಜನಸಂಸ್ಕೃತಿ ಮತ್ತು ನಾಗರಿಕತೆಯನ್ನು ಶೋಧಿಸಿಕೊಟ್ಟಿರುವುದು ಕಾಣಬರುತ್ತದೆ.

### ೩.೧.೨ ಗವಿ ಮತ್ತು ಕಲ್ಲಾಸರೆಯ ಚಿತ್ರಗಳು

ಶಿಲಾಯುಗದ ಮಾನವನ ಸಂಸ್ಕೃತಿ ಮತ್ತು ನಾಗರಿಕತೆಯನ್ನು ನಿರೂಪಿಸುವ ದಾಖಲೆಗಳೆಂದರೆ ಗವಿಚಿತ್ರಗಳು, ಅವನ ಬದುಕನ್ನು ವ್ಯಾಖ್ಯಾನಿಸುವ ವೇಳೆಯಲ್ಲಿ ಬಳಕೆಯಾಗುವ ಸಾಕ್ಷ್ಯಾಧಾರಗಳಲ್ಲಿ ಆ ಕಾಲದ ಗುಹಾ ಚಿತ್ರಗಳು ಪ್ರಮುಖವಾದವು, ಅವನು ರಚಿಸಿದ ಚಿತ್ರಗಳು ಆಧುನಿಕ ಚಿತ್ರಕಲೆಯ ಚೌಕಟ್ಟಿನ ಸೌಂದರ್ಯಪ್ರಜ್ಞೆಗೆ ಹೋಲಿಕೆಯಾಗದಿದ್ದರೂ, ಆ ಕಾಲದ ದೃಷ್ಟಿಯಿಂದ ಅವು ನೈಜವಾದವು. ಅವು ಕೇವಲ ಭಾವ ತೀವ್ರತೆಯ ಅಭಿವ್ಯಕ್ತಿ ಮಾಧ್ಯಮವಾಗಿ ಮಾತ್ರವೇ ಪರಿಣಮಿಸಿಲ್ಲ. ಈ ಹಿನ್ನೆಲೆಯಲ್ಲಿ ಅ. ಸುಂದರ ಅವರು ಪ್ರಾಚೀನ ಮಾನವನ ಕಲೆಯನ್ನು ಕುರಿತು ಹೀಗೆ ವ್ಯಕ್ತಪಡಿಸಿದ್ದಾರೆ: "ಆಗಿನ (ಪ್ರಾಚೀನ) ಜನವರ್ಗಗಳ ಜೀವನದಲ್ಲಿ ಎರಡು ಪ್ರಧಾನ ಅಂಶಗಳು: ಜೀವನ ಭರಣಕ್ಕೆ ಯಶಸ್ಕರ ಆಹಾರ ಸಂಪಾದನೆ, ಆಹಾರವಾಗುವ ಪಶು-ಪಕ್ಷಿಗಳ, ಗಿಡ-ಮರ-ಬಳ್ಳಿಗಳ ಸಮೃದ್ಧ ಬೆಳವಣಿಗೆಗೆ ಮತ್ತು ತಮ್ಮ ತಮ್ಮ ವಂಶಾಭಿವೃದ್ಧಿ. ಈ ಆಶೋತ್ತರಗಳ ಯಶಸ್ವಿ ಪೂರೈಕೆಗೆ (ಪ್ರಾಯಶಃ ಕೆಲವು ಆಕಸ್ಮಿಕ ಘಟನೆಗಳ ಕಾರಣದಿಂದ) ಕೆಲವು ನಂಬಿಕೆಗಳು, ತತ್ಸಂಬಂಧ ಕಟ್ಟುಕಟ್ಟಳೆಗಳು ಬೆಳೆದು ಬಂದವು."[೧] ಇವರು ಕಲೆಯ ಉಗಮದ ಪ್ರಾಥಮಿಕ ಉದ್ದೇಶವನ್ನು ಗುರುತಿಸಿದ್ದಾರೆ. ಆದಿಮಾನವನು ಈ ಎರಡು ಕಾರಣಗಳನ್ನು ಬಿಟ್ಟು ಇನ್ನೂ ಬೇರೆ ಬೇರೆ ಕಾರಣಗಳಿಂದಲೂ ಚಿತ್ರಕಲೆಯನ್ನು ಬೆಳೆಸಿರಬಹುದು. ಅದಾಗ್ಯೂ ಇವರ ಅಭಿಪ್ರಾಯವನ್ನು ಒಪ್ಪಬಹುದಾಗಿದೆ. ಚಿತ್ರಕಲೆ ಎಂದರೇನೇ ಪ್ರಸಿದ್ಧವಾದ ಮತ್ತು ನಯ ನಾಜೂಕಿನಿಂದ ಕೂಡಿದ ಚಿತ್ರಗಳನ್ನೇ ಶ್ರೇಷ್ಠವೆಂದು ಗ್ರಹಿಸುವ ಕ್ರಮವಿದೆ. ಈ ಅಂಶವನ್ನು ಗಮನಿಸಿದಾಗ ಆದಿ-ಮಾನವನ ಚಿತ್ರಕಲೆಯಲ್ಲಿ ನಾಜೂಕಿಲ್ಲದೆ ಇದ್ದರೂ, ಸೌಂದರ್ಯ ಪ್ರಜ್ಞೆಯ ಚೌಕಟ್ಟಿನಲ್ಲಿ ನೋಡದೇ ಇದ್ದರೂ, ಅವನ ಚಿತ್ರಕಲೆಯ ರಚನೆಗೆ ಮಹತ್ತರವಾದ ಉದ್ದೇಶವಿರಬೇಕು ಸುಮ್ಮನೆಯಂತೂ ಬರೆದಿರಲಾರ ಎಂಬುದನ್ನು ಅ. ಸುಂದರರವರ ಅಭಿಪ್ರಾಯದಲ್ಲಿದೆ.

ಆದಿಮಾನವನು ಚಿತ್ರಕಲೆಯನ್ನು ಆನಂದಕ್ಕಾಗಿ ರಚಿಸುತ್ತಿದ್ದನು ಎಂಬುದರ ಬಗ್ಗೆಯೂ ಚರ್ಚೆಯನ್ನು ನಡೆಸಿದ್ದಾರೆ. ಅಲ್ಲದೆ ಕೇವಲ ಸಂತೋಷಕ್ಕಾಗಿ ಮಾತ್ರವಲ್ಲ ಇನ್ನೂ ಬೇರೆಯಾವುದೋ ಸ್ಪಷ್ಟ ಉದ್ದೇಶವಿರಬೇಕು ಎಂದು ತರ್ಕಿಸುವವರು ಇದ್ದಾರೆ. ಇಂತಹ ಸಂಗತಿಯನ್ನು ಕುರಿತು ಕೆ. ಶಿಮರಾಮ ಕಾರಂತರು ವೈಚಾರಿಕವಾಗಿ ಆಲೋಚಿಸಿದ್ದಾರೆ. ಅವರು "ಇದು ಬರಿಯ ಸಂತೋಷಕ್ಕಲ್ಲ, ಇನ್ನಾವುದೋ ಸ್ಪಷ್ಟ ಉದ್ದೇಶಕ್ಕೆ - ಎಂದು ತರ್ಕಿಸುತ್ತಾರೆ. ತಾವು ಬರೆದ ಚಿತ್ರ ಜೀವಂತ ಪ್ರಾಣಿಯ ಪ್ರೇರಕವಾಗಬೇಕು: ಹಾಗಿದ್ದರೆ ಮಾತ್ರ ಬರೆದ ಚಿತ್ರಗಳಲ್ಲಿರುವ ಪ್ರಾಣಿ ತಮ್ಮ ಹತೋಟಿಗೆ ಸಿಗಲೇಬೇಕು - ಎಂಬ ಭಾವನೆಯಿಂದ ಬರೆದಂತಿದೆ. ಅವರು ಇವೇ ಪ್ರಾಣಿಗಳ ಬೇಟೆಯ ದೃಶ್ಯಗಳನ್ನು ಬರೆದಿದ್ದಾರೆ. ಅವನ್ನು ಈಟಿಯಿಂದ ತಿವಿದಂತೆ, ಅದಕ್ಕೆ

ಅಂಬನ್ನೆಸೆದಂತೆ, ಅಂಬಿನ ಗಾಯದಿಂದ ಅವುಗಳ ಕರುಳು ಕೆಳಕ್ಕುರುಳಿದಂತೆ ಬರೆದಿದ್ದಾರೆ. ಅವುಗಳ ಸಮೀಪವೇ ಬೇಟೆಯಾಡುವವರ, ಅವುಗಳಿಂದ ಗಾಯಗೊಂಡು ಬಿದ್ದ ಮಾನವರ ಚಿತ್ರಗಳೂ ಇವೆ. ಅವು ಮಾತ್ರ ಸಾಂಕೇತಿಕ ಚಿತ್ರಗಳಾಗಿವೆ; ವಾಸ್ತವಿಕವಲ್ಲದವು. ತಮ್ಮ ತದ್ವತ್ ಆಕೃತಿಗಳನ್ನು ಬರೆಯದೆಯೇ ಪ್ರಾಣಿಗಳ ಆಕೃತಿಗಳನ್ನಷ್ಟೇ ಆ ರೀತಿಯಲ್ಲಿ ಬರೆದಿದ್ದರು. ನೈಸರ್ಗಿಕ ವಿದ್ಯಮಾನಗಳನ್ನು ಕುರಿತು ಅವರ ಭಾವಜೀವನ ಯಾವ ರೀತಿಯದು, ಎಂದು ಅದು ತೋರಿಸಬಲ್ಲದು. ಅವರು ತಮ್ಮನ್ನು ಹಿಂಸಿಸಬಲ್ಲ ಕರಡಿ, ಸಿಂಹಗಳ ಚಿತ್ರಗಳನ್ನು ಬರೆದಿದ್ದಾರೆ. ತಮ್ಮ ಶಕ್ತಿಯನ್ನು ಮೀರಬಲ್ಲ ಹೆಬ್ಬಾನೆಗಳ ಚಿತ್ರಗಳನ್ನು ಬರೆದದ್ದೂ ಉಂಟು. ಹೀಗೆ ಅವರು ವಶೀಕರಣ ಬುದ್ಧಿಯಿಂದ ಬರೆದ ಅಸಂಖ್ಯ ಚಿತ್ರಗಳು ಕಾಣಸಿಗುತ್ತವೆ." ಎಂದು ಶಿವರಾಮ ಕಾರಂತರು ಅಭಿವ್ಯಕ್ತಪಡಿಸಿದ್ದಾರೆ.[೨] ಇವರ ಅಭಿಪ್ರಾಯದಂತೆ ಆದಿಮಾನವನು ಆನಂದ ಮತ್ತು ಪ್ರಾಣಿ ಬೇಟೆಯ ವಶೀಕರಣದ ನೆಲೆಯಿಂದ ಚಿತ್ರಕಲೆಯನ್ನು ರೂಢಿಸಿಕೊಂಡಿರಬಹುದೆಂಬ ನೆಲೆಗೆ ಬಂದಿದ್ದಾರೆ.

ರಂಗಾರೆಡ್ಡಿ ಕೋಡಿರಾಂಪುರ ಅವರು "ನಾಗರಿಕತೆಯ ಇತಿಹಾಸವನ್ನು ಕೆದಕಿ ನೋಡಿದಾಗ ಅನೇಕ ಪ್ರದೇಶಗಳಲ್ಲಿ ಹೆಚ್ಚು ಕಡಿಮೆ ಒಂದೇ ಕಾಲದಲ್ಲಿಯೇ ಕಲೆಗಳು ಅರಳಲು ಆರಂಭವಾಗಿವೆ ಎಂಬುದು ತಿಳಿಯುತ್ತದೆ. ಅತ್ಯಂತ ಪುರಾತನವಾದ ಕಲೆ ಎಂದರೆ ಆದಿವಾಸಿ ಮಾನವ ತನ್ನ ಗುಹೆಗಳ ಒಳಗೆ ಬಿಡಿಸಿರುವ ಗೋಡೆಗಳ ಮೇಲಿನ ಚಿತ್ರಗಳು. ಈ ಚಿತ್ರಗಳಲ್ಲಿ ತಮ್ಮ ಬದುಕನ್ನು ಕುರಿತು ಯೋಚನೆ ಮಾಡಲು ಆರಂಭಿಸಿರುವುದು ಕಂಡುಬರುತ್ತದೆ. ಮನುಷ್ಯನಿಗೆ ಬುದ್ಧಿ ಚುರುಕಾಗುತ್ತ ಬಂದಂತೆ ಬೇಟೆಯಾಡುವುದನ್ನು ಕ್ರೀಡೆಯನ್ನಾಗಿ ಮಾಡಿಕೊಂಡು ಅದನ್ನು ಶಾಶ್ವತವಾಗಿ ಮುಂದಿನ ಜನಾಂಗಕ್ಕೆ ತಿಳಿಸುವ ಸಲುವಾಗಿ ಚಿತ್ರಬಿಡಿಸುವುದನ್ನು ಮಾಧ್ಯಮವನ್ನಾಗಿ ಮಾಡಿಕೊಂಡ, ಇಲ್ಲಿಂದ ಚಿತ್ರಕಲೆ ಉದಯವಾಯಿತು," [೩]

ಆದಿಮಾನವನಿಗೆ ಚಿತ್ರಕಲೆಯೆಂಬುದು ಕ್ರೀಡೆ ಮತ್ತು ಪೀಳಿಗೆಯಿಂದ ಪೀಳಿಗೆಗೆ ವರ್ಗಾಯಿಸುವ ಮಾಧ್ಯಮವಾಗಿ ಚಿತ್ರಕಲೆಯ ಮಹತ್ವವನ್ನು ಇವರು ಗುರುತಿಸಿದ್ದಾರೆ. ಚಿತ್ರಕಲೆಯನ್ನು ರೂಢಿಸಿಕೊಳ್ಳುವುದಕ್ಕೆ ನಿರ್ದಿಷ್ಟವಾದ ಮತ್ತು ನಿಖರವಾದ ಕಾರಣಗಳು ಒಂದೆರಡು ಅಲ್ಲ, ಎಂಬುದಕ್ಕೆ ಈ ಮೇಲಿನ ವಿಶ್ಲೇಷಣೆಗಳು ಸಾಕ್ಷಿಯಾಗಬಲ್ಲವು.

ಎಚ್. ಶ್ರೀಶೈಲ ಆರಾಧ್ಯ ಅವರು ಗುಹಾಚಿತ್ರಗಳನ್ನು ಕುರಿತು ಈ ಕೆಳಗಿನ ಅಭಿಪ್ರಾಯಕ್ಕೆ ಬರುತ್ತಾರೆ. ಅವರು "ಭಾಷೆಯೆಂಬುದು ಭಾವಾಭಿವ್ಯಕ್ತಿಗೆ ಮಾಧ್ಯಮ, ವಾಹಕ, ಇದು ಪೂರ್ಣವಾಗಿ ರೂಪುಗೊಳ್ಳದ ಕಾಲದಲ್ಲಿ ಭಾಷೆ ಮಾಡುವ ಅದೆಷ್ಟೋ ಕೆಲಸವನ್ನು ಗುಹಾಚಿತ್ರಗಳು ಮಾಡಿವೆ. ಸಂಸ್ಕೃತಿಯ ವಿಕಸನದೊಡನೆ ಚಿತ್ರ ರಚನೆ ಚಿತ್ರಕಲೆಯಾಯಿತು. ಇದು ಸೌಂದರ್ಯ ಮೀಮಾಂಸೆಯ ಹುಟ್ಟಿಗೂ ನಿಮಿತ್ತವಾಯಿತು." ಎಂದು ಭಾಷೆಯ ಒಂದು ಮಾಧ್ಯಮ, ಸಂಸ್ಕೃತಿಯ ವಿಕಾಸವೆಂದು ಚಿತ್ರಕಲೆಯನ್ನು ವಿಶ್ಲೇಷಿಸಿಕೊಳ್ಳುತ್ತಾರೆ.[೪]

ಬಿ. ವಿ. ಕೆ. ಶಾಸ್ತ್ರೀ ಯವರು 'ಪ್ರಾಚೀನ ಚಿತ್ರಕಲೆ' ಎಂಬ ಲೇಖನದಲ್ಲಿ 'ಚಿತ್ರಕಲೆಯು ಮನುಷ್ಯನ ಸೌಂದರ್ಯಾನುಭವದ ಪ್ರತಿಬಿಂಬ. ತಮ್ಮ ನಿವಾಸಗಳಲ್ಲಿ ಅಲಂಕರಿಸುವ ದೃಷ್ಟಿಯಿಂದಲೂ ಚಿತ್ರಗಳನ್ನು ಬರೆದಿರಬಹುದು. ಅದು ಬುಡಕಟ್ಟಿನವರ ಹೆಗ್ಗುರುತಾಗಿ ಇವನ್ನು ರಚಿಸಿರಬಹುದು. ಬಿಡುವಿನ ವೇಳೆಯಲ್ಲಿನ ವಿನೋದಕ್ಕಾಗಿಯಾದರೂ ಬಿಡಿಸಿರುವ ಸಾಧ್ಯತೆಗಳನ್ನು ಅವರು ಗುರುತಿಸುತ್ತಾರೆ' [೫]

ಈ ಚಿಂತಕರ ಅಭಿಪ್ರಾಯ ಮತ್ತು ವ್ಯಾಖ್ಯಾನಗಳನ್ನು ಗಮನಿಸಿದಾಗ ಚಿಂತನಾತ್ಮಕ ಅಂಶಗಳು ಹೊಳೆಯುತ್ತವೆ. ಪ್ರಾಚೀನ ಚಿತ್ರಕಲೆಯು ಏಕೆ ಮಹತ್ವವುಳ್ಳದ್ದಾಗಿದೆ? ಆದಿಮಾನವನ ಅಭಿವ್ಯಕ್ತಿ ಮತ್ತು ಅವನೊಬ್ಬ ಮಾನವ ಸಂಸ್ಕೃತಿಯ ವಿಕಾಸದ ನೇತಾರನಾಗಿದ್ದು ಗಮನ ಸೆಳೆಯುತ್ತದೆ. ಭಾಷೆಯ ಸಾಂಕೇತಿಕರಣ ಆದಿಮಾನವ ಅಭಿವ್ಯಕ್ತಿ ಮಾಧ್ಯಮವಾಗಿದ್ದುದು ಗಮನ ಸೆಳೆಯುತ್ತದೆ. ಗವಿಚಿತ್ರಗಳನ್ನು ಅವನು ಬರೆಯಲು ಕಾರಣಗಳೇನಿರಬಹುದೆಂದು ಊಹಿಸಬಹುದು. ಅಲಂಕಾರಕ್ಕಾಗಿರಬಹುದೇ? ಬುಡಕಟ್ಟು ಅಥವಾ ಕಾಲವನ್ನು ಕಟ್ಟಿಕೊಳ್ಳಬೇಕಾಗಿರಬಹುದೇ? ಆಯಾ ಬುಡಕಟ್ಟಿನ ವಾರಸುದಾರಿಕೆ ಅಥವಾ ಯಜಮಾನಿಕೆಯ ಭಾಗವಾಗಿರಬಹುದೇ? ಅವರ ಚಿತ್ರಗಳಲ್ಲಿರುವ ಸಾಂಕೇತಿಕ ಚಿತ್ರಗಳು ಇದು ನಮ್ಮ ಕುಲ, ಬುಡಕಟ್ಟಿನ ನೆಲೆಯನ್ನು ಗುರುತಿಸಬಲ್ಲದು ಎಂಬ ಕಾರಣವಿರಬಹುದೇ? ಆಹಾರ ಮತ್ತು ವಂಶಾಭಿವೃದ್ಧಿ, ಆನಂದ ಮತ್ತು ಪ್ರಾಣಿ ವಶೀಕರಣ, ಕ್ರೀಡೆ ಮತ್ತು ಪೀಳಿಗೆಯಿಂದ ಪೀಳಿಗೆಗೆ ವರ್ಗಾವಣೆ, ಅದೊಂದು ಭಾಷಾ ಮಾಧ್ಯಮ, ಸಾಂಕೇತಿಕರಣ ಮತ್ತು ಸಂಸ್ಕೃತಿಯ ವಿಕಾಸದ ನೆಲೆ. ಸೌಂದರ್ಯಪ್ರಜ್ಞೆ, ವಿನೋದ ಮುಂತಾಗಿ ಏನೆಲ್ಲಾ ಕಾರಣಗಳಿಂದ ಚಿತ್ರಕಲೆಯು ಪರಿಣಮಿಸಿರಲು ಸಾಧ್ಯವಿದೆ.

ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಗವಿ, ಕಲ್ಲಾಸರೆಗಳಲ್ಲಿ ಚಿತ್ರಕಲೆಯು ಆರಂಭವಾಯಿತು, ಆಧುನಿಕ ಮತ್ತು ಸಮಕಾಲೀನ ಚಿತ್ರಕಲೆಯು ವಿಶಿಷ್ಟವಾಗಿ ಬೆಳೆಯುತ್ತಿರುವ ಸಂದರ್ಭವಿತ್ತು, ಆ ಸಂದರ್ಭದಲ್ಲಿಯೇ ಗವಿಚಿತ್ರಗಳ ಹುಡುಕಾಟ ನಡೆಯಿತು. ಪ್ರಾಗೈತಿಹಾಸಿಕ ಕಾಲದಿಂದಲೂ ಚಿತ್ರಕಲೆಯು ಬೆಳೆದು ಬಂದಿರುವುದನ್ನು ಕರ್ನಾಟಕದ ಅನೇಕ ಭಾಗಗಳಲ್ಲಿ ಕಾಣಬಹುದು. ಲಿಪಿ ಮತ್ತು ಭಾಷೆಯ ಪೂರ್ವದಲ್ಲಿ ತನ್ನ ಅಭಿವ್ಯಕ್ತಿ ಮಾಧ್ಯಮದ ಗುರುತಾಗಿ ಇದನ್ನೂ ಬಳಸುತ್ತಿದ್ದರು. ಹೀಗಾಗಿ ಕರ್ನಾಟಕದಲ್ಲಿ ಪ್ರಾಗೈತಿಹಾಸಿಕ ಕಾಲದಲ್ಲಿ ಜನತೆ ಇಂಥಹದೊಂದು ಮಾಧ್ಯಮದಲ್ಲಿ ಬಾಳಿರಬೇಕು. ಅನೇಕ ಸಂಶೋಧಕರು ಈ ನೆಲೆಗಳನ್ನು ಶೋಧಿಸಿ ಅಧ್ಯಯನ ನಡೆಸಿದ್ದಾರೆ.

ಆದಿಮಾನವನು ತನ್ನ ಆರಂಭದ ಹಂತದಲ್ಲಿ ಚಿತ್ರಗಳನ್ನು ಗಂಭೀರವಾಗಿ ಪರಿಗಣಿಸಿ ಬರೆದಂತೆ ಕಂಡುಬರುವುದಿಲ್ಲ. ಈತನು ಒಂದು ಬೃಹತ್ ಬಂಡೆಯ ಒಂದು ಕಲ್ಲಾಸರೆಯ

ಭಾಗದಲ್ಲಿನ ನಿರ್ದಿಷ್ಟವಾದ ಚೌಕಟ್ಟಿನ ಒಳಗೆ ಚಿತ್ರಗಳನ್ನು ಬಿಡಿಸುವ ಕೌಶಲ್ಯತೆಯನ್ನು ಮೆರೆದಿದ್ದಾನೆ. ಕೆಲವು ಸಂದರ್ಭದಲ್ಲಿ ಬಂಡೆಯ ಆಯ್ಕೆಯು ಇಷ್ಟವಾದಲ್ಲಿ ಬಂಡೆಯು ಕೈಗೆಟುಕದಿದ್ದರೂ ಅಟ್ಟಣಿಗೆಯ ಸಹಾಯದಿಂದ ಮನುಷ್ಯಾಕೃತಿಯನ್ನು ಬರೆದ ಉದಾಹರಣೆಗಳಿವೆ.

**೩.೧.೩ ಗವಿಚಿತ್ರಗಳು: ರೂಪ ಮತ್ತು ವಿನ್ಯಾಸ**

ಆದಿಮಾನವನು ತನ್ನ ಆರಂಭಿಕ ಹಂತದಲ್ಲಿ ಚಿತ್ರಗಳನ್ನು ಗಂಭೀರವಾಗಿ ಪರಿಗಣಿಸಿ ಬರೆದಂತೆ ಕಂಡುಬರುವುದಿಲ್ಲ. ಆದರೆ ಆತನ ಕಲೆಗೆ ತನ್ನದೆ ಆದ ಇತಿಹಾಸವಿರುವುದಂತೂ ಸತ್ಯ. ಈ ಸತ್ಯಶೋಧನೆಯ ನೆಲೆಯಲ್ಲಿ ಆತನ ಚಿತ್ರಕಲೆಯ ರೂಪ ಮತ್ತು ವಿನ್ಯಾಸಗಳು ಅವನ ಕಾಲಕ್ಕೆ ಅಗತ್ಯವೇಕೆ ಇರಬಹುದೆಂದರೆ, ಒಂದು ದೈವೀಕರಣ ನೆಲೆ ಮತ್ತೊಂದು ಸಾಂಸ್ಕೃತೀಕರಣ ನೆಲೆ ಎಂಬ ಎರಡು ಕಾರಣಗಳಿರಬಹುದು. ಈ ಹೊತ್ತಿನ ಸಂದರ್ಭದಲ್ಲಿ ನಿಂತು ಅವನ ಚಿತ್ರಕಲೆಯ ಕಸಬುಗಾರಿಕೆಯನ್ನು ಗಮನಿಸಿದರೆ ಅವನ ಚಿತ್ರಗಳಲ್ಲಿ ಸ್ಪಷ್ಟರೂಪವಿಲ್ಲ, ಕೆಲವು ಚಿತ್ರಗಳು ಅಮೂರ್ತವಾದ ಮಾದರಿಗಳಲ್ಲಿವೆ. ನುರಿತ ಚಿತ್ರಕಲಾವಿದನಾಗಿರಲು ಸಾಧ್ಯವಿಲ್ಲ ಎಂಬ ಇಂತಹ ಅನೇಕ ತಿರ್ಮಾನಗಳಿಗೆ ಬರಬಹುದು, ಆದರೆ ಅವನಲ್ಲಿಯ ಯಾವುದೋ ಒಂದು ಶಕ್ತಿ ಚಿತ್ರಕಲೆಗೆ ಸ್ಫೂರ್ತಿ ಕೊಟ್ಟಿರಬಹುದು ಎಂದು ನಮಗೆ ಅನ್ನಿಸದೆ ಇರಲಾರದು. ಆತನು ಒಂದು ಬೃಹತ್ ಬಂಡೆಯ ಒಂದು ಕಲ್ಲಾಸರೆಯ ನಿರ್ದಿಷ್ಟ ಭಾಗದಲ್ಲಿ ತನ್ನ ಕಲ್ಪನೆಯಲ್ಲಿ ಫಲಕವೊಂದನ್ನು ಮಾಡಿಕೊಂಡಿರಬಹುದು ಎಂದು ಊಹಿಸಬಹುದು. ಆ ಫಲಕದ ಚೌಕಟ್ಟಿನ ಒಳಗೆ ಚಿತ್ರಗಳನ್ನು ಬಿಡಿಸುವ ಕೌಶಲ್ಯತೆಯನ್ನು ಮೆರೆದಿದ್ದಾನೆ. ಕೆಲವು ಸಂದರ್ಭದಲ್ಲಿ ಬಂಡೆಯ ಆಯ್ಕೆಯು ಇಷ್ಟವಾದಲ್ಲಿ ಬಂಡೆಯು ಕೈಗೆಟುಕದಿದ್ದರೂ ಅಟ್ಟಣಿಗೆಯ ಸಹಾಯದಿಂದಲೂ ಚಿತ್ರಗಳನ್ನು ಬರೆದ ಉದಾಹರಣೆಗಳಿವೆ. ಆಧುನಿಕ ಕಾಲದಲ್ಲಿ ನಿಂತು ನಾವು ಆದಿಮಾನವನ ಚಿತ್ರಕಲೆಗೆ ಮಾರುಹೋಗದೇ ಇರಲು ಸಾಧ್ಯವಿಲ್ಲ. ಈ ವಿಚಾರವನ್ನು ಕುರಿತು ಎಂ. ಎಚ್. ಕೃಷ್ಣಯ್ಯನವರು "ಇಂದು ಮಕ್ಕಳ ಕಲೆಯ, ಪ್ರಾದಿಮ ಜನಾಂಗ ಕಲೆಯ ಮತ್ತು ಜನಪದ ಕಲೆಯ ಬಗೆಗಿನ ಆಸಕ್ತಿ ಮತ್ತು ಆಧುನಿಕ ಕಲೆಯ ಮೇಲಿನ ಪ್ರಭಾವಗಳನ್ನು ಗಮನಿಸಿದಾಗ ಕಲಾಪರಂಪರೆ ಒಂದು ಸುತ್ತು ಸುತ್ತಿ ಬಂದಿದೆ ಎನಿಸುತ್ತದೆ" ಎನ್ನುತ್ತಾರೆ.[೬] ಈ ಮಾತು ಪ್ರಾದಿಮ ಮಾನವನನ್ನು ಬಿಟ್ಟು ಆಧುನಿಕ ಚಿತ್ರಕಲೆಯನ್ನು ಊಹಿಸಲು ಸಾಧ್ಯವಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದಂತಿದೆ. ಎಲ್ಲಾ ಕಲೆಗಳು ಒಂದು ಸುತ್ತು ಪೂರೈಸಿ ಮತ್ತೆ ಸುತ್ತು ಆರಂಭಿಸಿರಬಹುದು ಎಂಬುದು ಅವರ ಅಭಿಪ್ರಾಯ. ಅವರು ಮುಂದುವರೆದು ಮಾತನಾಡುತ್ತಾ "ಪ್ರಾದಿಮ ಮಾನವನ ಕಲೆಯನ್ನು ಮಾಂತ್ರಿಕ ಕಲೆ ಎನ್ನಲಾಗಿದೆ. ಆಹಾರಕ್ಕಾಗಿ ಬೇಟೆ, ಪ್ರಾಣಿಗಳನ್ನು ಕೊಲ್ಲುವ ಬಗೆ, ಬೇಟೆಯಾಡುವಾಗಿನ ಸಾವು ನೋವಿನ ಭೀತಿ, ಹುಟ್ಟುಸಾವಿನ ಭಯ, ನಿಸರ್ಗದ ಘಟನೆಗಳು, ಎಲ್ಲ ನಿಗೂಢ. ಅವುಗಳ ಮೇಲೆ ನಿಯಂತ್ರಣ ಸಾಧಿಸುವ ಉದ್ದೇಶದಿಂದ, ಪ್ರಾಣಿಗಳನ್ನು

ಕೊಂದಂತೆ ಚಿತ್ರಿಸಿ ಅನಂತರ ಬೇಟೆಯಾಡಿದರೆ ಇಚ್ಛೆ ಪೂರೈಸಬಹುದೆಂಬ ನಂಬಿಕೆ – ಮಾಂತ್ರಿಕ ಕಲೆಯ ಪ್ರೇರಣೆ. ಆದರೆ ಇದಿಷ್ಟೇ ಅಲ್ಲ. ಆತನಲ್ಲಿದ್ದ ಸುಪ್ತಕಲಾ ಸಂವೇದನೆ, ಸೌಂದರ್ಯ ಪ್ರಜ್ಞೆಯೂ ಅಲ್ಲಿ ವ್ಯಕ್ತವಾಗಿದೆ. "ಆಗಲೇ ಅವನಲ್ಲಿ ತಾಂತ್ರಿಕ ಜಾಣ್ಮೆಯೂ ಕಂಡು ಬರುತ್ತದೆ. ಗುಹೆಯ ಬಂಡೆ, ಭಿತ್ತಿ, ಚಾವಣಿ, ಬಂಡೆಯಾಸರೆಗಳ ಆಯ್ಕೆ, ಮಣ್ಣು–ಸಸ್ಯಗಳಿಂದ ಬಣ್ಣ ತಯಾರಿಕೆ. ಕಡ್ಡಿ, ಮೂಳೆ, ಕಲ್ಲಿನ ಉಪಕರಣಗಳ ಬಳಕೆ, ಸಮರೂಪ, ಸಮತೋಲನಗಳ ಕೆತ್ತನೆ, ರೇಖೆಗಳ ಪ್ರಮಾಣ, ಆಕೃತಿ ಆಕಾರಗಳ ಲಯ, ವಿನ್ಯಾಸ ಮುಂತಾದವು ತಂತ್ರಕೌಶಲ್ಯ ಮತ್ತು ಸಂವೇದನೆಗಳ ಅಭಿವ್ಯಕ್ತಿಯನ್ನು ಉತ್ತಮ ಮಟ್ಟದಲ್ಲಿಯೇ ತೋರುತ್ತವೆ" ಎಂದು ಎಂ. ಎಚ್. ಕೃಷ್ಣಯ್ಯ ಅವರು ಪ್ರಾಚೀನ ಆದಿಮಾನವನ ಕಲೆಯನ್ನು ಗುರುತಿಸಿದ್ದಾರೆ.[೭] ಪ್ರಾಚೀನ ಆದಿಮಾನವನು ರೂಪ ಮತ್ತು ವೈಶಿಷ್ಟ್ಯ, ದೈವೀಕರಣ, ಮಾಂತ್ರೀಕರಣ ಹೀಗೆ ವಿವಿಧ ಹಿನ್ನೆಲೆಯಲ್ಲಿ ಚಿತ್ರಕಲೆಯನ್ನು ರೂಢಿಸಿಕೊಂಡನು ಎಂಬುದು ತಿಳಿದುಬರುತ್ತದೆ. ಅವನು ಏಕಮುಖಿಯಾದ ಉದ್ದೇಶದಿಂದ ಚಿತ್ರಕಲೆಯನ್ನು ರಚಿಸಿದ್ದರೂ ಇಂದು ಬಹುಮುಖಿಯಾಗಿ ನಮ್ಮ ಅಧ್ಯಯನಗಳು ನಡೆಯಬೇಕಾದ ಅಗತ್ಯವಿದೆ. ಅಂತಹ ಬಹುಮುಖಿ ನೆಲೆಯಲ್ಲಿಯೇ ಅವನ ಚಿತ್ರಕಲೆಯನ್ನು ವಿಶ್ಲೇಷಿಸಿರುವುದನ್ನು ವಿದ್ವಾಂಸರು ಮಾಡಿದ್ದಾರೆ. ಶರಣಬಸಪ್ಪ ಕೋಲ್ಕಾರ ಅವರ 'ಶಿಲಾಯುಗದ ಗವಿಚಿತ್ರಗಳು' ಕೃತಿಯು ಆದಿಮಾನವನ ಚಿತ್ರಕಲೆಯ ವೈವಿಧ್ಯವನ್ನು ದಾಖಲಿಸಿರುವುದು ಕಂಡುಬರುತ್ತದೆ. ಹಂಪಿ–ಕೊಪ್ಪಳ ಪ್ರದೇಶದಲ್ಲಿ ಹಲವಾರು ಗವಿಚಿತ್ರಗಳನ್ನು ಹುಡುಕಾಡಿ ಅಧ್ಯಯನ ಮಾಡಿರುವವರಲ್ಲಿ ಅವರೂ ಒಬ್ಬರು. ಅವರ ಈ ಕೃತಿಯು ಕಲ್ಲಾಸರೆಗಳಲ್ಲಿ ಕಂಡ ಚಿತ್ರಗಳನ್ನು ಕುರಿತು ವಿವರಣಾತ್ಮಕವಾದ ನೋಟವೊಂದನ್ನು ಕೊಟ್ಟಿದೆ. ಆದರೆ ಅದರಲ್ಲಿ ಬಳಸಿದ ಗವಿಚಿತ್ರಗಳ ವಿಶ್ಲೇಷಣೆಯ ಕೊರತೆ ಎದ್ದುಕಾಣುತ್ತದೆ. ಅಲ್ಲದೆ ಅಧ್ಯಯನ ಸಂದರ್ಭದಲ್ಲಿ ಅವರು ಉಲ್ಲೇಖಿಸಿದ ಬಹುತೇಕ ಸ್ಥಳಗಳಿಗೆ ಭೇಟಿ ನೀಡಿದಾಗ ಕೆಲವು ಚಿತ್ರಗಳು ಅಳಿಸಿಹೋಗಿವೆ. ಕೆಲವು ಕಲ್ಲುಗಣಿಗಾರಿಕೆಯಿಂದ ನಾಶಹೊಂದಿವೆ. ಕೆಲವು ಅಸ್ಪಷ್ಟವಾಗಿ ಗೋಚರವಾಗುತ್ತವೆ. ಈ ಕಾರಣದಿಂದಾಗಿ ಕೋಲ್ಕಾರ ಅವರ ಚಿತ್ರಗಳು ಮತ್ತು ನನ್ನ ಕ್ಷೇತ್ರ ಕಾರ್ಯದ ಚಿತ್ರಗಳನ್ನು ಮುಂದೆ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.

**ಚಿತ್ರ ೧**

ಕೊಪ್ಪಳದ ಗವಿಮಠದ ಬೆಟ್ಟ ಮತ್ತು ಮಳೆಮಲ್ಲೇಶ್ವರ ಬೆಟ್ಟದಲ್ಲಿ ಒಂಬತ್ತು ಕಲ್ಲಾಸರೆಗಳಿವೆ. ಗವಿಮಠದಿಂದ ಆಗ್ನೇಯ ದಿಕ್ಕಿಗೆ ಒಂದು ಗವಿಯಿದೆ, ಈ ಗವಿಯ ಕಲ್ಲಾಸರೆಯಲ್ಲಿ ಹದಿಮೂರು ಪ್ರಾಣಿಗಳ ಒಂದು ಸಮೂಹವಿದೆ. ವಿಶೇಷವೆಂದರೆ ಒಂದೇ ಜಾತಿಯ ಪ್ರಾಣಿಗಳಲ್ಲ ಅವು. ಐದು ಜಿಂಕೆಗಳು, ಒಂದು ಕೆಚ್ಚಲುಳ್ಳ ಆಕಳು, ಎತ್ತು, ಕಾಡೆಮ್ಮೆ, ತೋಳ, ಟಗರಿನ ಚಿತ್ರಗಳಿವೆ. ಇದರಲ್ಲಿ ಎರಡು ಚಿತ್ರಗಳು ಅಮೂರ್ತವಾಗಿವೆ. ಅದರಲ್ಲಿ ಒಂದು ಚಿತ್ರವು ಕುದುರೆಯ ದೇಹವನ್ನು



ಹೊಂದಿದ್ದು, ಮುಖವು ಅಸ್ಪಷ್ಟವಾಗಿದೆ. ಈ ಚಿತ್ರಗಳೆಲ್ಲವೂ ರೇಖಾ ವಿನ್ಯಾಸಗಳಿಂದ ರಚಿಸಲ್ಪಟ್ಟಿದೆ. ಕಾಡುಕೋಣ ಮತ್ತು ಜಿಂಕೆಗೆ ಕೆಂಪು ಬಣ್ಣ ತುಂಬಿ ಛಾಯಾರೂಪದಲ್ಲಿ ಕಾಣುವಂತೆ ಬಿಡಿಸಿದ್ದಾರೆ. ಇಲ್ಲಿನ ಕೆಲವು ಪ್ರಾಣಿಗಳ ಮೂತಿ ಮತ್ತು ಬಾಲದಲ್ಲಿ ಬಣ್ಣವನ್ನು ತುಂಬಲಾಗಿದೆ. ಹದಿಮೂರು ಚಿತ್ರಗಳ ರೂಪ ಮತ್ತು ವಿನ್ಯಾಸ ಏಕಮಾದರಿಯಲ್ಲಿ ಇರದೇ ವಿಭಿನ್ನವಾದ ಮಾದರಿಗಳಿಂದ ಬಿಡಿಸಿರುವುದು ಕಂಡುಬರುತ್ತದೆ. ಇದರಿಂದಾಗಿಯೇ ಈ ಚಿತ್ರಗಳಲ್ಲಿ ನೈಜತೆಯು ಎದ್ದುಕಾಣುತ್ತದೆ. ಎರಡೇ ಎರಡು ಪ್ರಾಣಿಗಳಿಗೆ ಮಾತ್ರ ಸಂಪೂರ್ಣ ಬಣ್ಣವನ್ನು ತುಂಬಿರುವುದರಿಂದ ಆ ಚಿತ್ರಗಳಿಗೆ ಮಹತ್ವ ಕೊಟ್ಟಿರಬಹುದು ಎನ್ನಿಸುತ್ತದೆ. ಇಲ್ಲವೇ ಒಂದೊಂದು ಚಿತ್ರವೂ ಬೇರೆ ಬೇರೆ ಕಾಲಾವಧಿಯಲ್ಲಿ ರಚಿಸಿರುವುದರಿಂದ ಈ ಭಿನ್ನತೆ ಬಂದಿರಲು ಸಾಧ್ಯವಿದೆ. ಆಧುನಿಕ ಚಿತ್ರಶೈಲಿಯಲ್ಲಿ ಒಂದು ಚಿತ್ರವನ್ನು ಕೇಂದ್ರಿತ ಚಿತ್ರವಾಗಿ ಬಿಡಿಸುವಾಗ, ಅದರ ಹಿಂದಿನ ದೃಶ್ಯಾವಳಿ ಚಿತ್ರಗಳು ಗೌಣವಾಗುತ್ತವೆ. ಇದೊಂದು ಮಾದರಿ ಚಿತ್ರಕಲೆಯಲ್ಲಿದೆ. ಅದನ್ನು ಆದಿಮಾನವನು ಕಾಡುಕೋಣ ಮತ್ತು ಜಿಂಕೆಯ ಚಿತ್ರಗಳು ಅಂತಹ ಕೇಂದ್ರಿತ ಚಿತ್ರಗಳಾಗಿ, ಉಳಿದವು ಗೌಣವಾಗಿ ಬಿಡಿಸಿರುವ ಸಾಧ್ಯತೆಯೂ ಇರಬಹುದು. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಆದಿಮಾನವನಿಗೆ ಈ ಹಿನ್ನೆಲೆ (Background) ಆಧಾರಿತವಾದ ಚಿತ್ರಗಳನ್ನು ಬಿಡಿಸಿರಬಹುದು ಎನ್ನಿಸುತ್ತದೆ. ಅಲ್ಲದೆ ಅವನಿಗೆ ದೂರ, ಕಾಲ, ಪ್ರಮಾಣದ ಅರಿವು ಅವನಿಗೆ ಇರಲಿಲ್ಲವೆನ್ನಬಹುದು. ಆದಿಮಾನವನ ಚಿತ್ರಗಳು ಹೇಗಿವೆ ಎಂದರೆ ಸಂಪೂರ್ಣವಾಗಿ ಎಲ್ಲ ಚಿತ್ರಗಳ ಕಡೆಗೂ ದೃಷ್ಟಿ ಹಾಯಿಸುವಷ್ಟು ವಿಭಿನ್ನವಾಗಿವೆ. ಆಧುನಿಕ ಈ ಹಿನ್ನೆಲೆಯಲ್ಲಿ ಚಿತ್ರಗಳನ್ನು ಬಿಡಿಸುತ್ತಿರುವುದನ್ನು ಗಮನಿಸಬಹುದು. ಅವನು ಸಹ ಆಕರ್ಷಣೆಗಾಗಿ ಬಣ್ಣ ತುಂಬುವ ಶೈಲಿಯನ್ನು ಬಳಸಿರಬಹುದು. ಅಲ್ಲದೆ ನಾಜೂಕಿನಿಂದ ಜಿಂಕೆಯ ಕೊಂಬು, ಬಾಲ, ತೋಳದ ಬಾಲ ನೈಜತೆಯಿಂದ ರಚಿತವಾಗಿರುವಂತೆ ಕಾಣುತ್ತವೆ.

**ಚಿತ್ರ ೨**

ಗವಿಮಠದ ಅಶೋಕನ ಶಾಸನದ ಈಶಾನ್ಯ ದಿಕ್ಕಿಗೆ ಒಂದು ಕಲ್ಲಾಸರೆಯಿದೆ. ಈ ಕಲ್ಲಾಸರೆಯ ಛಾವಣಿಯಲ್ಲಿ ಕೆಂಪು ಬಣ್ಣದಿಂದ ಕೂಡಿದ ಬಾಹ್ಯರೇಖೆಗಳ ಚಿತ್ರಗಳಿವೆ. ಬಿಲ್ಲಿನ ಸಹಿತ ಇರುವ ಒಬ್ಬ ಬೇಟೆಗಾರ, ಎರಡು ಸತ್ತ ಪ್ರಾಣಿಗಳು, ಮತ್ತೆ ಎರಡು ಜೀವಂತ ಪ್ರಾಣಿಗಳಂತಿರುವ ಚಿತ್ರಗಳಿವೆ. ಚಲಿಸುತ್ತಿರುವ ಬಾಣದ ಚಿತ್ರವಿದೆ. ಇಲ್ಲಿನ ಬಹುತೇಕ ಚಿತ್ರಗಳು ಅಪೂರ್ಣತೆಯಿಂದ

ಕೂಡಿವೆ. ಬಾಣದ ಚಲನೆಯಿದೆ ಹೊರತು ಸತ್ತ ಪ್ರಾಣಿಗಳಿಗೆ ಚುಚ್ಚಿರುವ ಗುರುತು ಆ ಚಿತ್ರದಲ್ಲಿ ಕಾಣುವುದಿಲ್ಲ. ಈ ಚಿತ್ರಗಳು ಈ ಹಿಂದಿನ ಚಿತ್ರಗಳಷ್ಟು ಪ್ರೌಢವಾಗಿಲ್ಲ. ಅಸಂಪೂರ್ಣವಾಗಿವೆ. ಒಂದಕ್ಕೊಂದು ಅಪ್ರಮಾಣದಲ್ಲಿವೆ. ಒಂದು ಚಿಕ್ಕ ಪ್ರಾಣಿಗೆ ಸಂಯೋಜಿಸಿರುವ ಬಣ್ಣ ಆ ಪ್ರಾಣಿಯನ್ನು ಗುರುತು ಹಚ್ಚುವಲ್ಲಿ ಸಹಾಯ ಮಾಡಿಲ್ಲ. ರೇಖಾ ವಿನ್ಯಾಸ ಮತ್ತು ಚಿತ್ರರೂಪ ಹಿಂದಿನ ಚಿತ್ರಗಳಷ್ಟು ಆಕರ್ಷಕವಾಗಿಲ್ಲ. ಬಹುಶಃ ಈ ಚಿತ್ರಗಳನ್ನು ಬಿಡಿಸಿದವನು ಬೇರೆಯ ಕಾಲಘಟ್ಟಕ್ಕೆ ಸೇರಿದವನು ಆಗಿರಬಹುದು. ಮೊದಲಿನ ಚಿತ್ರಕಾರನಿಗೂ ಈ ಚಿತ್ರಗಾರನಿಗೂ ಕಾಲದ ವ್ಯತ್ಯಾಸವಿರಬಹುದು.



**ಚಿತ್ರ ೩**

ಗಂಗಾವತಿ–ಮುನಿರಾಬಾದ್ ರಸ್ತೆಯಲ್ಲಿನ ಬಸಾಪುರದಿಂದ ದಕ್ಷಿಣಕ್ಕೆ ಸುಮಾರು ೩ ಕಿ. ಮೀ ದೂರದ ತುಂಗಭದ್ರ ನದಿ ಎಡದಂಡೆಯ ಮೇಲೆ ನಾರಾಯಣಪೇಟೆ ಗ್ರಾಮವಿದೆ. ಈ ಬೆಟ್ಟದಲ್ಲಿ ನಾಲ್ಕು ಕಲ್ಲಾಸರೆಗಳಿವೆ. ಅದರಲ್ಲಿ ಕಲ್ಲಾಸರೆ ಒಂದರಲ್ಲಿ ೪ ಮೀ. ಎತ್ತರದ ಮನುಷ್ಯ ಕೃತಿಯನ್ನು ಬಿಡಿಸಲಾಗಿದೆ. ಈ ಆಕೃತಿಯನ್ನು ಗಮನಿಸಿದರೆ ಆಧುನಿಕ ಕಲೆಯಲ್ಲಿ ಬಳಸುವ ವಿರೂಪ ಮತ್ತು ಪ್ರಮಾಣಬದ್ಧ ಚಿತ್ರಗಳ ಶೈಲಿಯಿದೆ. ಆದಿಮಾನವನ ಈ ಕಲ್ಲಾಸರೆಯ ಚಿತ್ರ ವಿರೂಪಗೊಳಿಸಿದ ಮತ್ತು ಪ್ರಮಾಣಬದ್ಧವಲ್ಲದ ಚಿತ್ರಗಳಂತಿರುವುದು ಕಂಡುಬರುತ್ತದೆ.

ಇಲ್ಲಿನ ಪುರುಷ ಆಕೃತಿಯ ಚಿತ್ರವು ವಿಭಿನ್ನವಾಗಿದೆ. ಆದಿಮಾನವನು ಬಲಗೈಯನ್ನು ಮೇಲಕ್ಕೆತ್ತಿರುವಂತೆ ರಚಿಸಿದ್ದಾನೆ. ಈ ಬಲಗೈಯಲ್ಲಿ ಮುಂಗೈ ಗೋಚರವಾಗುತ್ತಿಲ್ಲ. ಎಡಗೈಯಲ್ಲಿ ತನ್ನ ಶಿಶ್ನವನ್ನು ಹಿಡಿದುಕೊಂಡಿರುವಂತೆ ಕಾಣುತ್ತದೆ. ಅಲ್ಲದೆ ಹೊಟ್ಟೆಯ ಭಾಗದಲ್ಲಿ ಒಂದು ಬಾಣದ ಗುರುತು ಕೆಳಮುಖವಾಗಿದೆ. ಏಕೆ ಆದಿಮಾನವನು ಹೊಟ್ಟೆಯ ಭಾಗದಲ್ಲಿ ಈ ಕೆಳಮುಖ ಬಾಣದ ಗುರುತನ್ನು ಬರೆದಿರಬಹುದು?



ಎಂಬ ಪ್ರಶ್ನೆ ಕಾಡದೆ ಇರಲಾರದು. ಚಿತ್ರಕ್ಕೆ ತಲೆಭಾಗವಿದೆ. ಕೊರಳು ಇಲ್ಲದಂತೆ ಬಿಡಿಸಿದ್ದಾನೆ. ಸ್ತ್ರೀ ಚಿತ್ರವು ಪುರುಷ ಚಿತ್ರವಿರುವ ಎದುರು ಬಂಡೆಯಲ್ಲಿದೆ. ಸ್ತ್ರೀ ಚಿತ್ರಕ್ಕೆ ಸ್ತ್ರೀಯ ಆಕಾರವೆಲ್ಲವೂ ಇದೆ. ಕೊರಳು ಪುರುಷ ಚಿತ್ರಕ್ಕೆ ಇಲ್ಲ. ಆದರೆ ಸ್ತ್ರೀ ಚಿತ್ರಕ್ಕಿದೆ. ಸ್ತ್ರೀ ಆಕೃತಿಯ ಚಿತ್ರದಲ್ಲಿ ಜಡೆ, ಸ್ತನ, ಯೋನಿಯನ್ನು ಸೂಕ್ಷ್ಮವಾಗಿ ಗುರುತಿಸಬಹುದು.

ಈ ಪುರುಷ ಆಕೃತಿಯ ಚಿತ್ರ ಮತ್ತು ಸ್ತ್ರೀ ಆಕೃತಿಯ ಚಿತ್ರವನ್ನು ಗಮನಿಸಿದರೆ, ರತಿ ಚಿತ್ರಗಳಿರಬಹುದೆಂದು ಊಹಿಸಲು ಸಾಧ್ಯವಿದೆ. ಆ ಕಾಲದಲ್ಲಿಯೇ ರತಿಚಿತ್ರಗಳ ಬಗೆಗಿನ ಚಿತ್ರಕಲೆಯನ್ನು ಬಂಡೆಗಳ ಮೇಲೆ ತಂದಿರುವುದು ಗಮನಾರ್ಹ ಸಂಗತಿ. ಪುರುಷಾಕೃತಿಯು ರೇಖಾವಿನ್ಯಾಸದಿಂದ ಕೂಡಿದ್ದು, ಸ್ತ್ರೀ ಆಕೃತಿಯು ಛಾಯಾರೂಪದಲ್ಲಿದೆ. ಆಧುನಿಕ ಚಿತ್ರಶೈಲಿಯಲ್ಲಿ ಕಂಡುಬರುವ ನವ್ಯಶೈಲಿಯ ಚಿತ್ರಗಳಲ್ಲಿ ಈ ಬಗೆಯ ಚಿತ್ರಗಳು ಕಂಡುಬರುತ್ತವೆ.

**ಚಿತ್ರ ೪**



ನಾರಾಯಣಪೇಟೆಯ ಮೊದಲ ಕಲ್ಲಾಸರೆಯ ಬಳಿಯ ಬೆಟ್ಟದಲ್ಲಿ ಸೂರ್ಯ ಮತ್ತು ಮೂರು ಮನುಷ್ಯಾಕೃತಿಯ ಚಿತ್ರಗಳಿವೆ. ಹಿಂದಿನ ಚಿತ್ರದಂತೆಯೇ ಒಂದು ಮನುಷ್ಯಾಕೃತಿಗೆ ಕೊರಳಿಲ್ಲ. ಮತ್ತೊಂದು ಆಕೃತಿಯ ತಲೆ ಕೀಟ(ಓಡುಹುಳು)ದಂತೆ ಇದೆ. ಇನ್ನೊಂದು ರೇಖಾವಿನ್ಯಾಸದಲ್ಲಿ ಸರಳವಾಗಿ ರಚಿಸಿರುವ ಮನುಷ್ಯಚಿತ್ರ. ಎಲ್ಲಾ ಚಿತ್ರಗಳಲ್ಲೂ ಮೂರು ಬೆರಳುಗಳ ಕೈಗಳಿವೆ. ಆ ಕೈಗಳನ್ನು ಮಾತ್ರ ಛಾಯಾರೂಪದಲ್ಲಿ ಚಿತ್ರಿಸಿದ್ದಾರೆ. ಕೀಟಕ್ಕೆ ಮಾತ್ರ ಎರಡು ಕೂದಲಿನ ಮೀಸೆಯಿದೆ. ಆಧುನಿಕ ಕಾಲದಲ್ಲಿನ ಚಿತ್ರಕಲೆ ಮತ್ತು ಕೆಲವು ಪಾಶ್ಚಾತ್ಯ ಚಲನಚಿತ್ರಗಳಲ್ಲಿ ದೇಹ ಮನುಷ್ಯಾಕಾರವಾಗಿದ್ದು, ಮುಖವನ್ನು ಯಾವುದಾದರೂ ಪ್ರಾಣಿಯ ಚಿತ್ರದ ಮೂಲಕ ಚಿತ್ರಿಸಲಾಗಿರುತ್ತದೆ.



ಈ ರೀತಿಯ ಮುಖವಾಡದ ಚಿತ್ರಗಳು ಆದಿಮಾನವನ ಕಲ್ಪನೆಯಲ್ಲಿ ಏನಿರಬಹುದು ಎಂಬುದು ಇಂದಿಗೂ ನಿಗೂಢವೇ ಆಗಿದೆ. ಆದರೆ ಇಂತಹದೊಂದು ಶೈಲಿ ಮಾತ್ರ ಆಧುನಿಕರಲ್ಲಿಯೂ ಕಂಡುಬರುವುದು. ಮೂರನೇಯ ಮನುಷ್ಯಾಕೃತಿಯೊಂದರ ದೇಹವು ರಾಕೆಟ್ ಮಾದರಿಯಲ್ಲಿದೆಯೆಂದು ಶರಣಬಸಪ್ಪ ಕೋಲ್ಕಾರರವರು ಸರಿಯಾಗಿಯೇ ಗುರುತಿಸಿದ್ದಾರೆ.

**ಚಿತ್ರ ೫**

ನಾರಾಯಣಪೇಟೆಯ ಕಲ್ಲಾಸರೆ ನಾಲ್ಕರಲ್ಲಿ ೧೭ ಕಡವೆಗಳಿರುವ ಒಂದು ಚಿತ್ರ ಸಮೂಹವಿದೆ. ಇಲ್ಲಿನ ಎಲ್ಲ ಕಡವೆಗಳು ಕೆಂಪು ಬಣ್ಣದಿಂದ ಬಿಡಿಸಿರುವಂತಹುವು. ಈ ಸಮೂಹವನ್ನು ನೋಡಿದರೆ ಆದಿಮಾನವನ ಸಮುದಾಯ ಕಲ್ಪನೆಯಂತಿರಬಹುದು ಎನ್ನಿಸುತ್ತದೆ. ಆ ಸಮುದಾಯ ವ್ಯಕ್ತಿಯೊಬ್ಬ ಒಂದು ಚಿತ್ರವನ್ನು ಬಿಡಿಸಿದ್ದಾನೆ. ಉಳಿದವರು ನಂತರದಲ್ಲಿ ಅದನ್ನು ಅನುಕರಣೆ ಮಾಡಿರಬಹುದು ಎನ್ನುವಷ್ಟರ ಮಟ್ಟಿಗೆ ನೈಜ ಆಕೃತಿಗಳಾಗಿ ಕಾಣುತ್ತವೆ. ಏಕೆಂದರೆ ಈ ಕಲ್ಲಾಸರೆಯಲ್ಲಿ ಬೇರೆ ಜಾತಿಯ ಯಾವುದೇ ಪ್ರಾಣಿಯೂ ಸಹ ಇಲ್ಲ. ಆದ್ದರಿಂದ 'ನಕಲು' ಅಥವಾ 'ಅನುಕರಣೆ' ಮಾಡಿ ರಚಿಸಿದ ಚಿತ್ರಗಳಾಗಿರಬಹುದು. ಇಲ್ಲಿನ ಬಹುತೇಕ ಚಿತ್ರಗಳು ಸಮಾನ ಅಳತೆಯಲ್ಲಿವೆ. ಇವುಗಳಲ್ಲಿ ಮಧ್ಯದ ಕಡವೆಯೊಂದು ದಕ್ಷಿಣಾಭಿಮುಖವಾಗಿದೆ. ಉಳಿದವು ಉತ್ತರಾಭಿಮುಖವಾಗಿವೆ. ಒಂದು ಕಡವೆ ಏಕೆ ದಕ್ಷಿಣಾಭಿಮುಖಿ ಆದಿಮಾನವನು ರಚಿಸಿರಬಹುದು ಎಂಬ ಪ್ರಶ್ನೆ ಉದ್ಭವಿಸಲು ಸಾಧ್ಯವಿದೆ. ಆ ಸಮುದಾಯದ ಗುಂಪಿನಲ್ಲಿ ಅನುಕರಣೆ ಮಾಡುತ್ತಿರುವ ಸದಸ್ಯನೊಬ್ಬ ಎಡಗೈ ಬರಹದ ಚಿತ್ರಕಾರನಾಗಿರಬಹುದು. ಆದ್ದರಿಂದ ಈ ಮಾದರಿಯಲ್ಲಿ ಅವನು ಬರೆದಿರಬಹುದೆಂದು ಊಹಿಸಲು ಸಾಧ್ಯವಿದೆ. ಕೊಂಬುಗಳು 'ಗ' ಮತ್ತು 'ಗಿ' ಆಕಾರದಲ್ಲಿವೆ. ಒಂದು ಕಡವೆಯು ಛಾಯಾರೂಪದಲ್ಲಿ ಚಿತ್ರಿತವಾಗಿದೆ. ಎಲ್ಲವೂ ಹೆಚ್ಚು ಕಡಿಮೆ ಒಂದೇ ರೀತಿಯ ಅಳತೆಯಲ್ಲಿರುವಂತೆ ಆದಿಮಾನವನಾದ ಚಿತ್ರಕಾರ ಸಮತೋಲನವನ್ನು ಕಾಯ್ದುಕೊಂಡಿದ್ದಾನೆ.



**ಚಿತ್ರ ೬**

ಹೊಸಬಂಡಿ ಹರ್ಲಾಪುರದ ಜಲವಿದ್ಯುತ್ ಘಟಕದ ಬಳಿ ಇರುವ ಕಲ್ಲಾಸರೆ ಒಂದರಲ್ಲಿ ಒಂದು ದನ, ಎರಡು ಮನುಷ್ಯಾಕೃತಿಯ ಚಿತ್ರಗಳಿವೆ. ಈ ಚಿತ್ರಗಳ ಕಲ್ಲಾಸರೆಯ ಛಾವಣಿಯಲ್ಲಿ ಬರೆಯಲಾಗಿದೆ. ಛಾಯಾರೂಪದಲ್ಲಿ ಮಾನವನ ಕುಳಿತುಕೊಂಡಿರುವ ಚಿತ್ರವಿದೆ. ಈ ಚಿತ್ರದ ಶೈಲಿಯು ಪಾರ್ಶ್ವ ಬದಿಯಲ್ಲಿ ಕುಳಿತಿರುವದರಿಂದ ಒಂದೇ ಮಗ್ಗಲು ಕಾಣುತ್ತದೆ.



ಚಿತ್ರ ೭



ಈ ಹಿಂದಿನ ಅಂದರೆ ಮೊದಲ ಕಲ್ಲಾಸರೆಯ ಬಂಡೆಯಲ್ಲಿಯೇ ದಕ್ಷಿಣ ಮುಖದಲ್ಲಿ ಇನ್ನೊಂದು ಕಲ್ಲಾಸರೆ ಚಿತ್ರಗಳು ಕಾಣುತ್ತವೆ. ಅದರಲ್ಲಿ ೯ ಜಿಂಕೆಗಳು, ಒಂದು ಗೂಳಿ ಮತ್ತು ಒಂದು ನಾಯಿಯ ಚಿತ್ರವಿದೆ. ಎಲ್ಲಾ ಜಿಂಕೆ ಮತ್ತು ನಾಯಿ ಛಾಯಾರೂಪದಲ್ಲಿವೆ. ಗೂಳಿ ದಪ್ಪ ರೇಖಾವಿನ್ಯಾಸದಿಂದ ರಚಿಸಿದೆ. ಕೆಮ್ಮಣ್ಣು ಬಣ್ಣದಿಂದ ಈ ಚಿತ್ರಗಳೆಲ್ಲಾ ರಚನೆಯಾಗಿವೆ, ಇಲ್ಲಿ ಮುಖ ಇರುವುದರಿಂದ ಗೂಳಿಯೆಂದೇ ಗುರುತಿಸಬಹುದು. ಇಲ್ಲಿನ ಜಿಂಕೆಗಳ ಚಿತ್ರಗಳು ಕಡವೆಗಳ ಹಾಗೆಯೇ ಸಮಾನ ಅಳತೆಯಲ್ಲಿವೆ. ಒಂದೇ ಶೈಲಿ, ಒಂದೇ ರೀತಿಯ ಬಣ್ಣಗಳಿಂದ ಕೂಡಿದ ಚಿತ್ರಗಳಾಗಿವೆ. ಗೂಳಿಯ ಅಪೂರ್ಣವಾದ ಚಿತ್ರವಿದ್ದು, ಮುಖ ಮಾತ್ರ ಗೋಚರವಾಗುವಂತೆ ಚಿತ್ರಿಸಲಾಗಿದೆ.

ಚಿತ್ರ ೮

ಹೊಸಬಂಡಿ ಹರ್ಲಾಪುರ ಗ್ರಾಮಕ್ಕೆ ಉತ್ತರಕ್ಕಿರುವ ಬೆಟ್ಟದಲ್ಲಿ ಎರಡು ಕೋಣದ ಚಿತ್ರಗಳಿವೆ. ಒಂದು ದೊಡ್ಡ ಅಳತೆಯದ್ದು, ಮತ್ತೊಂದು ಇದನ್ನು ಅನುಕರಣೆ ಮಾಡಿದಂತಿರುವ ಚಿಕ್ಕ ಅಳತೆಯ ಕೋಣ. ಶರಣಬಸಪ್ಪ ಕೋಲ್ಕಾರ ಅವರು ಇದರ ಅಳತೆಯನ್ನು ದಾಖಲಿಸಿದ್ದಾರೆ. ದೊಡ್ಡ ಕೋಣದ ಅಳತೆಯು ೨.೮ ಮೀಟರ್ ಉದ್ದ ೧.೮೯ ಮೀ. ಎತ್ತರವಾಗಿದೆ. ಚಿಕ್ಕ ಕೋಣದ ಚಿತ್ರವು ೦.೪೨ ಮೀ ಉದ್ದ, ೦.೪೧ ಮೀ ಎತ್ತರವಾಗಿದೆ. ಈ ಎರಡೂ ಚಿತ್ರಗಳು ಕೆಂಪು ಬಣ್ಣದ ರೇಖಾಚಿತ್ರಗಳಾಗಿವೆ. ಅರೆವೃತ್ತಾಕಾರದಲ್ಲಿ ಒಳಬಾಗಿರುವ ಕೋಡು, ಎರಡು ಕಿವಿ, ಮುಖ, ಬಲಿಷ್ಠ ದೇಹ, ಕಾಲು, ಬಾಲ ಸಹಜವಾಗಿದ್ದು, ನೈಜತೆಯಿಂದ ಕೂಡಿದೆ.



ಈ ಚಿತ್ರವು ಎಡಕ್ಕೆ ತಿರುಗಿ ನಿಂತಿರುವುದರಿಂದ ಕಣ್ಣು ಮತ್ತು ಮೂಗು ರಚನೆಯಾಗಿಲ್ಲ. ಕಾಲುಗಳು ನೈಜತೆಯಿಂದ ಕಾಣುತ್ತಿಲ್ಲ. ಗೊರೆಸಿನ ಭಾಗ, ಮೊಣಕಾಲು ಯಾವುದೂ ರಚನೆಗೊಂಡಿಲ್ಲ. ಒಟ್ಟಾರೆ ಈ ಚಿತ್ರದ ಶೈಲಿಯನ್ನು ಗಮನಿಸಿದರೆ

ನವ್ಯಕಲೆಯ ಚಿತ್ರಕಾರನಾದ ಪಿಕಾಸೋನ ಬುಲ್ ಕಲಾಕೃತಿಯು ನೆನಪಿಗೆ ಬರುತ್ತದೆ. ಬುಲ್ ಚಿತ್ರದಷ್ಟು ಪರಿಪೂರ್ಣತೆ ಇಲ್ಲದಿದ್ದರೂ ಈ ಚಿತ್ರವು ಆದಿಮಾನವನ ಕಲ್ಪನಾಶೈಲಿಗೆ ತಕ್ಕಂತೆ ರಚನೆಯಾಗಿರಬಹುದು.

ಇಲ್ಲಿ ಗಮನಿಸಬಹುದಾದ ಇನ್ನೊಂದು ಅಂಶವೆಂದರೆ ಅವರು ತೆಗೆದ ಚಿತ್ರಗಳು ಸಸ್ಯಪ್ರಾಣಿ ಮತ್ತು ಮನುಷ್ಯಾಕೃತಿಯನ್ನು ಮಾತ್ರ ಹೆಚ್ಚು ರಚಿಸಿದ್ದಾರೆ. ಇಲ್ಲಿ ಯಾವುದೇ ಕ್ರೂರ ಪ್ರಾಣಿಯ ಚಿತ್ರಗಳನ್ನು ತೆಗೆಯದೆ ಇರುವುದು ವಿಶೇಷವಾಗಿದೆ. ಒಂದು ಕಡೆ ಅಸ್ಪಷ್ಟವಾಗಿರುವ ತೋಳದ ಚಿತ್ರವು ಕಾಣುತ್ತದೆ. ಗವಿಮಠದ ಕಲ್ಲಾಸರೆ ಒಂದರಲ್ಲಿ ಈ ಚಿತ್ರವಿದೆ.

**ಚಿತ್ರ ೯**



ಗಂಗಾವತಿ ಕೊಪ್ಪಳ ರಸ್ತೆಯಲ್ಲಿ ಕೊಪ್ಪಳದ ಕಡೆಯಿಂದ ೨೦ ಕಿ. ಮೀ. ದೂರದಲ್ಲಿ ಇಂದರಗಿ ಗ್ರಾಮವಿದೆ. ಇಲ್ಲಿನ ಸಮೀಪದ ಬಾಗರಾ ಮರಡಿಯಲ್ಲಿನ ಕಲ್ಲಾಸರೆಯೊಂದರಲ್ಲಿ ೬೧ ಸೆಂ. ಮೀ. ಎತ್ತರ ೪೧ ಸೆಂ. ಮೀ. ಅಗಲವಿರುವ ಒಂದು ಮನುಷ್ಯಾಕೃತಿಯ ಚಿತ್ರವಿದೆ. ಇದೊಂದು ಪೂರ್ಣ ನಗ್ನ ಚಿತ್ರವಾಗಿದೆ. ಎರಡೂ ಕೈಗಳನ್ನು ಮೊಣಕೈಯಿಂದ ಮೇಲಕ್ಕೆತ್ತಿ ನಿಂತುಕೊಂಡ ಚಿತ್ರವಾಗಿದೆ. ಇದು ಕೆಂಪು ಬಣ್ಣದಿಂದ ರಚಿಸಿದ್ದಾಗಿದೆ. ಆದಿಮಾನವನು ರಚಿಸಿದ ಬಹುತೇಕ ಚಿತ್ರಗಳಲ್ಲಿ ಕೈಬೆರಳುಗಳು ಮೂರೇ ಇರುವುದನ್ನು ಗಮನಿಸಬಹುದು. ಈ ಚಿತ್ರದ ದೇಹ ರಚನೆಯು ತ್ರಿಕೋನಾಕಾರದಲ್ಲಿದೆ. ಕಾಲುಗಳು ಕಡ್ಡಿಗಳನ್ನು ಜೋಡಿಸಿಟ್ಟಂತಿವೆ. ಮೊಣಕಾಲು ಕಾಣುತ್ತಿಲ್ಲ. ತಲೆಯೂ ಅರೆತ್ರಿಕೋನದಲ್ಲಿದೆ, ಕಣ್ಣು, ಮೂಗು, ಬಾಯಿ, ಕಿವಿ ಯಾವುದನ್ನೂ ಬಿಡಿಸಿಲ್ಲ ಆದರೆ ಇದೊಂದು ಮನುಷ್ಯಾಕೃತಿಯೆಂದು ಗುರುತಿಸಿಕೊಳ್ಳಬಹುದಾಗಿದೆ.

**ಚಿತ್ರ ೧೦**

ಗಂಗಾವತಿ ಕೊಪ್ಪಳ ರಸ್ತೆಯಲ್ಲಿ ಬಿಳೆಬಾವಿ ಗ್ರಾಮವಿದೆ. ಗ್ರಾಮದ ಉತ್ತರಕ್ಕೆ ಬೆಟ್ಟಸಾಲುಗಳಿವೆ. ಈ ಬೆಟ್ಟಗಳಲ್ಲಿ ಎರಡು ಕಲ್ಲಾಸರೆಗಳಿವೆ. ಅವುಗಳಲ್ಲಿಯ ಕಲ್ಲಾಸರೆಯೊಂದರಲ್ಲಿ ಸೂರ್ಯ, ಕುದುರೆಸವಾರ, ಮಂಡಲ, ವೃತ್ತ ಮತ್ತು ಎತ್ತುಗಳು ಕಾಣಸಿಗುತ್ತವೆ. ಈ ಗ್ರಾಮದಲ್ಲಿ ಸಿಗುವ ಈ

ಬಗೆಯ ಚಿತ್ರಗಳು ದೈವ, ಮಾಟ, ಮಂತ್ರಗಳ ಚಿತ್ರಗಳೋಪಾದಿಯಲ್ಲಿ ರಚಿತವಾಗಿರುವುದನ್ನು ಕಾಣಬಹುದು. ಇಲ್ಲಿನ ಚಿತ್ರಗಳು ಕೆಂಪು ಮತ್ತು ಬಿಳಿ ಬಣ್ಣದ ಚಿತ್ರಗಳಾಗಿವೆ. ಸೂರ್ಯನ ಪದರುಗಳ ಚಿತ್ರವು ಪ್ರಕಾಶಮಾನವಾಗಿ ಗೋಚರಿಸುವಂತೆ ಕಾಣಿಸುವುದು ಅವನ ಉದ್ದೇಶವಾಗಿರಬೇಕೆಂದು ಕಾಣುತ್ತದೆ. ಹಾಗಾಗಿಯೇ ಆದಿಮಾನವನು ಸೂರ್ಯನ ಚಿತ್ರವನ್ನು ಒಂದರೊಳಗೊಂದು ಅಸಮ ವೃತ್ತಗಳಿಂದ ಮತ್ತು ಅದರ ಸುತ್ತಲಿರುವ ರೇಖೆಗಳಿಂದ ಅದನ್ನು ಸಾಧಿಸಿದ್ದಾರೆ ಎನ್ನಿಸುತ್ತದೆ. ಮಂಡಲವು ದ್ವಿರೇಖೆಯಿಂದ ರಚಿತವಾಗಿದೆ. ಆದಿಮಾನವನು ಈ ಮಂಡಲವನ್ನು ಏಕೆ ರಚಿಸಿರಬಹುದೆಂಬ ಪ್ರಶ್ನೆ ಉದ್ಭವಿಸುತ್ತದೆ. ಅಲ್ಲಿ ಒಂದು ವೃತ್ತವಿದ್ದು, ವೃತ್ತದೊಳಗೆ ಚೌಕವಿದೆ. ಆ ಚೌಕದಿಂದ ವೃತ್ತಕ್ಕೆ ಸಮನಾಗಿ ನಾಲ್ಕು ಕಡೆ ರೇಖೆಗಳನ್ನು ಎಳೆಯಲಾಗಿದೆ.



ಮಂಡಲದ ಚಿತ್ರಗಳು ಕೊಪ್ಪಳ-ಹಂಪಿ ಪ್ರದೇಶಗಳಲ್ಲಿ ಕಂಡಿರುವುದು ಈ ಬಿಳೆಬಾವಿ ಮತ್ತು ಚಿಕ್ಕರಾಂಪುರದಲ್ಲಿ ಮಾತ್ರವೇ ಎನ್ನುವುದು ವಿಶೇಷ. ಉಳಿದ ಕಡೆ ಇಷ್ಟು ಸಮಗ್ರವಾಗಿ, ನಿಖರವಾಗಿ ಮಂಡಲದ ಚಿತ್ರಗಳು ರಚನೆಯಾಗಿಲ್ಲ. ಅಳಿಸಿ ಹೋಗಿರಬಹುದು, ಉಳಿದ ಕಡೆಯಂತೂ ದೊರಕುವುದಿಲ್ಲ.

**ಚಿತ್ರ ೧೧**

ಬಿಳೆಬಾವಿಯ ಕಲ್ಲಾಸರೆ ಎರಡರಲ್ಲಿ ಕಾಮಧೇನುವಿನಂತಹ ಒಂದು ದೊಡ್ಡ ಪ್ರಾಣಿ ಚಿತ್ರವಿದೆ. ಎರಡು ಹೂಗಿಡದ ಚಿತ್ರಗಳು ಆಕರ್ಷಕವಾಗಿವೆ. ಬಿಳಿಬಣ್ಣದ ಕಡ್ಡಿಯಂತಹ ಮನುಷ್ಯಾಕೃತಿ ಹಾಗೂ ಒಂದು ಎತ್ತಿನ ಚಿತ್ರವಿದೆ, ಅಲ್ಲದೆ ಮೂರು ಚಲಿಸುತ್ತಿರುವಂತೆ ಕಾಣುವ ಎತ್ತಿನ ಚಿತ್ರಗಳು, ಮೂರು ಚೌಕ ಮಂಡಲಗಳಿವೆ.



ಕಾಮಧೇನುವಿನಂತಹ ಪ್ರಾಣಿಯ ದೇಹ ಗಮನ ಸೆಳೆಯುತ್ತದೆ. ಅದರ ತಲೆಯು ಉದ್ದನೆಯ ಕೊರಳನ್ನು ಹೊಂದಿದ್ದು ಎತ್ತರವಾಗಿದೆ. ನಾಲ್ಕು ಅರ್ಧ ಕಾಲುಗಳನ್ನು ಹೊಂದಿದೆ. ಬಾಲದ ಉದ್ದವು ತುಂಬ ದೊಡ್ಡದಾಗಿದೆ. ಕಣ್ಣು, ಬಾಯಿ, ಮೂಗು ಸ್ಪಷ್ಟವಾಗಿಲ್ಲ. ಇಲ್ಲಿ ಸಸ್ಯಗಳನ್ನು ಬರೆದಿರುವುದು ವಿಶೇಷ, ಆದಿಮಾನವನ ಪ್ರಾಣಿ, ಪಕ್ಷಿ, ಮನುಷ್ಯನ ಜತೆ ಸಸ್ಯವನ್ನು ತನ್ನ ಪ್ರಕೃತಿ ಜಗತ್ತಿನೊಳಗೆ ಸೇರಿಕೊಂಡಿರುವುದು ಇಲ್ಲಿ ಕಂಡುಬರುತ್ತದೆ. ಆದಿಮಾನವನ ಒಂದೊಂದೆ ಬೆಳವಣಿಗೆಯನ್ನು ಈ ಚಿತ್ರಗಳಲ್ಲಿ ಗಮನಿಸಬಹುದು. ಹೀಗಾಗಿ ಚಿತ್ರ ಸಂಯೋಜನೆ, ಚಿತ್ರ ಬೆಳವಣಿಗೆ ವಿಕಾಸದಲ್ಲಿ ಆದಿಮಾನವನ ಚಾಕಚಕ್ಯತೆಯನ್ನು ಗಮನಿಸಬಹುದಾಗಿದೆ.

**ಚಿತ್ರ ೧೨**

ಹಿರೇಬೆಣಕಲ್ ಗ್ರಾಮವು ಗಂಗಾವತಿ-ಕೊಪ್ಪಳ ರಸ್ತೆಯಲ್ಲಿ ಕಂಡುಬರುತ್ತದೆ. ಈ ಗ್ರಾಮದ ದಕ್ಷಿಣ ದಿಕ್ಕಿನಲ್ಲಿರುವ ಬೆಟ್ಟಗಳಲ್ಲಿ ೧೭ ಕಲ್ಲಾಸರೆಗಳಿವೆ. ಶಿಲಾಸಮಾಧಿ ನೆಲೆಗೆ ಹೋಗುವ ದಾರಿಯಲ್ಲಿ ಬೆಟ್ಟದ ಮಧ್ಯದಲ್ಲಿ ಈ ಕಲ್ಲಾಸರೆಯಿದೆ. ಇದೊಂದು ಬೃಹತ್ ಗುಂಡುಕಲ್ಲು. ಇಲ್ಲಿಯೂ ಕೆಂಪು ಬಣ್ಣದ ರೇಖಾಚಿತ್ರಗಳಿವೆ. ಇಲ್ಲಿ ಜಿಂಕೆ, ಕಡವೆ, ಸ್ತ್ರೀ-ಪುರುಷ ಮತ್ತು ಅವರ ಸಮೂಹ ನೃತ್ಯ, ಕುದುರೆ ಮತ್ತು ಸವಾರರು, ಈಟಿ ಹಿಡಿದು ನಿಂತ ಮನುಷ್ಯರು, ನವಿಲುಗಳು, ಕೊಡಲಿಗಳನ್ನು ಹಿಡಿದು ನೃತ್ಯ ಮಾಡುತ್ತಿರುವುದು. ಈ ಕಲ್ಲಾಸರೆಯ ಚಿತ್ರವು ಬಹುದೃಷ್ಟಿಯಿಂದ ವಿಭಿನ್ನವಾದ ಚಿತ್ರಗಳನ್ನು ಒಳಗೊಂಡಿದೆ.



ಆದಿಮಾನವನ ಹೊಸ  ಶಕೆಯೊಂದು ಈ ಪ್ರದೇಶದಲ್ಲಿ ಆಗಿದ್ದರ ಅನುಭವ ಜನ್ಯವಾದ ಕಲಾಕೃತಿಯಂತೆಯೇ ಈ ಕಲ್ಲಾಸರೆಯ ಚಿತ್ರವು ಕಾಣುತ್ತದೆ. ಈ ಹಿಂದಿನ ಯಾವ ಕಲ್ಲಾಸರೆಯಲ್ಲಿಯೂ ಕಾಣದ 'ಸಮೂಹ ನೃತ್ಯ' ದ ಸೊಬಗನ್ನು ಆದಿಮಾನವನು ಇದರಲ್ಲಿ ಕಾಣಿಸಿದ್ದಾನೆ. ಇದರಿಂದಾಗಿ ಆದಿಮಾನವನು ಮನೋರಂಜನೆಯ ಪ್ರಿಯನಾಗಿದ್ದನೆಂದು ಭಾವಿಸಬಹುದು.

ಗವಿಚಿತ್ರಗಳಿಂದ ಗೊತ್ತಾಗುವುದು ಏನೆಂದರೆ ಆದಿಮಾನವನು ದಿನನಿತ್ಯದ ಬದುಕು ಕೇವಲ ಬೇಟೆಯಾಡುವುದು ಅಷ್ಟೇ ಆಗಿರಲಿಲ್ಲ. ತನ್ನ ಸಮಕಾಲೀನ ಸಮಾಜನ ವಿಭಿನ್ನವಾದ ವಿನ್ಯಾಸಗಳನ್ನು ಚಿತ್ರಗಳ ಮೂಲಕ ತೋರಿಸುವುದು ಆಗಿತ್ತು.

**ಚಿತ್ರ ೧೩**

ಹಿರೇಬೆಣಕಲ್‌ನ ರಕ್ಕಸಬೀಳು ಪ್ರದೇಶದಲ್ಲಿ ಕಲ್ಲಾಸರೆ ಎರಡು ಕಂಡುಬರುತ್ತದೆ. ಈ ಕಲ್ಲಾಸರೆಯ ಚಿತ್ರವು ಆಯುಧಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ಮಚ್ಚಿನಾಕಾರದ ಚಿತ್ರದ ಒಳಗೆ ಹೆಚ್ಚು ಇತರ ಬಗೆಯ ಆಯುಧಗಳ ಚಿಹ್ನೆಗಳಿವೆ. ಶರಣಬಸಪ್ಪ ಕೋಲ್ಕಾರ ಅವರು ಅಲ್ಲಿ ಕಾಣುವ ಎರಡು ಚಿತ್ರಗಳನ್ನು ಹೆಬ್ಬಾವು ಇರಬಹುದೆಂದು ಊಹಿಸಿದ್ದಾರೆ. ಈ ಚಿತ್ರದಲ್ಲಿ ಸಹಜವಾಗಿಯೇ ಹಿಂದಿನ ಚಿತ್ರಗಳ ಹಾಗೆಯೇ ಮನುಷ್ಯಾಕೃತಿಗಳು, ಹಂದಿಯ ಚಿತ್ರ ಕಾಣುತ್ತವೆ. ದ್ವಂದ್ವಗಳಿಂದ ಕೂಡಿರುವ, ವಿಭಿನ್ನವಾಗಿ ಗೃಹಿಸಬಹುದಾದ ಈ ಚಿತ್ರಗಳು ಅಮೂರ್ತ ರೂಪದ ಚಿತ್ರಗಳೆಂದು ಗೃಹಿಸಬಹುದು.



**ಚಿತ್ರ ೧೪**

ಹಿರೇಬೆಣಕಲ್ಲನ ದುರ್ಗದ ದಡಿಯಿಂದ ಸ್ವಲ್ಪ ಕೆಳಗೆ ಗುಡ್ಡದ ಉತ್ತರ ಇಳಿಜಾರಿನ ಮದ್ಯಭಾಗದಲ್ಲಿ ಈ ಕಲ್ಲಾಸರೆಯಿದೆ. ಇದರಲ್ಲಿ ಛಾವಣಿ ಹಾಗೂ ಹಿಂದಿನ ಗೋಡೆಯಲ್ಲಿ ಚಿತ್ರಗಳಿವೆ. ಬಿಲ್ಲು-ಬಾಣ, ಈಟಿಗಳನ್ನು ಹಿಡಿದ ಅಶ್ವಧಾರಿಗಳು, ಜೊತೆಗೆ ಜಿಂಕೆ, ನವಿಲು, ಆಕಳು, ಎತ್ತಗಳು ಚೌಕಾಕಾರದ ಮಂಡಲ ರೇಖಾಚಿತ್ರಗಳಿವೆ. ಈ ಚಿತ್ರವನ್ನು ಒಮ್ಮೆಲೆ ನೋಡಿದಾಕ್ಷಣ ರಾಜಸ್ಥಾನಿ, ಮೊಗಲ್ಲ ಚಿಕಣಿಚಿತ್ರದಲ್ಲಿ ಕಾಣಬರುವ ಯುದ್ಧ ಸನ್ನಿವೇಶಗಳ ಹಾಗೆ ಕಾಣಿಸುತ್ತದೆ.



**ಚಿತ್ರ ೧೫**

ಈ ಕಲ್ಲಾಸರೆಯಲ್ಲಿ ಕೆಂಪು ವರ್ಣದ ರೇಖಾಚಿತ್ರಗಳಿವೆ. ಇಲ್ಲಿ ಉಡ, ಮೀನು ಮತ್ತು ಮನುಷ್ಯ ಚಿತ್ರಗಳಿವೆ. ಕ್ರಾಸ ಹ್ಯಾಚಿಂಗ್ ಬಳಿಸಿಕೊಂಡು ಮೈವಳಿಕೆಯನ್ನು ರಚಿಸಿದ್ದಾನೆ. ಹಲ್ಲಿಯಾಕಾರದ ಐದು ಉಡಗಳಿವೆ. ಇಲ್ಲಿ ಆದಿಮಾನವನು ಸರೀಸೃಪಗಳಾದ ಉಡ ಮತ್ತು ಮೀನನ್ನು ರಚಿಸಿದ್ದಾನೆ, ಮೀನಿಗೆ ಅಡ್ಡ ರೇಖೆಗಳನ್ನು ಬಳಸಿದ್ದಾನೆ. ಮನುಷ್ಯನನ್ನು ಅಡ್ಡ ಗೆರೆಗಳಿಂದ ರಚಿಸಿದ್ದಾನೆ.



**ಚಿತ್ರ ೧೬**

ಹಿರೆಬೇಣಕಲ್ಲನ ೧೭ನೇ ಕಲ್ಲಾಸರೆಯು ರಕ್ಕಸ ಕುಟ್ರಿಯ ಹಿಂಭಾಗದ ಬೆಟ್ಟದ ಕೆಳಭಾಗದಲ್ಲಿದೆ. ಇಲ್ಲಿ ಎರಡು ಆಕರ್ಷಕವಾದ ಮತ್ತು ಅಮೂರ್ತವಾದ ಚಿತ್ರಗಳಿವೆ. ಇವು ಮನುಷ್ಯಾಕೃತಿಯನ್ನು ಹೋಲುತ್ತಿವೆ. ಇದೊಂದು ಅಪರೂಪದ ರೇಖಾಚಿತ್ರವಾಗಿದೆ. ತ್ರಿಕೋಣಾಕಾರದ ತಲೆ, ಬೆನ್ನು ಬಾಗಿಸಿದ ಭಂಗಿಯಲ್ಲಿರುವ, ಬಲಗೈಯನ್ನು ಮುಂದೆ ಚಾಚಿರುವ ಮನುಷ್ಯಾಕೃತಿಯು ವಿಭಿನ್ನವಾಗಿ ರಚನೆಗೊಂಡಿದೆ. ಈ ಆಕೃತಿಯ ದೇಹದ ಒಳಗಡೆ ಮತ್ತೊಂದು ಮನುಷ್ಯಾಕೃತಿಯು ಇದೆ. ಅಲ್ಲದೇ ಮತ್ತೊಂದು ಮನುಷ್ಯ ಆಕೃತಿಯು ಅದರ ಕಾಲಬಳಿ ಇದೆ. ನವ್ಯ ಕಲೆಯಲ್ಲಿ ಕಂಡುಬರುವ ಅಬ್‌ಸ್ಟ್ರ್ಯಾಕ್ಟ ಮಾದರಿಯಲ್ಲಿ ಈ ಚಿತ್ರವು ಕಾಣುತ್ತದೆ.



**ಚಿತ್ರ ೧೭**

ಆನೆಗುಂದಿ ಗ್ರಾಮದ ಸುತ್ತಮುತ್ತಲಿನ ಬೆಟ್ಟದಲ್ಲಿ ೯ ಕಲ್ಲಾಸರೆಗಳಿವೆ. ಆರನೇಯ ಕಲ್ಲಾಸರೆಯು ದುರ್ಗಮ್ಮ ದೇವಾಲಯದ ಹಳೆಯ ಕಾಲುದಾರಿಯಲ್ಲಿದೆ. ಇಲ್ಲಿ ಮೂರು ಗುಂಡುಗಳಲ್ಲಿ ಸ್ವತಂತ್ರವಾಗಿರುವ ಚಿತ್ರಗಳಿವೆ. ಅದರಲ್ಲಿ ಮೂರನೆಯ ಗುಂಡಿನ ಚಿತ್ರವು ಗಮನ



ಸೆಳೆಯುತ್ತದೆ. ಕತ್ತು ಮತ್ತು ತಲೆಯನ್ನು ಕೆಂಪು ವರ್ಣದಿಂದ ತುಂಬಲಾಗಿದೆ. ತಲೆಯ ಸುತ್ತಲೂ ಕೂದಲು ಹರಡಿದಂತೆ ರೇಖೆಗಳನ್ನು ಎಳೆಯಲಾಗಿದೆ. ಭುಜದಿಂದ ಮೊಣಕಾಲಿನವರೆಗೂ ಬಟ್ಟೆಯನ್ನು ಧರಿಸಿದಂತೆ ಈ ಚಿತ್ರವು ಕಾಣುತ್ತದೆ. ಇದು ರೇಖಾವಿನ್ಯಾಸದ ಚಿತ್ರವಾಗಿದೆ. ಸುಣ್ಣದ ಪಟ್ಟೆಯಲ್ಲಿ ಕೈಗಳು ಮುಚ್ಚಿ ಹೋಗಿರುವುದು ಕಂಡುಬರುತ್ತದೆ.

**ಚಿತ್ರ ೧೮:**



ಅಂಜನಹಳ್ಳಿ ರಾಂಪುರ ಕ್ರಾಸ್ ಬಳಿ ದೋಣಿ ಆಕಾರದ ಒಂದು ಚಿತ್ರ ಕಲ್ಲಾಸರೆ ಒಂದರಲ್ಲಿ ಇದೆ. ರೇಖಾವಿನ್ಯಾಸದಿಂದ ಮಾಡಿದ ಚಿತ್ರವಾಗಿದೆ. ದೋಣಿಯ ಮಧ್ಯಭಾಗದಲ್ಲಿ ಜಿಂಕೆ, ನವಿಲು, ಎದುರಾಗಿ ನಿಂತ ಜೋಡಿ ಎತ್ತುಗಳು, ಮೇಲ್ಭಾಗದಲ್ಲಿ ಒಂದು ಗೂಳಿ ಮತ್ತು ನವಿಲಿನ ಚಿತ್ರವಿದೆ. ದೋಣಿಯ ಪರಿಕಲ್ಪನೆಯು ಆದಿಮಾನವನಿಗೆ ತಿಳಿದಿತ್ತು ಎಂಬುವುದು ಗೊತ್ತಾಗುತ್ತದೆ.

**ಚಿತ್ರ ೧೯**

ಮಲ್ಲಾಪುರದಿಂದ ದಕ್ಷಿಣಕ್ಕೆ ಮೂರು ಕಿ. ಮೀ. ದೂರದಲ್ಲಿನ ಬೆಟ್ಟವೊಂದರಲ್ಲಿ ಕಲ್ಲಾಸರೆಯು ಇದೆ. ಇಲ್ಲಿ ಮನುಷ್ಯಾಕೃತಿಗಳು, ಕಾಡುಕೋಣ, ಹಂದಿ, ಆಯುಧ ಮತ್ತು ಕತ್ತರಿಸಿದಂತೆ ಕಾಣುವ ಮರದ ಬುಡಗಳ ರೇಖಾಚಿತ್ರಗಳಿವೆ. ಇಲ್ಲಿಯ ವಿಶೇಷವೆಂದರೆ ಮಾನವಾಕೃತಿಗಳಲ್ಲಿ ಮಾನವ ಶರೀರ ರಚನೆಯ ಪ್ರಯತ್ನವನ್ನು ಮಾಡಿದಂತಿದೆ. ಅಸ್ಥಿಪಂಜರದ ಮೇಲೆ ಚರ್ಮದ ಹೊದಿಕೆ ಮಾಡಿದಂತಿದೆ. ಅದಲ್ಲದೆ ಕೆಲವೊಂದು ಆಕೃತಿಗಳಲ್ಲಿ ಅಲಂಕಾರಿಕ ಚಿತ್ರಣ ಮಾಡಿದಂತಿದೆ. ಇದರ ಜೊತೆಗೆ ರೇಖಾಲಂಕರಣ, ವಕ್ರರೇಖಾಲಂಕರಣ ವಿಧಾನವನ್ನು ಆ ದಿನಗಳಲ್ಲಿಯೇ ಅವರು ಬಳಸಿಕೊಂಡಿರುವುದು ಸೋಜಿಗವೆನಿಸುತ್ತದೆ. ಇಲ್ಲಿನ ಆಕೃತಿಯ ಕಾಲಕ್ಕಾಗಲೇ ಆದಿಮಾನವನ ಕಲೆಗಾರಿಕೆಯಲ್ಲಿ ಇನ್ನೂ ಹೆಚ್ಚು ನೈಜತೆ ಮತ್ತು ಸೂಕ್ಷ್ಮತೆ ಇಲ್ಲಿ ಕಾಣುತ್ತದೆ.



ಚಿತ್ರ ೨೦

ಚಿಕ್ಕರಾಂಪುರದಲ್ಲಿನ ಒನಕೆ ಕಿಂಡಿಯಲ್ಲಿ ಆರು ಕಲ್ಲಾಸರೆಗಳಿವೆ. ಕಲ್ಲಾಸರೆ ಒಂದರಲ್ಲಿ ಮನುಷ್ಯರು, ಎತ್ತುಗಳು, ಸಾಲುಜಿಂಕೆಗಳು, ನವಿಲುಗಳು ಮತ್ತು ಸಾಲುನೃತ್ಯಗಾರರು ಇರುವ ಚಿತ್ರಗಳಿವೆ. ಚೌಕಾಕಾರದ ಮಂಡಲದಲ್ಲಿ ಇಬ್ಬರು ವ್ಯಕ್ತಿಗಳ ಚಿತ್ರವಿದೆ. ಅದು ಸ್ತ್ರೀ ಪುರುಷರಿರಬಹುದು. ಮನುಷ್ಯಾಕೃತಿಗಳ ಮೂರು ಗುಂಪುಗಳ ನಡುವೆ ಸ್ವಸ್ತಿಕ ಚಿಹ್ನೆಯೊಂದು ಕಾಣುತ್ತದೆ. ಜಿಂಕೆಗಳ ಸಾಲು ಒಂದು ಆಯತಾಕಾರದೊಳಗೆ ಎರಡು ಮನುಷ್ಯಾಕೃತಿಗಳಿವೆ. ಈಟಿಯಿಂದ ಜಿಂಕೆಯೊಂದನ್ನು ತಿವಿಯುತ್ತಿರುವ ಚಿತ್ರವಿದೆ. ಎದುರಾಗಿ ನಿಂತಿರುವ ಎತ್ತಿನ ಜೋಡಿಗಳ ನಡುವೆ ಮನುಷ್ಯಾಕೃತಿಯ ಚಿತ್ರವಿದೆ. ಒನಕೆ ಕಿಂಡಿಯಲ್ಲಿ ಪ್ರಮುಖವಾಗಿ ಕಾಣಬರುವ ಚಿತ್ರವು ಇದಾಗಿದೆ.



ಚಿತ್ರ ೨೧

ಚಿಕ್ಕರಾಂಪುರದ ಒನಕೆ ಕಿಂಡಿಯ ಪ್ರದೇಶದಲ್ಲಿರುವ ಮೂರು ಮಂಡಲದ ಚಿತ್ರಗಳು ಗಮನಸೆಳೆಯುತ್ತವೆ. ಬಿಳೆಬಾವಿಯಲ್ಲಿ ಕಂಡುಬರುವ ಮಂಡಲಕ್ಕಿಂತ ಭಿನ್ನವಾಗಿ ಮತ್ತು ಇನ್ನೂ ಉತ್ತಮವಾಗಿ ವಿಕಸನ ಹೊಂದಿದ ಮಾದರಿಯಲ್ಲಿವೆ. ಈ ಮಂಡಲಗಳು ಎಂಟು ಗಂಟಿನಲ್ಲಿ ರಚಿತವಾಗಿವೆ. ಈ ತರಹದ ಮಂಡಲಗಳು ಭಾರತದ ಇನ್ನಾವುದಾದರೂ ಭಾಗದಲ್ಲಿ ಕಂಡಿರಬಹುದು ಎಂದು ಹುಡುಕಾಡುವ ಅಗತ್ಯವಿದೆ. ಮಾಟ, ಮಂತ್ರ, ದೈವದ ಪರಿಕಲ್ಪನೆಯಲ್ಲಿ ಈ ಮಂಡಲಗಳು ರಚನೆಯಾಗಿರಬಹುದು.



**ಚಿತ್ರ ೨೨**



ಸಂಗಾಪುರದ ಎಂಟನೆಯ ಕಲ್ಲಾಸರೆಯು ತುಂಬಾ ವಿಶಿಷ್ಟವಾಗಿದೆ. ಎರಡು ಗೂಳಿಗಳ ದೇಹಕ್ಕೆ ಒಂದೇ ಮುಖವುಳ್ಳ ಚಿತ್ರವನ್ನು ಬಿಡಿಸಲಾಗಿದೆ. ಅಲ್ಲದೇ ಆನೆ ಮತ್ತು ಸವಾರನನ್ನು ಛಾಯಾ ರೂಪದಲ್ಲಿ ಬಿಡಿಸಲಾಗಿದೆ. ಎರಡು ದೇಹದ ಒಂದೇ ಮುಖವುಳ್ಳ ಚಿತ್ರವು ಆದಿಮಾನವನ ಕಲ್ಪನೆಯಲ್ಲಿ ಬಂದಿರಬಹುದಾದ ಉದ್ದೇಶವೇನಿರಬಹುದು. ನಿಜಕ್ಕೂ ಅವನೊಬ್ಬ ಕಲಾವಿದನೇ ಇರಬೇಕು, ಹವ್ಯಾಸಕ್ಕಂತೂ ಬರೆದಿರಲಾರನೆನಿಸುತ್ತದೆ.

ಆದಿಮಾನವನು ಉತ್ತಮ ಕಲಾವಿದನೆಂಬುವುದಕ್ಕೆ ಈ ಚಿತ್ರಗಳೆ ಸಾಕ್ಷಿ. ಅವನ ಪರಿಶ್ರಮದಿಂದ ಅರಳಿದ ಈ ಚಿತ್ರಗಳು ಇಂದಗೂ ಇರುವುದು ಶ್ಲಾಘನೀಯ. ಈ ಚಿತ್ರಗಳಲ್ಲಿ ನೆರಳು-ಬೆಳಕು. ಅಬ್‌ಸ್ಟ್ರ್ಯಾಕ್ಟ್, ಕ್ರಾಸಿಂಗ್, ರೇಖೆ, ಮಂಡಲ ಚಿತ್ರಗಳು ಆಧುನಿಕತೆಯ ಚಿತ್ರಗಳನ್ನು ನೆನಪಿಗೆ ತರುತ್ತವೆ.

## ೩.೨ ಜಾನಪದ ಚಿತ್ರಕಲೆ: ಬೆಳದಿಂಗಳ ಚಿತ್ರಕಲೆ

ಮಾನವನ ಚಿತ್ರಕಲೆಯ ಅಭಿವ್ಯಕ್ತಿಯ ಹಿನ್ನೆಲೆಯಲ್ಲಿ ದೇವರ ಮೇಲಿನ ನಂಬಿಕೆಗಳು ಕೆಲಸಮಾಡಿವೆ. ಅವನ ಬದುಕು ಆರಂಭವಾಗುವುದೇ ದೇವರ ಸ್ತುತಿಯಿಂದ 'ಹೊತ್ತಾರೆ ಎದ್ದು ಯಾರ‍್ಯಾರ ನೆನೆಯಲಿ, ಎಳ್ಳು ಜೀರಿಗೆ ಬೆಳೆವ ಭೂಮಿತಾಯ ನೆನೆಬೇಕು' ಎನ್ನುವುದು ಬಂದಿರುವುದು ಸಹ ದೈವತ್ವದ ನೆಲೆಯಲ್ಲಿಯೇ. ಹೀಗಾಗಿ ಮಾನವನು ತನ್ನ ಅಸಹಾಯಕತೆ, ಭಯವನ್ನು ನೀಗಿಸಿಕೊಳ್ಳಲು ದೇವರಲ್ಲಿ ಮೊರೆಹೋಗುತ್ತಾನೆ. ನಂಬಿಕೆಯಿಂದ ಆಚರಣೆಯೊಂದು ಉಗಮವಾಗುತ್ತದೆ. ಇದು ಬೆಳದಿಂಗಳ ಚಿತ್ರಕಲೆಗೂ ಅನ್ವಯವಾಗುತ್ತದೆ. ಹಾಗಾಗಿಯೇ ಹಬ್ಬ-ಹರಿದಿನಗಳು, ಮದುವೆ, ಮುಂಜಿ, ಜಾತ್ರೆ-ಉತ್ಸವ, ಹುಟ್ಟು-ಸಾವುಗಳ ಕ್ರಿಯೆಗಳಲ್ಲಿ ಹಲವು ರೀತಿಯ ವಿಭಿನ್ನವಾದ ಆಚರಣೆಗಳು ಒಡಮೂಡಿವೆ. ಈ ಆಚರಣೆಗಳ ಸಂದರ್ಭದಲ್ಲಿ ರಚಿಸುವ ರಂಗೋಲಿ, ಹಸೆ, ಬೆಳದಿಂಗಳು ಚಿತ್ರಕಲೆಯನ್ನು ಮೈಗೂಡಿಸಿಕೊಂಡಿವೆ. ಜನಪದರ ಅನೇಕ ಕಲೆಗಳಲ್ಲಿ ಆಚರಣೆಯ ಮೂಲದಿಂದ ಮೂಡಿದ ಚಿತ್ರಕಲೆಯೇ ಹೆಚ್ಚಾಗಿ ಕಂಡುಬರುತ್ತದೆ.

ಹಬ್ಬ-ಹರಿದಿನ-ಹುಣ್ಣಿಮೆಯಂದು ಸಾಮಾನ್ಯವಾಗಿ ಅಲಂಕಾರವೇ ಪ್ರಧಾನ್ಯತೆಯನ್ನು ವಹಿಸುತ್ತದೆ. ಆಯಾ ಹಬ್ಬಗಳ ಹಿನ್ನೆಲೆಯಲ್ಲಿ ಆಚರಣೆಗಳು ಬದಲಾದಂತೆ ಅಲಂಕಾರವೂ

ಬದಲಾಗುತ್ತದೆ. ಈ ಹಿನ್ನೆಲೆಯಲ್ಲಿ ಹಬ್ಬಗಳಲ್ಲಿ ವಿಶೇಷವಾಗಿ ವಿಭಿನ್ನವಾದ ರೀತಿಯ ಚಿತ್ರಗಳು ಕಂಡುಬರುತ್ತವೆ. ಅವುಗಳೆಂದರೆ: ೧. ಭಾರತ ಹುಣ್ಣಿಮೆ (ಗುಡಿ ಹುಣ್ಣಿಮೆ) ಆಚರಣೆಯ ಸಂದರ್ಭದಲ್ಲಿ ಬೆಳದಿಂಗಳ ಚಿತ್ರವನ್ನು ಬಿಡಿಸುವುದು ೨. ಸೀಗಿಹುಣ್ಣಿಮೆಯಲ್ಲಿ ಬುಟ್ಟಿ, ಎತ್ತಿನಗಾಡಿಯ ಮೇಲೆ ಚಿತ್ರ ಬಿಡಿಸುವುದು ೩. ಗೌರಿಹುಣ್ಣಿಮೆಯಲ್ಲಿ ಗೌರಿಚಿತ್ರ ಬರೆಯುವುದು ೪. ಅಷ್ಟಮಿಯಲ್ಲಿ ಕೊಡದ ಮೇಲೆ ಚಿತ್ರ ಬರೆಯುವುದು ೫. ಮಣ್ಣೆತ್ತಿನ ಅಮವಾಸ್ಯೆಯಲ್ಲಿ ಬಸವಣ್ಣನ ಮೂರ್ತಿ ಬರೆಯುವುದು, ಅದಕ್ಕೆ ವರ್ಣಾಲಂಕಾರ ಮಾಡುವುದು ೬. ನಾಗರ ಪಂಚಮಿಯಲ್ಲಿ ನಾಗಪ್ಪನ ಮೂರ್ತಿ ಪ್ರತಿಷ್ಠಾಪನೆ ಮತ್ತು ಅಲಂಕಾರ ಮಾಡುವುದು ೭. ಗಣೇಶ ಚೌತಿಯಲ್ಲಿ ಗಣಪತಿ ಮೂರ್ತಿ ಪ್ರತಿಷ್ಠಾಪನೆ ಮತ್ತು ಅಲಂಕಾರ ಮಾಡುವುದು. ೮. ದೀಪಾವಳಿ ಹಬ್ಬದಲ್ಲಿ ಪಾಂಡವರ ಹೆಜ್ಜೆ ಗುರುತು, ಬುಟ್ಟಿಯ ಮೇಲೆ ಬಿಳಿ ಮತ್ತು ಕೆಂಪು ಬಣ್ಣದಿಂದ ದುಂಡಾಕಾರದಲ್ಲಿ ಬಿಡಿಸಿ, ದೀಪವನ್ನು ಮನೆಯ ಹೊರಗೆ ನಿಗದಿತ ಸ್ಥಳದ ಗೋಡೆಯ ಮೇಲೆ ಹಸೆ ಬರೆದು ಪೂಜಿಸುತ್ತಾರೆ. ಹೀಗೆ ವಿವಿಧ ಪ್ರದೇಶಗಳಲ್ಲಿ ವಿವಿಧ ಜನರು ತಮ್ಮದೇ ಆದ ಆಚರಣೆಯನ್ನು ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ರೂಢಿಸಿಕೊಂಡು ಆಚರಿಸುತ್ತಾ ಬಂದಿರುವುದು ಕಂಡುಬರುತ್ತದೆ.

ಈ ಆಚರಣೆಗಳಲ್ಲಿ ಪ್ರಮುಖವಾಗಿ ಭಾರತ ಹುಣ್ಣಿಮೆಯಂದು ಚಿತ್ರಬಿಡಿಸುವುದು ವಿಶೇಷವಾಗಿ ಕಂಡುಬರುತ್ತದೆ. ಮನುಷ್ಯನಿಗೆ ಪ್ರಕೃತಿಯೊಂದು ವಿಸ್ಮಯ ಮತ್ತು ಭಯಾನಕವಾದುದು, ಅಲ್ಲಿನ ಚಟುವಟಿಕೆಗಳಾದ ಹಗಲು–ರಾತ್ರಿ, ಮೋಡ, ಮಳೆ, ಗುಡುಗು, ಸಿಡಿಲು, ಸೂರ್ಯ, ಚಂದ್ರ, ನಕ್ಷತ್ರ, ಉಲ್ಕೆಗಳ ಉದುರುವಿಕೆ ಇವೆಲ್ಲವೂ ಅವನಿಗೆ ಒಂದಿಲ್ಲೊಂದು ರೀತಿಯಲ್ಲಿ ಅವನ ಜೀವನದಲ್ಲಿ ಪರಿಣಮಿಸಿವೆ. ಈ ವಿಸ್ಮಯ ಮತ್ತು ಭಯದಿಂದ ವಿಚಲಿತನಾಗದೆ ಇರಲು ದೇವರ ಮೊರೆಹೋಗುವ ಸಲುವಾಗಿ ಆಚರಣೆಗಳು ಬಂದವು. ಇಂತಹ ಆಚರಣೆಗಳಲ್ಲಿ ಬೆಳದಿಂಗಳ ಪೂಜೆಯೂ ಒಂದು.

ಚಂದಿರನು ಬೇರೆ ಬೇರೆ ಪ್ರದೇಶ, ದೇಶಗಳಲ್ಲಿ ವಿಭಿನ್ನವಾಗಿ ಆಕರ್ಷಿಸುತ್ತಾನೆ ಮತ್ತು ಪೂಜೆಗೊಳ್ಳುತ್ತಾನೆ. ಸೂರ್ಯ–ಚಂದ್ರನನ್ನು ಆರಾಧಿಸುವ ವಿಧಿವಿಧಾನಗಳು ಪ್ರಾಗೈತಿಹಾಸ ಕಾಲದಿಂದಲೂ ನಡೆದು ಬಂದಿದೆ. ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಮಲ್ಲಾಪುರದಲ್ಲಿ ಬಯಲು ಬಂಡೆಯಲ್ಲಿ ಕೊರೆದ ಚಿತ್ರಗಳಲ್ಲಿ ಸೂರ್ಯ–ಚಂದ್ರರ ಚಿತ್ರವಿರುವುದು ಕಂಡುಬರುತ್ತದೆ. ಬಂಡೆ ೧೦ ರ ದೊಡ್ಡ ಬಂಡೆಯಲ್ಲಿ ಈ ಚಿತ್ರವಿದೆ. ಇದರಲ್ಲಿ ತ್ರಿಶೂಲ ಹಿಡಿದು ನಿಂತಿರುವ ವ್ಯಕ್ತಿ, ನಾಲ್ಕು ಎತ್ತು ಮತ್ತು ಅಶ್ವ ಸವಾರರ ಕುಟ್ಟು ಚಿತ್ರಗಳಿವೆ. ತ್ರಿಶೂಲ ಹಿಡಿದು ನಿಂತ ವ್ಯಕ್ತಿಯದು ದಪ್ಪ ರೇಖೆಯ ಚಿತ್ರ ಬಲಗೈಯಲ್ಲಿ ತ್ರಿಶೂಲವಿದೆ. ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿದ್ದಾನೆ. ತ್ರಿಶೂಲ ವ್ಯಕ್ತಿಗಿಂತ ಎತ್ತರವಾಗಿದೆ. ಅದರ ಮೇಲ್ಭದಿಯ

ಇಕ್ಕೆಲೆಗಳಲ್ಲಿ ಸೂರ್ಯ-ಚಂದ್ರರ ಚಿತ್ರಗಳಿವೆ.[೮] ಈ ಉಲ್ಲೇಖದಲ್ಲಿ ಚಂದ್ರನ ಆರಾಧನೆಯ ಬಗ್ಗೆ ವಿವರಗಳಿಲ್ಲ. ಆದರೆ ಸೂರ್ಯ-ಚಂದ್ರನ ಚಿತ್ರಗಳನ್ನು ಬರೆದಿರುವುದು ಗಮನಾರ್ಹ, ಆಗಿನಿಂದಲೂ ಚಂದ್ರನ ಬಗೆಗೆ ಚಿತ್ರ ಬರೆದಿರುವ ಸುಳಿವು ಸಿಕ್ಕಿದೆ, ಅಂದರೆ ಚಂದ್ರನ ಆರಾಧನೆ ಜಗತ್ತಿನ ಎಲ್ಲ ಜನಾಂಗಗಳಲ್ಲೂ ವಿಭಿನ್ನ ರೂಪಗಳಲ್ಲಿ ಆಚರಣೆಗೆ ಒಳಪಟ್ಟಿದೆ.

ಕರ್ನಾಟಕದಲ್ಲಿನ ತುಮಕೂರು, ಹಾಸನ, ಮಂಡ್ಯ, ಚಿಕ್ಕಮಗಳೂರು ಭಾಗದಲ್ಲಿ ತಿಂಗಳ ಮಾವನ ಪೂಜೆ, ಬೆಳದಿಂಗಳಪ್ಪನ ಪೂಜೆ, ಬೆಳದಿಂಗಳಪ್ಪನ ಹೊಯ್ಯುವುದು, ಹಸೆ ಬರೆಯುವುದು ಎಂದು ಕರೆಯುತ್ತಾರೆ. ಇದನ್ನೇ ಕೋಲಾರ, ಆಂಧ್ರಪ್ರದೇಶದ ಕನ್ನಡ ಸರಹದ್ದುಗಳಲ್ಲಿ ಸುಣ್ಣ ಬಯಲು, ಗೌರಿಬಿದನೂರು ಭಾಗದಲ್ಲಿ ಪುನ್ನಲುಪುಲು, ಚಂದ್ರಪ್ಪನ ಪೊಸಿದಿ, ಚಂದ್ರಮ್ಮ ಪಾಠವೆಂದು ಹೆಸರಿಸುತ್ತಾರೆ.[೯]

ಚಂದ್ರನನ್ನು ಹಳ್ಳಿಗರು ಚಂದ್ರಮ್ಮ, ಚಂದ್ರಾಮಾ, ಚಂದಮಾಮಾ, ತಿಂಗಳ ಮಾಮಾ ಎಂದು ಕರೆಯುತ್ತಾರೆ. ಉತ್ತರ ಕರ್ನಾಟಕದಲ್ಲಿ ಈ ಆರಾಧನೆಗೆ ವಿಶೇಷವಾದ ಮನ್ನಣೆಯಿದೆ. ಆ ಸಮಯದಲ್ಲಿ ಆರಾಧನೆಯ ಭಾಗವಾಗಿ ಬೆಳದಿಂಗಳ ಬರೆಯುವುದು. ಬೆಳದಿಂಗಳ ತೇರು ತೆಗೆಯುವುದು, ಬೆಳದಿಂಗಳನ್ನು ಕರೆದುಕೊಳ್ಳುವುದು, ಚಂದ್ರಾಮನ ಪೂಜೆ, ಇತ್ಯಾದಿಯಾಗಿ ಕರೆದುಕೊಳ್ಳುತ್ತಾರೆ. ಆದರೂ ಈ ಆಚರಣೆಗಳಲ್ಲಿ ಭಿನ್ನತೆಗಳಿರುವುದು ಕಾಣುತ್ತದೆ. ಉತ್ತರ ಕರ್ನಾಟಕ ಭಾಗದಲ್ಲಿ ಭಾರತ ಹುಣ್ಣಿಮೆಗಿಂತ ನಾಲ್ಕು ದಿನ ಮೊದಲು ಬೆಳದಿಂಗಳ ಹೊಯ್ಯುವುದು ಆರಂಭವಾಗುತ್ತದೆ. ಇದು ಐದನೆಯ ದಿನ ಮುಕ್ತಾಯವಾಗುತ್ತದೆ, ಇದು ಹೆಣ್ಣು ಮಕ್ಕಳು ಆಚರಿಸುವ ಧಾರ್ಮಿಕ ಆಚರಣೆಯಾಗಿದೆ. ಇಲ್ಲಿ ಊರಿನ ಎಲ್ಲಾ ಜನರೂ ಜಾತಿಭೇದವಿಲ್ಲದೆ ಆಚರಿಸುವುದು ವಿಶೇಷವಾಗಿದೆ.

ಈ ಬೆಳದಿಂಗಳ ಹೊಯ್ಯುವುದನ್ನು ಆಚರಿಸುವುದರ ಹಿಂದೆ ಕೆಲವು ನಂಬಿಕೆಗಳಿವೆ. ಆ ನಂಬಿಕೆಗಳು ಹೀಗಿವೆ: ೧. ಚಂದ್ರನನ್ನು ಸೂರ್ಯನ ಪೂಜಿಸುವ ಹಾಗೆ ದಿನ ನಿತ್ಯ ಪೂಜಿಸುವುದಿಲ್ಲ. ಆದ್ದರಿಂದ ಚಂದ್ರನನ್ನು ವಿಶೇಷವಾಗಿ ಪೂಜಿಸುವುದಕ್ಕೆ ಗೊತ್ತುಮಾಡಿದ ದಿನವಾದ ಭಾರತ ಹುಣ್ಣಿಮೆಯಂದು ಪೂಜಿಸುತ್ತಾರೆ. ೨. ಉಳವಿಯಲ್ಲಿ ಚನ್ನಬಸವೇಶ್ವರ ಜಾತ್ರೆಯು ನಡೆಯುತ್ತದೆ. ಆಗ ನಡೆಯುವ ರಥೋತ್ಸವದ ಸಂದರ್ಭದ ಹಿಂದಿನ ನಾಲ್ಕು ದಿನ ಸಣ್ಣತೇರನ್ನು, ಐದನೇಯ ದಿನ ತೇರನ್ನು ಎಳೆಯುವರು. ಅದರ ನೆನಪಿನಲ್ಲಿ ಮನೆಗಳ ಗೋಡೆಯ ಮೇಲೆ, ನೆಲದ ಮೇಲೆ ಈ ಚಿತ್ರ ತೆಗೆದು ಪೂಜಿಸುತ್ತಾರೆ. ೩. ಭಾರತ ಹುಣ್ಣಿಮೆಯ ದಿನದಂದು ಅತಿ ಹೆಚ್ಚು ಬೆಳದಿಂಗಳು ಚೆಲ್ಲಿರುತ್ತದೆ. ಆ ಬೆಳದಿಂಗಳಲ್ಲಿ ಸಂತೋಷವಾಗಿರಲು ಹೀಗೆ ಚಂದ್ರನ ಚಿತ್ರವನ್ನು ಬಿಡಿಸುತ್ತಾರೆ. ೪. ಮನೆಯ ಹೊಸ್ತಿಲ ತನಕ ಚಂದ್ರನ ಬೆಳದಿಂಗಳು ಈ ಐದು ದಿನ ಬೀಳುತ್ತದೆ, ಅದಕ್ಕಾಗಿ ಈ ಚಿತ್ರ ಬರೆಯುತ್ತಾರೆ. ೫. ಚಂದ್ರನ ಪೂಜೆ ಮಾಡುವುದರಿಂದ

ಒಳ್ಳೆಯದಾಗುತ್ತದೆ ಎಂಬ ನಂಬಿಕೆ. ಅಲ್ಲದೇ ಚೌತಿಯಂದು ಚಂದ್ರನನ್ನು ನೋಡಬಾರದೆಂಬ ಮಿಥ್ ಇದೆ. ಆ ಸಂಧರ್ಭದಲ್ಲಿ ನೋಡಲಾಗದೇ ಇರುವುದನ್ನು, ಭರತ ಹುಣ್ಣಿಮೆಯಲ್ಲಿ ನೋಡುವುದು ಶ್ರೇಯಸ್ಕರ ಎಂಬ ಭಾವನೆಯಿಂದ ಪೂಜಿಸುತ್ತಾರೆ. ೬. ಮದುವೆಯಾಗದ ಹುಡುಗಿಯರಿಗೆ ಕಂಕಣ ಫಲ, ಮದುವೆಯಾದವರಿಗೆ ಮಕ್ಕಳ ಫಲ ದೊರೆಯುತ್ತದೆ ಎಂಬ ನಂಬಿಕೆಯಿಂದ ಇದನ್ನು ಆಚರಿಸುತ್ತಾರೆ. ೭. ಗರ್ಭಿಣಿಯರು ತೇರಿನ ಚಿತ್ರ ಬಿಡಿಸಿದರೆ ಬಯಸಿದ ಮಕ್ಕಳು ಹುಟ್ಟುತ್ತವೆ ಎಂಬ ನಂಬಿಕೆಯೂ ಇದೆ. ೮. ಚಂದ್ರನನ್ನು ಪೂಜಿಸುವುದರಿಂದ ರೋಗ ರುಜಿನಗಳು ಬರುವುದಿಲ್ಲ ಮತ್ತು ಶಮನವಾಗುತ್ತದೆ ಎಂಬ ನಂಬಿಕೆಯಿದೆ.

ಹೀಗೆ ಭಿನ್ನ ಭಿನ್ನವಾದ ನಂಬಿಕೆ, ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಜನರು ಈ ಧಾರ್ಮಿಕ ಆಚರಣೆಯನ್ನು ಮಾಡುತ್ತಾರೆ. ಇದು ಉತ್ತರ ಕರ್ನಾಟಕದಲ್ಲಿ ತುಂಬಾ ಆಚರಣೆಯಲ್ಲಿದೆ. ಈ ಆಚರಣೆ ಐದು ದಿನಗಳವರೆಗೆ ಜರುಗುತ್ತದೆ, ಪ್ರತಿದಿನ ಸಂಜೆ ಹಸೆ ಬರೆದು ರಾತ್ರಿ ವೇಳೆಗೆ ಪೂಜಿಸುತ್ತಾರೆ.

ಮೊದಲ ದಿನ ಸೂರ್ಯ-ಚಂದ್ರರ ಚಿತ್ರಗಳನ್ನು ಬಿಡಿಸುತ್ತಾರೆ, ಮೊದಲನೆಯ ದಿನ



ಹಾಕುವ ಸೂರ್ಯ-ಚಂದ್ರರನ್ನು ಗಂಗಾಳ ಬಟ್ಟಲು ಎಂದು ಭಾವಿಸಲಾಗುತ್ತದೆ 'ಗಂಗಾಳ ಹೊಯ್ಯುವುದು', 'ಬಟ್ಟಲು ಹೊಯ್ಯುವುದು' ಎನ್ನುತ್ತಾರೆ. ಇಲ್ಲಿ ಸೂರ್ಯನನ್ನು ಗಂಗಾಳವೆಂದು, ಚಂದ್ರನನ್ನು ಬಟ್ಟಲು ಎಂದು ಕರೆಯುತ್ತಾರೆ. ಇದನ್ನು 'ತಳಕು ಬಟ್ಟಲು' ಎಂದೂ ಸಹ ಕರೆಯುತ್ತಾರೆ. ಅಂದರೆ ಒಂದು ದೊಡ್ಡ ವೃತ್ತವನ್ನು ಮತ್ತು ಅದರೊಳಗೆ ಸಣ್ಣ ವೃತ್ತವನ್ನು ಚಿತ್ರಿಸುವರು. ಇದನ್ನೇ ತಳಕು ಬಟ್ಟಲು ಚಿತ್ರಿಸುವುದು ಎನ್ನುತ್ತಾರೆ. ಇದನ್ನು ಚಿತ್ರಿಸಲು ದೊಡ್ಡದೊಂದು ಅಳತೆಯ ಊಟದ ತಟ್ಟೆ ಮತ್ತು ಸಣ್ಣದೊಂದು ಅಳತೆ ಬಟ್ಟಲಿನ ಸಹಾಯದಿಂದ 'ತಳಕು ಬಟ್ಟಲು' ಬಿಡಿಸುತ್ತಾರೆ.

ಎರಡನೆಯ ದಿನ ಕೊಳಲಬಾವಿ ಇಲ್ಲವೇ ರಾಮನ ತೊಟ್ಟಿಲು ಚಿತ್ರಿಸುವರು. ತಂತಿ, ಕಬ್ಬಿಣದ ಸಲಾಕೆ ತುಂಡುಗಳು, ಹಗ್ಗ, ದಪ್ಪನಾದ ದಾರ ಇವುಗಳಲ್ಲಿ ಯಾವುದಾದರೂ ವಸ್ತುವಿನ ಸಹಾಯದಿಂದ ಆಯತ, ಚೌಕಗಳಿಂದ ರೂಪಿತವಾದ 'ಕೊಳಲಬಾವಿ' ಯ ಚಿತ್ರವನ್ನು ರಚಿಸುತ್ತಾರೆ.





ಮೂರನೇಯ ದಿನ ಎಲೆ ಬಳ್ಳಿಯನ್ನು ಚಿತ್ರಿಸುವರು. ಬೇರೆ ಬೇರೆ ಗಿಡದ ಎಲೆಗಳ ಸಹಾಯದಿಂದ ಎಲೆಬಳ್ಳಿಯನ್ನು ಬಿಡಿಸಲು ಬಳಸುತ್ತಾರೆ. ಎಲೆಯನ್ನು ಇಟ್ಟು ಅದರ ಸುತ್ತಲೂ ಚುಕ್ಕೆಗಳನ್ನು ಇಟ್ಟು ಬಿಡಿಸಲು ಪ್ರಯತ್ನಿಸುತ್ತಾರೆ. ಮಲ್ಲಿಗೆ, ದಾಸವಾಳ, ಲಿಂಬೆ ಅಥವಾ ಇನ್ನಿತರ ಎಲೆಗಳನ್ನು ಬಳಸುತ್ತಾರೆ. ದಪ್ಪನಾದ ರಟ್ಟಿನಲ್ಲಿ ಎಲೆಯ ಅಚ್ಚನ್ನು ಮಾಡಿಕೊಂಡು ಬೆಳದಿಂಗಳು ಬರೆಯುತ್ತಾರೆ.

ನಾಲ್ಕನೆಯ ದಿನ ಹುಚ್ಚಯ್ಯನನ್ನು ಚಿತ್ರಸುತ್ತಾರೆ. ಚಿಕ್ಕ ತೇರು ಇದನ್ನೂ ಸಹ ಹಗ್ಗ, ದಾರ, ರಟ್ಟು, ದಪ್ಪ ಕಾಗದ, ಎಲೆಯ ಸಹಾಯದಿಂದ ಬಿಡಿಸುತ್ತಾರೆ. ಇದಕ್ಕೂ ಮೊದಲು ನೆಲದ ಮೇಲೆ, ಮಣೆಯ ಮೇಲೆ ಬಿಡಿಸಿದ್ದ ಹಿಂದಿನ ದಿನದ ಚಿತ್ರಗಳನ್ನು ಮತ್ತೆ ಅಳಿಸಿ ಹಾಕಿ, ಬೆಳದಿಂಗಳಲ್ಲಿ ಚಿತ್ರವನ್ನು ಹಾಕುತ್ತಾರೆ. ಈ ಸಂದರ್ಭದಲ್ಲಿನ ಚಿತ್ರವು ಗೋಪುರಾಕಾರವಾಗಿದ್ದು, ಕೆಳಭಾಗದಲ್ಲಿ ಗಾಲಿಗಳನ್ನು ಮಾಡಿರುತ್ತಾರೆ. ಇದು ತೇರಿನ ಮಾದರಿಯ ಚಿತ್ರವೂ ಹೌದು. ದೊಡ್ಡ ತೇರು ಎಳೆಯುವ ಮೊದಲು ಚಿಕ್ಕದಾದ ತೇರು, ಹುಚ್ಚಯ್ಯನನ್ನು ಎಳೆಯುತ್ತಾರೆ. ಇದನ್ನು ಹೆಣ್ಣು ಮಕ್ಕಳು ಚಿತ್ರದಲ್ಲಿ ಬಿಡಿಸುತ್ತಾರೆ. ಹೆಣ್ಣು ಮಕ್ಕಳು ತೇರನ್ನು ನೋಡಬಹುದೇ ವಿನಃ ಎಳೆಯುವ ಕಾರ್ಯವನ್ನು ಮಾಡುವುದು ಬಹಳಷ್ಟು ಕಡಿಮೆ. ಹಾಗಾಗಿಯೇ ಈ ಬೆಳದಿಂಗಳಿನ ನೆಪದಲ್ಲಿ ತಾವು ಅದನ್ನು ರಚಿಸುವ ಮೂಲಕ ಪೂಜೆ ಮಾಡುವುದು ಗಮನಾರ್ಹವಾಗಿದೆ.



ಐದನೆಯ ದಿನದ ಈ ತೇರಿನಲ್ಲಿ ಹಲವಾರು ವಿಭಿನ್ನವಾದ ವೈವಿಧ್ಯತೆಯಿಂದ ಕೂಡಿದ ಚಿತ್ರವನ್ನು ರಚಿಸುತ್ತಾರೆ. ಈ ವೈವಿಧ್ಯತೆ ವೈಯಕ್ತಿಕವಾಗಿಯೂ, ಪ್ರಾದೇಶಿಕವಾಗಿಯೂ ಇರುತ್ತದೆ. ಈ ಚಿತ್ರದಲ್ಲಿ ಬಳಸುವ ವಸ್ತು, ಸಂಕೇತ, ಪೂಜೆಯ ವಿಧಾನ ಒಂದೇ ಆಗಿರುತ್ತದೆ. ಮೊದಲ

ನಾಲ್ಕು ದಿನ ಹಾಲು ಸಕ್ಕರೆ ನೈವೇದ್ಯವಾಗಿದ್ದರೆ, ಐದನೆಯ ದಿನ ಹೋಳಿಗೆಯ ನೈವೇದ್ಯವಿರುತ್ತದೆ, ಅಲ್ಲದೇ ಈ ಚಿತ್ರಗಳ ಜೊತೆಯಲ್ಲಿಯೇ ಹಾವು, ಚೇಳು, ಏಣಿ ಇತ್ಯಾದಿ ಬಿಡಿ ಚಿತ್ರಗಳು ಅಲ್ಲಿರುತ್ತವೆ.







ಬೆಳದಿಂಗಳಿನ ಚಿತ್ರಗಳಲ್ಲಿ ಬಳಸಿರುವ ಸಂಕೇತ ಪ್ರತಿಮೆಗಳು ಗಮನ ಸೆಳೆಯುತ್ತವೆ. ಚೇಳು ಉತ್ತರ ಕರ್ನಾಟಕದಲ್ಲಿ ಸಾಮಾನ್ಯವಾಗಿ ಬೆಳದಿಂಗಳ ಚಿತ್ರಕಲೆಯಲ್ಲಿ ಕಂಡುಬರುತ್ತದೆ.

ಚೇಳನ್ನು ಬರೆಯುವ ಉದ್ದೇಶವೇನಿರಬಹುದೆಂದು ಸ್ಥಳಿಯರಲ್ಲಿ ವಿಚಾರಿಸಿದಾಗ ಅವರು ಹೀಗೆ ಹೇಳುತ್ತಾರೆ "ಮನೆಗೆ ಚೇಳು ನುಗ್ಗಿದಾಗ ಚನ್ನಬಸವನ ಮೇಲೆ ಆಣೆ ಮಾಡಿದರೆ ಚೇಳು ನಿಂತಲ್ಲೆ ನಿಲ್ಲುತ್ತದೆ, ಆಗ ಅದನ್ನು ಸಾಯಿಸಬಹುದು" ಈ ಹಿನ್ನೆಲೆಯಲ್ಲಿಯೇ ಬೆಳದಿಂಗಳ ಚಿತ್ರಕಲೆಯಲ್ಲಿ ಚೇಳು ಹಾವು ಪ್ರವೇಶವನ್ನು ಪಡೆದಿವೆ. ಏಣಿಯು ಜೀವನದ ಏರಿಳಿತವನ್ನು ಪ್ರತಿನಿಧಿಸುವ ಸಂಕೇತವಾಗಿ ಬೆಳದಿಂಗಳ ಚಿತ್ರಕಲೆಯಲ್ಲಿ ಕಾಣಬರುತ್ತದೆ. ವಿಷಜಂತುಗಳು ಮನೆಯೊಳಗೆ ಬರದಿರಲಿ, ಅವುಗಳ ಕಾಟದಿಂದ ಪೂರ್ವಯೋಜಿತವಾಗಿಯೇ ಬಿಡಿಸಿಕೊಳ್ಳಬಹುದೆಂಬ ಒಂದು ನಂಬಿಕೆಯೂ ಇದೆ. ಹಾವಿನ ಚಿತ್ರವನ್ನು ನಾಗದೋಷ ಮುಕ್ತಿಗಾಗಿಯೂ ಬಿಡಿಸುತ್ತಿರಬಹುದೆಂದು ಕೆಲವರು ಹೇಳುತ್ತಾರೆ. ಹಾವು ಚೇಳುಗಳು ಸಹ ದೇವರೆಂಬ ಪರಿಕಲ್ಪನೆಯೊಂದಿಗೆ ಆ ಸಂದರ್ಭದಲ್ಲಿ ಬಿಡಿಸುತ್ತಾರೆ.[೧೦] ಬೆಳದಿಂಗಳಿನ ಚಿತ್ರಗಳಲ್ಲಿ ಜನಪದರು ತಮ್ಮ ದಿನನಿತ್ಯದ ಬದುಕಿನಲ್ಲಿ ಕಂಡುಬರುವ ಸೂರ್ಯ, ಚಂದ್ರ, ಬಸವಣ್ಣ, ಹಾವು, ಚೇಳು, ಏಣಿ ಹಾಗೂ ಕೆಲವು ಧಾರ್ಮಿಕ ಚಿಹ್ನೆಗಳನ್ನು ಕೂಡ ಚಿತ್ರಿಸುತ್ತಾರೆ. ನಿರ್ದಿಷ್ಟವಾಗಿ ಇಂತಹ ಪ್ರಾಣಿ-ಪಕ್ಷಿಯ ಚಿತ್ರಗಳನ್ನು ತೆಗೆಯಬೇಕೆಂಬ ನಿಯಮವಿಲ್ಲದೆ ಬಿಡಿಸುತ್ತಾರೆ. ಆದರೆ ಇವೆಲ್ಲ ಜನಪದರ ಬದುಕಿನ ಹಿನ್ನೆಲೆಯಿಂದಲೇ ಚಿತ್ರಿತವಾಗುತ್ತವೆ. ಮನಸ್ಸಿನ ಸ್ವಾತಂತ್ರ್ಯದೊಂದಿಗೆ ಅನೇಕ ಚಿತ್ರಗಳು ಬೆಳದಿಂಗಳ ಚಿತ್ರಕಲೆಯಲ್ಲಿ ಪ್ರವೇಶ ಪಡೆಯುತ್ತವೆ. ಮುಖ್ಯವಾಗಿ ಇರಬೇಕಾದ ಸೂರ್ಯ-ಚಂದ್ರ, ಚೇಳು, ಹಾವು, ತೇರು, ಕೊಳಲಬಾವಿ, ಎಲೆಬಳ್ಳಿಗಳನ್ನು ಬರೆಯುವುದನ್ನು ತಪ್ಪಿಸುವುದಿಲ್ಲ. ಈ ಚಿತ್ರಸಮೂಹ ಸೃಷ್ಟಿಯಾಗಿ ವ್ಯಕ್ತಗೊಂಡು ಆರಾಧನೆಯಾಗಿ, ಸಂಪ್ರದಾಯವಾಗಿ, ಸಮುದಾಯದ ಚಟುವಟಿಕೆಯಾಗಿ ಬೇರೂರಿದೆ. ಈ ಚಿತ್ರರಚನೆಯಲ್ಲಿ ಆಧುನಿಕ ಚಿತ್ರಕಾರರ ಹಾಗೆ ಯಾವುದೇ ತರಹದ ಸೂಕ್ಷ್ಮಗಾರಿಕೆಯಾಗಲೀ, ಶೈಲಿಯಾಗಲೀ ಕಡ್ಡಾಯವಾಗಿರುವುದಿಲ್ಲ. ಜನಪದರು ಸಹ ಈ ಹಬ್ಬದ ಸಂದರ್ಭದಲ್ಲಿ ಚಿತ್ರ ಬರೆಯುವಾಗ ಆಧುನಿಕ ಚಿತ್ರಕಾರರ ಹಾಗೆಯೇ ಗೋಡೆಯ ಮೇಲೆ ಕೆಮ್ಮಣ್ಣಿನಿಂದ, ನೆಲದ ಮೇಲೆ ಸಗಣಿಯಿಂದ ಸಾರಿಸಿ ಕ್ಯಾನವಾಸ್ ಮಾಡಿಕೊಳ್ಳುವ ಮೂಲಕ ಚಿತ್ರಕ್ಕೆ ಬೇಕಾದ ಚೌಕಟ್ಟನ್ನು ಸಿದ್ಧತೆ ಮಾಡಿಕೊಳ್ಳುತ್ತಾರೆ. ಕೆಂಪು ಬಣ್ಣದ ಮೇಲೆ ಬಿಳಿ ಬಣ್ಣದ ಬೊಟ್ಟು, ಅಥವಾ ರೇಖೆಗಳನ್ನೆಳೆದು ಚಿತ್ರಿಸುವುದೇ ಈ ಕಲೆಯ ಜೀವಾಳ. ಇಲ್ಲಿ ಬೊಟ್ಟು ಇಟ್ಟು ರಚಿಸುವ ಕಲೆಯಲ್ಲಿ ಬೊಟ್ಟನ್ನು ತಾವು ಬೆಳೆದ ಧಾನ್ಯವೆಂದು ಪರಿಭಾವಿಸಲಾಗುತ್ತದೆ.

ಬೆಳದಿಂಗಳ ಪೂಜೆಯ ಚಿತ್ರಗಳು ಶಿಲಾಯುಗದ ಆದಿಮಾನವನು ಕಲ್ಲಾಸರೆಯಲ್ಲಿ ಬರೆಯುತ್ತಿದ್ದುದನ್ನು ನೆನಪಿಸುತ್ತವೆ. ಅವನು ಸಹ ಗವಿಯ ಕಲ್ಲಿನ ಒಳಗೋಡೆಗಳ ಮೇಲೆ ಬಿಡಿಸುತ್ತಿದ್ದುದನ್ನು ಸಮೀಕರಿಸಬಹುದು. ಆದಿಮಾನವನು ಕೂಡ ತನ್ನ ಸಂತೋಷವನ್ನು ವ್ಯಕ್ತಪಡಿಸಲು ತನ್ನ ಆಶ್ರಯ ತಾಣಗಳಲ್ಲಿ ಚಿತ್ರರಚನೆ ಮಾಡುತ್ತಿದ್ದು, ತನ್ನ ದಿನನಿತ್ಯದ ಚಟುವಟಿಕೆ, ಅನುಭವಗಳನ್ನು ಚಿತ್ರದ ವಿಷಯ ವಸ್ತುವನ್ನಾಗಿಸಿಕೊಂಡಿದ್ದನು. ಅಂದಿನ

ಚಿತ್ರಗಳು ಕೂಡ ಯಾವುದೇ ಸೂಕ್ಷ್ಮಗಾರಿಕೆ, ಶೈಲಿಯಿಂದ ರಚಿತವಾಗಿಲ್ಲ. ಜನಪದರು ಆರಾಧನೆಯಂತಹ ಪ್ರಾಚೀನ ಭವ್ಯ ಪರಂಪರೆಯನ್ನು ಇಂದಿನ ಜಾಗತೀಕರಣ ಸಂದರ್ಭದಲ್ಲಿ ಆಧುನಿಕ ಪರಿಕರಗಳಾದ ಇಂಚುಪಟ್ಟಿ, ಪೆನ್ಸಿಲ್, ಮೂಲಕ ರೇಖೆಗಳನ್ನು ರಚಿಸಿ, ನಂತರ ಬಣ್ಣದ ಬೊಟ್ಟುಗಳಿಂದ ಚಿತ್ರಿಸುತ್ತಾರೆ.

**೩.೩ ಕನ್ನಡ ಸಾಹಿತ್ಯದಲ್ಲಿ ಚಿತ್ರಕಲೆ**

ಕನ್ನಡದ ಕವಿಗಳು ಜೀವನ ಸೌಂದರ್ಯದ ಅನೇಕ ಮುಖಗಳಲ್ಲಿ ತಮ್ಮ ಕಾವ್ಯಗಳಲ್ಲಿ ಹಿಡಿದಿದ್ದಾರೆ. ಭಾವಾಭಿವ್ಯಕ್ತಿ, ಸಂವೇದನೆಗಳನ್ನು ಕಾವ್ಯಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಈ ಕಾವ್ಯಗಳಲ್ಲಿ ಮಾತ್ರವೇ ಭಾವಾಭಿವ್ಯಕ್ತಿ, ಸಂವೇದನೆ ಇರುವುದಿಲ್ಲ, ವಿವಿಧ ಕಲೆಗಳಲ್ಲಿಯೂ ಇದು ಸಾಧ್ಯ. ಅವುಗಳಲ್ಲಿ ಚಿತ್ರಕಲೆಯೂ ಒಂದು. ಹಳೆಗನ್ನಡದ ಕಾವ್ಯಗಳನ್ನು ಗಮನಿಸಿದಾಗ ಈ ಅಂಶವು ಬೆಳಕಿಗೆ ಬರುತ್ತದೆ. ಅನೇಕ ಕಾವ್ಯಗಳಲ್ಲಿ ಇಂತಹ ಕಲೆಗಳ ವರ್ಣನೆ ಬರುತ್ತದೆ.

ಕನ್ನಡದ ಕವಿಗಳು 'ಚಿತ್ರಕಲೆ'ಯ ಬಗೆಗೆ ಉಪಮೆ, ರೂಪಕ, ಕಾವ್ಯಗಳಲ್ಲಿ ಕೃತಿಯ ನೇರ ವಿಮರ್ಶೆ, ತಾಂತ್ರಿಕತೆ ಮತ್ತು ವಿಧಾನಗಳನ್ನು ಪ್ರಸ್ತಾಪಿಸುವರು. ಇದರಿಂದಾಗಿಯೇ ಆ ಕವಿಗೆ ಕಾವ್ಯದ ಜತೆಗೆ ಅನ್ಯಜ್ಞಾನದ ಅಭಿರುಚಿ ಮತ್ತು ತಿಳುವಳಿಕೆ ಮುಖ್ಯವಾಗಿತ್ತು ಎಂಬುದನ್ನು ಗಮನಿಸಬಹುದು.

ಕನ್ನಡ ಕಾವ್ಯಗಳಲ್ಲಿ ಬಹುತೇಕವಾಗಿ ಚಿತ್ರಕಲೆ ಪ್ರಸ್ತಾಪ ಸಾಕಷ್ಟು ಬಂದಿದೆ. ಶಿಲ್ಪಕಲೆಯ ಬಗೆಗೆ ಅಷ್ಟೊಂದು ಕೇಳಿಕೊಳ್ಳುವಂತಹ ಪ್ರಸ್ತಾಪ, ವರ್ಣನೆ ಬಂದಿಲ್ಲ. ಚಿತ್ರ, ಚಿತ್ರಕ, ಚಿತ್ರಕರ್ಮ, ಚಿತ್ರಶಾಲೆ, ಚಿತ್ರಗೃಹ ಮುಂತಾದವುಗಳ ಪ್ರಸ್ತಾಪ ಕಾವ್ಯಗಳಲ್ಲಿ ಕಾಣುತ್ತದೆ. ಈ ದೃಷ್ಟಿಯಿಂದ ಗಮನಿಸಿದಾಗ ಪ್ರಾಚೀನ ಕಾಲದಿಂದಲೂ ಚಿತ್ರಕಲೆ ಇತ್ತೆಂದು ಅಭಿಪ್ರಾಯಪಡಬೇಕಾಗುತ್ತದೆ.

ಕನ್ನಡ ಮೊಟ್ಟಮೊದಲ ಉಪಲಬ್ಧ ಗ್ರಂಥಗಳಾದ 'ಕವಿರಾಜ ಮಾರ್ಗ' ಮತ್ತು 'ವಡ್ಡಾರಾಧನೆ' ಯಲ್ಲಿ ಚಿತ್ರಕಲೆಗೆ ಸಂಬಂಧಿಸಿದಂತೆ ಪ್ರಸ್ತಾಪ ಬರುತ್ತದೆ, 'ಕವಿರಾಜ ಮಾರ್ಗ'ದ ಮೊದಲ ಪರಿಚ್ಛೇದದಲ್ಲಿ ಚಿತ್ರಕಲೆಯನ್ನು ಕುರಿತು ಈ ಕೆಳಕಂಡಂತೆ ಉಲ್ಲೇಖಗೊಂಡಿದೆ.

ತ್ರಕ ರಂಬೋಲ್ ಪರಭಾಗ ಭಾವ ಬಿಲಸದ್ವಣ ತ್ರಮಾ ವೃತ್ತಿಯಂ
ಪ್ರಕಟಂ ಮೂಡಿರೆಪೊಳ್ದ ಚಿತ್ರಕೃತಿಯಂ ವೈವರ್ಣಿಸುತ್ತಂ ಕವಿ
ಪ್ರಕರಂ ಶ್ರೀವಿಜಯ ಪ್ರಭೂತ ಮನಿದಂ ಕೈಕೊಳ್ವುದೀ ಮೊಳ್ಕೆಯಿಂ (ಪದ್ಯ –೧ )

ಕವಿರಾಜ ಮಾರ್ಗಕಾರನು 'ಸಕಳಾಳಾಪ ಕಳಾಪ' ಅಂದರೆ ಮಾತಿನ ಅಥವಾ ಶಬ್ದ ಕಲೆಯನ್ನು ಒಬ್ಬ ಚಿತ್ರಕಾರ ಅಥವಾ ಚಿತ್ರಗಾರ ಒಂದು ಚಿತ್ರದ ಅಂತರ್ಗತ ಭಾವವನ್ನು, ಸೌಂದರ್ಯವನ್ನು ಪ್ರಕಟ ಮಾಡುವ ರೀತಿಯಲ್ಲಿಯೇ ವರ್ಣಿಸಿದ್ದಾನೆ ಎಂಬುದು ಇದರ

ಅರ್ಥ. ಕವಿರಾಜಮಾರ್ಗಕಾರನು ಅನೇಕ ಕಡೆಯಲ್ಲಿ ಉಪಮೆ ರೀತಿಯಲ್ಲಿ ಕಲಾವರ್ಣನೆ ಮತ್ತು ಕಲಾವಿಚಾರಗಳನ್ನು ಸಂದರ್ಭೋಚಿತವಾಗಿ ಮಾಡಿದ್ದಾನೆ. ಕವಿರಾಜಮಾರ್ಗದ ೩ನೇ ಭಾಗದ ೧೯೩ನೇ ಪದ್ಯದಲ್ಲಿ ಮಾರ್ಗಕಾರ ಹೇಗೆ ಹೇಳುತ್ತಾನೆ. 'ಚಿತ್ರಕಾರನು ಹೇಗೆ ವಿವಿಧ ಬಣ್ಣಗಳ ಬೆಂಕಿಯಿಂದ ಚಿತ್ರ ಸುಂದರವಾಗಿ ಕಂಗೊಳಿಸುವಂತೆ ಮಾಡುತ್ತಾನೋ ಹಾಗೆ ವರ್ಣಕ್ರಮ ವೃತ್ತಿಯಿಂದ ಎಂದರೆ ಅಕ್ಷರ ವಿನ್ಯಾಸ ಕ್ರಮದಿಂದ ಕವಿರಾಜಮಾರ್ಗ ಗ್ರಂಥವನ್ನು ರಚಿಸಲಾಗಿದೆ'.[೧೧] ಎಂದು ಹೇಳಿಕೊಂಡಿದ್ದಾನೆ. ಕವಿರಾಜಮಾರ್ಗದಲ್ಲಿ 'ಚಿತ್ರಕಲೆ' ಇರುವ ಪ್ರಾಥಮಿಕ ಕುರುಹು ಸಿಗುತ್ತದೆ.

ವಡ್ಡಾರಾಧನೆಯಲ್ಲಿನ 'ಸುಕುಮಾರ ಸ್ವಾಮಿ ಕಥೆ' ಯಲ್ಲಿ ಸೋಮಶರ್ಮ ತನ್ನ ಮಗಳಾದ ನಾಗಶ್ರೀಗೆ 'ವೈದಯಿಕ' ನೆಂಬ ಕಳ್ಳನು ಚಿತ್ರಪಟಗಳನ್ನು ತೋರಿಸಿ ಭತ್ತವನ್ನು ಕದಿಯುವ ಕತೆಯನ್ನು ಹೇಳುತ್ತಾನೆ. "ವೈನಯಿಕನೆಂಬೊನೊರ್ವ ಪುರುಷಂ ಕನ್ನೆಯ ಬಂಟನ ವೃದ್ಧಸ್ತ್ರೀಯ ಮೂವರ ಚಿತ್ರಕಥೆಗಳಂ ಪಟದೊಳ್ ತೋಱರೆ ಪೇಮ್ದಿ ಲೋಗರಂ ಡಂಬಿಸಿ ಮೂರುಗೊಳ್ವ ಬತ್ತಮಂ ಕಳ್ವೊನ್" ಎಂಬುದಾಗಿ ಇದೆ.[೧೨] ಚಿತ್ರಪಟಗಳನ್ನು ತೋರಿಸುತ್ತಲೆ ಕಳುವು ಮಾಡುವ ಈ ಪ್ರಸಂಗವು ತುಂಬ ರೋಮಾಂಚನಕಾರಿಯಾಗಿದೆ. ಅದರಲ್ಲಿ ಬಳಸಿದ ಚಿತ್ರಪಟಗಳು ಜನರನ್ನೇ ಮೈಮರೆಸುವಷ್ಟು ಕಲಾವಂತಿಕೆಯನ್ನು ತೋರಿದ್ದನ್ನು ಇಲ್ಲಿ ಗುರುತಿಸಬಹುದಾಗಿದೆ. ಆ ಕಾಲಕ್ಕಾಗಲೇ ಚಿತ್ರಕಲೆಯು ವೈಭವಯುತವಾಗಿತ್ತೆಂಬುದನ್ನು ಗಮನಿಸಬಹುದು.

ವಡ್ಡಾರಾಧನೆಯಲ್ಲಿ ಸುನಂದೆ ಮತ್ತು ವಿಶ್ವಸೇನ ಮಹಾರಾಜರು ಸನತ್ಕುಮಾರನ ಚಿತ್ರಪಟವನ್ನು ಬರೆಸಿದ್ದು ಕಂಡುಬರುತ್ತದೆ. "ಸುನಂದೆಯಿಂತೆಂದಳ್ ಎನ್ನ ತಂದೆ ವಿಶ್ವಸೇನ ಮಹಾರಾಜನೊಳಪ್ಪ ಮಿತ್ರಸಂಬಂಧಿದಿನೊಂದು ದಿವಸಂ ಹಸ್ತಿನಾಪುರಕ್ಕೆ ಪೋಗಿ ಕುಮಾರನಂ ಕಂಡಾತನ ರೂಪಂ ಪಟದೊಳ್ ಮರೆದು ತಂದಾ ರೂಪನೆಲ್ಲಾ ಪೂಮ್ತಿಂನೋರ್ಪೆನುಂ ಬರೆವೆನುಂ ಭಾವಿಸುತ್ತಿರ್ಪೆನಪ್ಪುದವೆಂದವೆವೆನಾ ರೂಪುಂ ನಿಮ್ಮನೆ ಪೋಲ್ಕುಮನೆಯಂತಪ್ಪೊಡಂ"[೧೩]

ಸನತ್ ಕುಮಾರನ ರೂಪನ್ನು ಪಟದಲ್ಲಿ ಬಿಡಿಸಿರುವ 'ವ್ಯಕ್ತಿಚಿತ್ರ'ದ ಉಲ್ಲೇಖವಿರುವುದು ಗಮನಾರ್ಹವಾಗಿದೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಈ ಎರಡು ಕೃತಿಗಳಲ್ಲಿ ವಿಭಿನ್ನವಾದ ನೆಲೆಯಿಂದ ಚಿತ್ರಗಳು ಮೂಡಿಬಂದಿವೆ. ಈ ದೃಷ್ಟಿಯಿಂದ ಗಮನಿಸಿದಾಗ ಚಿತ್ರಕಲೆಯೂ ಪ್ರಾಚೀನದಲ್ಲಿ ವೈವಿಧ್ಯತೆಯಿಂದ ಕೂಡಿತ್ತು ಎಂಬುದನ್ನು ನಂಬಬೇಕಾಗುತ್ತದೆ. ಅದೇ ಸಂದರ್ಭದಲ್ಲಿನ ದೇವಾಲಯಗಳಲ್ಲಿನ ಶಿಲ್ಪಗಳು ಇದಕ್ಕೆ ಸಾಕ್ಷಿಯಾಗಬಲ್ಲದು. ಈ ಕೃತಿಗಳ ರಚನೆಯ ಕಾಲಕ್ಕಾಗಲೇ ಕರ್ನಾಟಕದ ರಾಜವಂಶಗಳು ಅನೇಕ ಸುಪ್ರಸಿದ್ಧ ದೇವಾಲಯಗಳನ್ನು ನಿರ್ಮಿಸಿದ್ದವು. ಈ ಹಿನ್ನೆಲೆಯಲ್ಲಿಯೂ ಚಿತ್ರಕಲೆಯೆಂಬುದು ಪ್ರಥಮವಾಗಿ ಬಂದಿರುವುದನ್ನು ಈ ಕಾವ್ಯಗಳು ಬಿತ್ತರಿಸುತ್ತವೆ.

"ಶರತ್ ಕಾಲದ ಮುಗಿಲೊಳೋರಂತಪುರ ನಾದಮಾನುಂವಿ

ಚಿತ್ರಮಪ್ಪುದುಂ, ಸಹಸ್ರಕೂಟವೆಂಬ ಜಿನಾಲಯಮಂ ಮೂಡಿಸ"

ಎಂಬ ಉಲ್ಲೇಖ ಬರುತ್ತದೆ. ಅಂದರೆ ಸಹಸ್ರಕೂಟವೆಂಬ ಜೀನಾಲಯವನ್ನು ಕಟ್ಟಿಸಿ, ಆ ಜೀನದೇವಾಲಯನ್ನು ಚಿತ್ರಪಟ (ಚಿತ್ರಕಲೆ) ದಿಂದ ಅಲಂಕರಿಸಿದ ಬಗೆಗೆ ವಡ್ಡಾರಾಧನೆಯ ಸನತ್ಕುಮಾರನ ಕಥೆಯಲ್ಲಿ ಬರೆಸುವುದು, ಇವೆಲ್ಲ ಪ್ರಾಚೀನ ಈ ಕೃತಿಗಳಲ್ಲಿ ಕಾಣುತ್ತದೆ.

ಪಂಪನು ಸಹ ತನ್ನ ಕೃತಿಗಳಾದ 'ಆದಿಪುರಾಣ' ದಲ್ಲಿ ಮತ್ತು 'ವಿಕ್ರಮಾರ್ಜುನನ ವಿಜಯ' ದಲ್ಲಿ ಚಿತ್ರಕಲೆಯ ಬಗ್ಗೆ ಉಲ್ಲೇಖ ಮಾಡಿದ್ದಾನೆ. ಆದಿಪುರಾಣದಲ್ಲಿ ನೇರವಾಗಿ ಚಿತ್ರಪಟದ ಬಗ್ಗೆಯೇ ಪ್ರಸ್ತಾಪಿಸಿದ್ದಾನೆ. 'ಆದಿಪುರಾಣ' ದಲ್ಲಿ ಬರುವ ಶ್ರೀಮತಿ ವಜ್ರಜಂಘರ ಕತೆಯ ಸಂದರ್ಭವೇ ಅದು. ಶ್ರೀಮತಿಯು ತನ್ನ ಪೂರ್ವಜನ್ಮದ ಪತಿಯಾದ ಲಲಿತಾಂಗನಲ್ಲಿ ಅನುರಕ್ತಳಾಗಿ ಅವನ ನೆನಪಿನಲ್ಲಿಯೇ ವಜ್ರಜಂಘನ ಒಂದು ಚಿತ್ರಪಟನ್ನು ಬರೆದು ಇಟ್ಟುಕೊಂಡು ಅವನಿಗಾಗಿ ಚಿಂತಿಸುತ್ತಾಳೆ. ಇದನ್ನು ಗಮನಿಸಿದ ಅವಳ ದಾಸಿ ಆ ಪಟ್ಟಣದ ಜಿನಾಲಯ ದ್ವಾರ ಬಾಗಿಲಲ್ಲಿ ಆ ಚಿತ್ರಪಟನ್ನು ತೂಗುಹಾಕುತ್ತಾಳೆ. ಅಂತಹ ಅದ್ಭುತ ಚಿತ್ರವನ್ನು ನೋಡಲು ಜನರು ಸೇರುತ್ತಾರೆ. ಹಾಗೆ ಬಂದವರಲ್ಲಿ ವಜ್ರಜಂಘ ಆ ಚಿತ್ರಪಟದ ಮಾದರಿಯಲ್ಲಿಯೇ ಇರುತ್ತಾನೆ, ಇದನ್ನು ಪಂಪ ತುಂಬ ಮನೋಜ್ಞವಾಗಿ, ರಮ್ಯವಾಗಿಯೂ ಚಿತ್ರಿಸಿದ್ದಾನೆ.

ವಜ್ರಜಂಘನು ಆ ಚಿತ್ರವನ್ನು ಕುರಿತು ಚಿತ್ರಕಲೆಯ ಪರಿಭಾಷೆಯಲ್ಲಿಯೇ ಅಭಿವ್ಯಕ್ತಿಸಿದ್ದಾನೆ. 'ಇದು ಎಮ್ಮಯ ಪಟಂ, ಎಮ್ಮಯ ಕೂಸಿನ ಚಿತ್ರಂ' ಇದು ನನ್ನದೆ ಪಟ, ನಾನು ಚಿಕ್ಕ ಕೂಸಾಗಿದ್ದಾಗಿನ ಚಿತ್ರವೆಂದು ಹೇಳಿಕೊಳ್ಳುತ್ತಾನೆ.

ರಸಭಾವಂಗಳೊಳಾದ ಚೆಲ್ವು ನುಡಿದಂತಾದಳರಿಂ ನೋಡುವಂ
ತುನಿರ್ವಂರ್ತ್ದುದು ರೇಖೆ ಕೋಮಳತೆಯಂ ತಾಳ್ದತ್ತು ವಜಕ್ರಮಂ
ರಸವತ್ಕಂತಿಯನಾಂತು ನಿಂದುದೆಸೆವೀ ನಿಮ್ನೋನ್ನತಂಗಳ್ ವಿರಾ

ಜಿಸಿ ಚೆಲ್ವಿಂಗೆಡೆಗೊಂಡುವಿಂತು ಬರೆಯಲ್ ಬ್ರಹ್ಮಂಗಮೇಂ ಬರ್ತುಮೇ (ಆದಿಪುರಾಣ ೪.೪)

ಈ ಚಿತ್ರದಲ್ಲಿ ರಸಭಾವದಿಂದ ಉಂಟಾಗುವ ಸೌಂದರ್ಯವು ಪ್ರೀತಿಯಿಂದ ಅಭಿವ್ಯಕ್ತಿಗೊಂಡಂತಿದೆ. ಆ ಬಗೆಯಲ್ಲಿ ಈ ಚಿತ್ರವು ನನ್ನನ್ನೂ ನೋಡುತ್ತದೆ.

'ರೇಖೆ ಕೋಮಳತೆಯಂ ತಾಳ್ದಿತ್ತು' ಎನ್ನುವಾಗ ಆ ಚಿತ್ರದಲ್ಲಿ ಬಳಸಿರುವ ರೇಖೆ ಕೋಮಲವಾಗಿತ್ತು ಎಂದಿದ್ದಾನೆ. 'ವರ್ಣಕ್ರಮಂ ರಸವತ್ಕಾಂತಿಯನಾಂತು' ರೇಖೆ, ವರ್ಣಕ್ರಮ ಇವುಗಳನ್ನು ಹೇಳುತ್ತಾನೆ. ಚಿತ್ರದಲ್ಲಿ ಬಣ್ಣದ ಬಳಕೆಯ ಮಹತ್ವವಾಗಿರುವುದು ಇದರಿಂದ ಕಂಡುಬರುತ್ತದೆ. ಕವಿಯು ಶ್ರೀಮತಿ ವಜ್ರಜಂಘನ ಪ್ರಸಂಗದಿಂದ ಚಿತ್ರಕಲೆಯ ಬಗೆಗೆ ವಿವರಿಸುತ್ತಲೆ ಕಾವ್ಯವನ್ನೂ ಪೋಷಿಸಿರುವುದು ಕಾಣುತ್ತದೆ.

ಕವಿತೆಯ ೧ನೆಯ ಭಾಗದಲ್ಲಿ ಪೊನ್ನನ 'ಶಾಂತಿಪುರಾಣ' ದಿಂದ ಕವಿಚರಿತಕಾರರು ಒಂದು ಪದ್ಯವನ್ನು ಉಲ್ಲೇಖಿಸಿದ್ದಾರೆ, ಅದು ಹೀಗಿದೆ:

ನಯಮಳವಟ್ಟ ಪಚ್ಚೆ ಸಹಕಾರಕೊಳಿಂಗುಳಿಕಂ ತಳರ್ತ ಶೋ ।
ಕೆಯೊಳಂದಾಳ ಮುಳ್ಳಲರ್ದ ಸಂಪಗೆಯೊಳ್ ಕಡುಗರ್ಪು ಭೃಗಕೋ ।
ಟಿಯೊಳೆಸೆದಿದನ ನೀಲ ಗರಿಮಲ್ಲಗೆಯೊಳ್ ಸಮನಾಗೆ ಚೀರಘ ।
ಟ್ಟಿ ಯೆ ಬರೆದಿಟ್ಟ ಚಿತ್ರದ ಬನಕ್ಕೆಣೆಯಾಯ್ತು ಬನಂ ವಿದೇಹದೋಳ್ ॥

ಇದರಲ್ಲಿ 'ಚೀರಘಟ್ಟಿ' ಯೆಂಬ ಚಿತ್ರಕಾರನ ಹೆಸರು ಬಂದಿದೆ. ಇಷ್ಟೆ ಅಲ್ಲದೆ, ಅಭಿನವ ಪಂಪನಾದ ನಾಗಚಂದ್ರನ 'ಮಲ್ಲಿನಾಥ ಪುರಾಣ' ರುದ್ರಭಟ್ಟನ 'ಜಗನ್ನಾಥ ವಿಜಯ'ದಲ್ಲಿಯೂ ಈ ಚೀರಘಟ್ಟಿಯ ಉಲ್ಲೇಖವಿದೆ. ಇದನ್ನು ಬೇಂದ್ರೆಯವರು 'ಚೀರಘಟ್ಟಿಯಾರು (ಒಂದು ಊಹೆ)' ಎಂಬ ವಿಮರ್ಶಾ ಲೇಖನವನ್ನು ಬರೆದರು.

ಚೀರಘಟ್ಟಿ ಐತಿಹಾಸಿಕವಾಗಿ ಕರ್ನಾಟಕ ಚಿತ್ರಕಲೆಯ ಪಿತಾಮಹನೆ ಎಂಬುದು ಇನ್ನೂ ಬೆಳಕಿಗೆ ಬಂದಿಲ್ಲ. ಜೈನಕೃತಿಗಳಲ್ಲಿ ಕಂಡುಬಂದತೆಯೇ ವೈದಿಕ ಕೃತಿಯಾದ ರುದ್ರಭಟ್ಟನ 'ಜಗನ್ನಾಥ ವಿಜಯ' ದಲ್ಲಿ ಚೀರಘಟ್ಟಿಯನ್ನು ಕುರಿತು ಉಲ್ಲೇಖವಿದೆ.

ಇನಿಸಂ ಪೋಲೆ ಸಮಸ್ತ ಜಾತಿಗಳ ರೂಪಂ ಚಿತ್ರಸರ್ ವಿಶ್ವಕ ।
ರ್ಮನ ಮಾಂಡರ್ವ್ಯನ ಚೀರಘಟ್ಟಿಯಳವಲ್ಲೆಂದಳ್ಕರಿಂ ಚಿನ್ನ ಪೂ ।
ವಿನ ಚೆಂಬೂನ್ನ ಮಯಾಖಲೇಖೆಗಳಿನಂತಾ ಚಿತ್ರ ನಿರ್ವಾಹ ರೇ ।
ಖೆ ನೆರಂಬೆತ್ತಿರೆ ನೋಡಿ ನೋಡಿ ತಲೆದೂಗಿತ್ತಂಗನಾಸಂಕುಲಂ ॥

ಇಲ್ಲಿ ವಿಶ್ವಕರ್ಮ ಮತ್ತು ಮಾಂಡವ್ಯರ ಜತೆಯಲ್ಲಿ ಚೀರಘಟ್ಟಿಯ ಹೆಸರನ್ನು ಕವಿ ಹೇಳುತ್ತಿದ್ದಾರೆ. ಜೈನ ಮತ್ತು ವೈದಿಕ ಎರಡು ಕಾವ್ಯ ಪರಂಪರೆಯಲ್ಲಿಯೂ ಈ ಚೀರಘಟ್ಟಿಯ ಹೆಸರು ಬಂದಿದೆ. ಜತೆಗೆ ಚಿತ್ರಕಲೆಯ ವಿವರಣೆಯೊಂದಿಗೆ ಕೂಡ ಬಂದಿದೆ.

ನಾಗಚಂದ್ರನ 'ಮಲ್ಲಿನಾಥಪುರಾಣ' ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಅದರಲ್ಲಿ ವೈಶ್ರವಣ ಮಹಾರಾಜನು ತನ್ನ ರಾಜಕಾರ್ಯ ಎಲ್ಲವೂ ಮುಗಿದ ಮೇಲೆ, ಸರಸ ಸಲ್ಲಾಪದಿಂದ ಇರುವಾಗ ಅಲ್ಲಿಗೆ ಒಬ್ಬ ಚಿತ್ರಕಾರ ಬರುವನು. ಆ ಚಿತ್ರಕಾರನ ಬೆರಳುಗಳು ಬಣ್ಣಗಳಿಂದ ಕೂಡಿದ್ದನ್ನು ಕವಿಯು ವರ್ಣಿಸಿದ್ದಾನೆ. ಅವನ ಜತೆಯಲ್ಲಿ ಚಿತ್ರಪಟಗಳನ್ನು ಹಿಡಿದ ಕನ್ಯೆಯು ಬರುವ ಪ್ರಸಂಗವು ಚಿತ್ರಕಲೆಯ ಚರ್ಚೆಯನ್ನು ಮಾಡುತ್ತದೆ. ಅಲ್ಲದೆ ನಾಗಚಂದ್ರನು ಸಹ ಚೀರಘಟ್ಟಿಯನ್ನು ನೆನೆಯುವುದು ಇದೇ ಸಮಯದಲ್ಲಿ.

'ಮೂರಂ ತೆರದ ಮೊದಲು ಬಣ್ಣಮು ಮನವನೋರೂಂದರೊಳ್ಳೆರೆಸುವ

ಪರಿಣಿತಿಯುಮುಂ, ಅನಿಲಕಂ, ಪತ್ರಿಕಂ, ಬಿಂದುಕಂ, ಧೂಮ್ರಾವರ್ತಕಂ

ಉದ್ವರ್ತನಂ, ಚಿತ್ರಪ್ರವರ್ತನಂ, ಎಂಬಾರುಂತರದ ಅಳ್ಕೆಯಮಂ,

ಚಿತ್ರ, ಚಿತ್ರಾರ್ಥ, ಚಿತ್ರಭಸವೆಂ ಮೂರುಂ ಪ್ರಕಾರಮುಂ

ರಸಚಿತ್ರ ಧೂಳೀ ಚಿತ್ರದೋಜೆಯಮುಂ

ಶ್ರುತಿವಿದ್ಯಾ, ಆತ್ಮ ವಿದ್ಯಾ, ಪರವಿದ್ಧವೆಂ ವಿದ್ಧಪದ್ಧತಿಯುಮುಂ

ಲಕ್ಷಾರಸ, ರೇಖಾ ಶುದ್ಧಿಯಮುಂ

ಮೃದು ರೇಕಾ ವಿಳಾಸಮಮುಂ

ಪರಿಭಾವಿಸಿ ನೋಡಿ, ವಜ್ರಕುಂಡಳದ ಕಾಂತಿ ತಳತಳಿಸೆ ತಲೆಯಂತೂಗಿ

ಇದು ಚೀರಘಟ್ಟಿಯ ಮಾನಭಂಗವಂ ಪುಟ್ಟಿಸಿದುದು'

ಈ ಪದ್ಯದಲ್ಲಿ ಬಣ್ಣಗಳನ್ನು ಬಳಸುವ ವಿಧಿವಿಧಾನಗಳನ್ನು ಹೇಳಿದ್ದಾನೆ. ಆರು ಬಗೆಯ ಲೇಪನ ವಿಧಗಳಿವೆ, ಅವುಗಳೆಂದರೆ ಅನಿಲಕ, ಪತ್ರಕ, ಬಿಂದುಕ, ಧೂಮ್ರಾವರ್ತಕ, ಉದ್ವರ್ತನ, ಚಿತ್ರಪ್ರವರ್ತನ, ಚಿತ್ರ, ಚಿತ್ರರ್ಧಾ, ಚಿತ್ರಾಭಾಸ ಎಂಬ ಪ್ರಕಾರ, ಶೃತಿವಿದ್ಧ, ಆತ್ಮವಿದ್ಧ, ಮತ್ತು ಪರವಿದ್ಧ ಎಂಬ ಮೂರು ವಿದ್ಧ ಪದ್ಧತಿಗಳನ್ನು ಹೇಳಲಾಗಿದೆ. ಲಕ್ಷಾರಸ, ರೇಖಾಶುದ್ಧಿ, ಮೃದುರೇಖಾ ವಿಳಾಸ, ರಸಧೂಳಿ ಚಿತ್ರದ ವರ್ಣಶೋಭೆಯನ್ನು ಹೇಳಲಾಗಿದೆ. ಈ ಅಂಶಗಳು ಚಿತ್ರದಲ್ಲಿಂದ ಹೋದರೆ ಈ ಚಿತ್ರವು ಚೀರಘಟ್ಟಿಗೆ ತಲೆತಗ್ಗಿಸುವಂತೆ ಮಾಡುತ್ತದೆ ಎಂಬ ವಿಷಾದವೂ ಬಂದಿದೆ. ಪ್ರಾಚೀನ ಕಾಲದ ಕವಿಗಳು ಹೀಗೆ ಚಿತ್ರಕಲೆಯ ಬಗೆಗೆ ತಾಳಿದ ನಿಲುವುಗಳು ವಿಭಿನ್ನವಾಗಿವೆ. ಅಲ್ಲದೆ ಚೀರಘಟ್ಟಿಯು ಚಿತ್ರಕಲೆಯಲ್ಲಿ ಪುರಾತನ ಆಗಿರಬಹುದು ಎಂಬ ನಿರ್ಣಯಕ್ಕೆ ಬರಬಹುದಾಗಿದೆ. ಇಲ್ಲಿ ವೈಶ್ರವಣ ಮಹಾರಾಜನ ಮೂಲಕ ನಾಗಚಂದ್ರನು ಚಿತ್ರಕಲೆಯ ವಿಮರ್ಶೆಯನ್ನು ಮಾಡಿದ್ದಾನೆ.

'ಗಿಳಿ ಋಜ್ವಾಗತದಿಂ, ಅರ್ಧಋಜುವಿಂದಂ ಕೋಕಿಳಂ

ಸಾಚಿಯಂ ಕಳಹಾನೀಕಳಭಂ, ಶಥಾಂಗ ಮಿಥುನಂ ಧ್ವ್ಯರ್ಧಾಕ್ಷಿಯಿಂ

ಬರ್ಹಿ ಮಂಡಳಿ ಪಾರ್ಶ್ವಾಗತದಿಂ – ಏಂ ಪಡೆದುವೋ ಪಂಚಾಂಡಕವ್ಯಕ್ತಿ

ಕಣ್ಣೊಳೆ ಕಂದರ್ಪನ ಬಾಣಪಂಚಕದವೂಲ್ ಚಿತ್ರಕೃತಿ ಕ್ಷೋಭಮಂ'

ಈ ಪದ್ಯದ ಸಾಲುಗಳನ್ನು ಬಿ. ವಿ. ಶಾಸ್ತ್ರೀಯವರು ಆಧುನಿಕ ಚಿತ್ರಕಲೆಯೊಂದಿಗೆ ಸಮೀಕರಿಸಿದ್ದಾರೆ. ಚಿತ್ರ ಒಂದು ಲ್ಯಾಂಡ್‌ಸ್ಕೇಪ್ ಎನ್ನಬಹುದು, ಇದರಲ್ಲಿ ಬರುವ ಪಾರಿಭಾಷಿಕ

ಶಬ್ದಗಳಲ್ಲಿ 'ಗಿಳಿ ಋಜ್ವಾಗತದಲ್ಲಿ' ಅಂದರೆ ನೇರವಾಗಿ Frontal Position, ಕೋಗಿಲೆ 'ಅರ್ಧ ಋಜುವಿನಲ್ಲಿ' ಅಂದರೆ ಸ್ವಲ್ಪ ತಿರುಗುವುದು, ಹಂಸಸಾಚಿಯಿಂ ¾ Position ಎನ್ನಬಹುದು. ಹೀಗೆಯೇ 'ದ್ವೈರ್ಧಾಕ್ಷಿಯಲ್ಲಿ' ಇನ್ನೂ ತಿರುಗಿ 'ಪಾಶ್ವಗತ' side ಅಥವಾ profile position ಬರುತ್ತವೆ. ಇನ್ನು ಅಣ್ಕೆ ಎಂದರೆ ಲೇಪನ ವಿಧಾನದಲ್ಲಿ 'ಅನಿಲಕ' ಎಂದರೆ Stumpin ಬರುತ್ತವೆ. ಪತ್ರಕ–Crosslines, ಬಿಂದುಕಂ–Stipping Dot ವಿಧಾನಗಳು ಚಿತ್ರ–ಚಿತ್ರಾರ್ಥ–ಚಿತ್ರಭಾಸ (Like Sculpture), ವಿದ್ಧಪದ್ಧತಿ–ವಿದ್ಧ (Portrait) ಅವಿದ್ಧ (General Study)... ಎಂದು ಹೀಗೆ ಶಾಸ್ತ್ರೀಯವರು ಗುರುತಿಸಿದ್ದಾರೆ.[೧೪] ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಚಿತ್ರಕಲೆಯ ವಿದ್ಯೆಗಳು, ವಿಧಾನಗಳು, ಶೈಲಿಯ ಬಗ್ಗೆ ಒಂದು ಚರ್ಚೆಯನ್ನು ನಡೆಸಿರುವುದು ಗಮನಾರ್ಹ ಸಂಗತಿ. ಸಾಂಸ್ಕೃತಿಕ ಲೋಕವೊಂದು ಅನಾವರಣಗೊಳ್ಳುವಲ್ಲಿ ಚಿತ್ರಕಲೆಯು ಸಹ ಮಹತ್ವವುಳ್ಳದ್ದಾಗಿರುತ್ತದೆ. ಅದನ್ನು ನಾಗಚಂದ್ರನು ತನ್ನ ಕಾವ್ಯದ ಮೂಲಕ ಅಭಿವ್ಯಕ್ತಗೊಳಿಸಿದ್ದಾನೆ. ಈ ಅಭಿವ್ಯಕ್ತಿಯ ಕ್ರಮವನ್ನು ಅಧ್ಯಯನಕ್ಕೊಳಪಡಿಸಿದಾಗ ವಿಭಿನ್ನವಾದ ವಿನ್ಯಾಸಗಳೊಂದಿಗೆ ಕರ್ನಾಟಕದಲ್ಲಿ ಚಿತ್ರಕಲೆಯು ಇತ್ತೆಂಬುದು ಗೊತ್ತಾಗುತ್ತದೆ. ಹಿಂದೆ ರಚಿತವಾದ ಚಿತ್ರ ಅಥವಾ ಶಿಲ್ಪಗಳು ಕುರುಡಾಗಿ ರಚಿತವಾದುದಲ್ಲ. ನಿಯತಸೂತ್ರ, ವಿಧಾನ ಹಾಗೂ ಸಂಪ್ರದಾಯಬದ್ಧವಾಗಿದ್ದವು. ಕರ್ನಾಟಕದಲ್ಲಿ, ಚಿತ್ರಕಲೆ ಸಮೃದ್ಧವಾಗಿ ಬೆಳೆದಿತ್ತು. ಕವಿಗಳಲ್ಲಿ ಅನೇಕರು ಕೇವಲ ಕಲಾಭಿಮಾನಿಗಳೇ ಅಲ್ಲದೆ, ಕಲೆಗಳಲ್ಲಿಯೂ ನಿಷ್ಠಾವಂತರಾಗಿದ್ದರು ಎಂಬುದನ್ನು ಗಮನಿಸಬಹುದು. ಅಲ್ಲದೆ ಕವಿಗಳು ಉತ್ತಮ ಚಿತ್ರಕಲಾ ವಿಮರ್ಶಕರೂ ಆಗಿದ್ದರು. ಐತಿಹಾಸಿಕ ಕಲಾವಿದ ಚೀರಘಟ್ಟಿಯೆಂಬುವವನು ಇದ್ದನು ಎಂಬುದು ೧೦ನೆ ಶತಮಾನದಿಂದ ೧೨ನೆ ಶತಮಾನದ ಕೃತಿಗಳಲ್ಲಿ ಕಂಡು ಬರುತ್ತದೆ. ಆದರೆ ಇದೊಂದು ಊಹೆಯೂ ಇರಬಹುದು. ಆದರೆ ಇಂತಹದ್ದೊಂದು ಸತ್ಯಾಂಶದ ಬಗ್ಗೆ ಅಧಿಕೃತ ಮಾಹಿತಿ ಇನ್ನೂ ದೊರೆತಿಲ್ಲ.

ಕಲ್ಯಾಣ ಚಾಲುಕ್ಯರಲ್ಲಿ ಕಂಡು ಬರುವ ಮೂರನೇ ಸೋಮೇಶ್ವರನ 'ಮಾನಸೋಲ್ಲಾಸ' (ಅಭಿಲಾಷಿತಾರ್ಥ ಚಿಂತಾಮಣಿ) ಎಂಬ ಕೃತಿಯು ಚಿತ್ರಕಲೆಯ ವಿವಿಧ ಪ್ರಕಾರಗಳ ಬಳಕೆಯನ್ನು ತಿಳಿಸುತ್ತದೆ. ಇದು ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದೆ. ಇದರಲ್ಲಿ ಒಂದು ಅಧ್ಯಾಯವು ಚಿತ್ರಕಲೆಗೆ ಮೀಸಲಾಗಿದೆ. ಚಿತ್ರಕಲೆಯ ಸೂತ್ರಗಳನ್ನು ಅದರಲ್ಲಿ ಹೇಳಿದೆ, ಭಾವಚಿತ್ರ, ರಸಚಿತ್ರ, ದೈವಚಿತ್ರಕಲೆ ಪ್ರಭೇದಗಳನ್ನು ಅದರಲ್ಲಿ ಹೇಳಲಾಗಿದೆ. ಮೂರನೆಯ ಸೊಮೇಶ್ವರನ ಕಾಲ ಕ್ರಿ ಶ ೧೧೨೭–೧೧೩೮ ಆಗಿದೆ. ಈ ಕೃತಿಯು ಅವನ ಗಣ್ಯಸಾಧನೆಯಾಗಿದೆ. ಈ ಕೃತಿಯಲ್ಲಿ ರಾಜನೀತಿ, ಯುದ್ಧಕಲೆ, ಚಿತ್ರಕಲೆ, ಸಂಗೀತ, ನೃತ್ಯ, ನಾಟಕ, ವೈದ್ಯಶಾಸ್ತ್ರ, ನ್ಯಾಯಶಾಸ್ತ್ರ ಇತ್ಯಾದಿ ವಿಷಯಗಳ ಅಧ್ಯಾಯಗಳಿವೆ.

ಈ ಕೃತಿಯು ವಿಷ್ಣುಧರ್ಮೋತ್ತರದ ನಂತರ ಚಿತ್ರಕಲೆಯ ಬಗ್ಗೆ ಶಾಸ್ತ್ರೀಯವಾಗಿ ಧ್ವನಿಯೆತ್ತಿದೆ. ಮಾನವೋಲ್ಲಾಸದ ಉಪಭೋಗಗಳಿಗೆ ಸಂಬಂಧಿಸಿದ ಮೂರನೆಯ ಪ್ರಕರಣದಲ್ಲಿ ಮೊದಲನೆಯದು ಗೃಹೋಪಯೋಗಕ್ಕೆ ಸಂಬಂಧಿಸಿದುದು, ಅದರಲ್ಲಿ ಚಿತ್ರರಚನೆಗೆ ಸಂಬಂಧಿಸಿದಂತೆ ವಿಸ್ತಾರವಾದ ವಿವರಗಳು ದೊರಕುತ್ತವೆ. ಈ ಕೃತಿಯು ಚಿತ್ರಕ್ಕೆ ಗೋಡೆ ಅಥವಾ ಕ್ಷೇತ್ರವನ್ನು ಸಿದ್ಧಗೊಳಿಸುವ ಕ್ರಮ. ಚಿತ್ರರಚನೆಗೆ ಅವಶ್ಯಕವಾದ ಲೇಖನಿ ಅಥವಾ ಕುಂಚಗಳು, ವರ್ಣಗಳು, ಅವುಗಳನ್ನು ಸಿದ್ಧಗೊಳಿಸುವ ಕ್ರಮ, ಚಿತ್ರಗಳನ್ನು ರಚಿಸುವುದು, ಅವುಗಳ ಆಕಾರದ ಮಾನ ಮತ್ತು ಪ್ರಮಾಣಗಳು ವಿವಿಧ ಅಂಗಗಳನ್ನು ಚಿತ್ರಿಸುವ ಕ್ರಮ, ಮುಂತಾದವುಗಳ ಬಗ್ಗೆ ತಿಳಿಸಿದೆ. ಲೇಪದ್ರವ್ಯ ತಯಾರಿಸುವುದು, ಬಣ್ಣಗಳಿಗೆಲ್ಲಾ ಮೂಲದ್ರವವಿದು. ಇದನ್ನು ವಿವಿಧ ಬಣ್ಣಗಳೊಂದಿಗೆ ಬೆರೆಸಿ ಬಳಸುವ ಪದ್ಧತಿಯನ್ನು ಹೇಳಲಾಗಿದೆ. ರಚಿಸುವ ವಿಧಾನ, ಕುಂಚದಿಂದ ಬಣ್ಣ ಬಳಸುವ ವಿಧಾನ, ಕುಂಚವನ್ನು ಎಳೆಯ ಕರುವಿನ ಕಿವಿಯಿಂದ ಸೂಕ್ಷ್ಮವಾದ ಕೂದಲನ್ನು ಕಿತ್ತು ತಯಾರಿಸಿಕೊಳ್ಳುವುದರ ಮಾಹಿತಿಯಿದೆ. ವರ್ಣ ಸಂಯೋಜನೆ ಚಿತ್ರಕಲೆಯಲ್ಲಿ ಬಹಳ ಮುಖ್ಯವಾದುದು ಆಕೃತಿಗಳಾದ ಸ್ಥಾನಕ, ಬಾಜು, ಅರ್ಧಮಾಜು, ಪಾಚಿ, ಧ್ವರ್ಧಾಕ್ಷರಿ, ಪಾರ್ಶ್ವಾಗತ ಮುಂತಾದವನ್ನು ಹೇಳಲಾಗಿದೆ. ಬಿ.ವಿ.ಕೆ.ಶಾಸ್ತ್ರೀಯವರು ಮಾನಸೋಲ್ಲಾಸದಲ್ಲಿರುವ ಚಿತ್ರಕಲೆಯ ವಿವರಣೆಯನ್ನು ಒಟ್ಟು ಪರಿಶೀಲಿಸಿದಲ್ಲಿ ಅಂದು ಭಿತ್ತಿಚಿತ್ರಗಳಿಗೆ (ಫ್ರೆಸ್ಕೋ) ಹೆಚ್ಚು ಪ್ರಾಶಸ್ತ್ಯವಿದ್ದಿತೆನ್ನಬಹುದು. ಭಿತ್ತಿಚಿತ್ರಗಳನ್ನು ನಿರ್ಮಿಸುವ ಕ್ರಮ, ಅದಕ್ಕೆ ಅವಶ್ಯಕವಾದ ವರ್ಣವಿಧಾನ ಮುಂತಾದವೆಲ್ಲಾ ಅದಕ್ಕೂ ನೂರಾರು ವರ್ಷಗಳಿಂದಲೂ ನಡೆದ ನಾನಾ ಪ್ರಯೋಗಗಳಿಂದ ಪಕ್ವವಾಗಿರಬೇಕು. ಸೋಮೇಶ್ವರನಿಗೆ ಐದು ಶತಮಾನಗಳ ಹಿಂದೆಯೇ ಮಂಗಳೇಶನು ಬಾದಾಮಿಯ ಗುಹೆಗಳಲ್ಲಿ ಈ ರೀತಿ ಭಿತ್ತಿಗಳನ್ನು ಹಸನುಮಾಡಿಸಿ ಚಿತ್ರಗಳನ್ನು ಬರೆಯಿಸಿದ್ದನು. ಸೋಮೇಶ್ವರನ ಕಾಲಕ್ಕೆ ಚಿತ್ರಕಲೆಯ ತತ್ವ, ವಿಧಾನ ಮುಂತಾದವೆಲ್ಲಾ ಈ ನೂರಾರು ವರುಷಗಳ ಅನುಭವದಿಂದ ಪಕ್ವಗೊಂಡಿದ್ದಿತು. ಅಭಿಲಷಿತಾರ್ಥ ಚಿಂತಾಮಣಿಯಲ್ಲಿರುವ ಚಿತ್ರಕಲೆಯ ವಿವರಣೆ ಕೇವಲ ಹಿಂದಿನ ಗ್ರಂಥಗಳ ಪುನರುದ್ಧಾರವಲ್ಲ. ಅನುಭವದಿಂದ ಎಷ್ಟೋ ವಿವರಗಳು ಅಂದರೆ ಬೆಳಕು–ಛಾಯೆಯ ವಿನ್ಯಾಸ ಮುಂತಾದವು ಇಂದು ನಮ್ಮಲ್ಲಿ ಬಳಕೆಯಲ್ಲಿವೆ”[೧೫]

ಬಿಳಿ ಮತ್ತು ಕೆಂಪು ವರ್ಣಗಳನ್ನು ಪ್ರಾಚೀನದ ಗವಿಚಿತ್ರಗಳಲ್ಲಿ ಕಾಣಬಹುದು, ಅಲ್ಲದೆ ಛಾಯಾ ವಿಧಾನವನ್ನು ಅನುಸರಿಸಿದ ಗವಿಚಿತ್ರಗಳನ್ನು ಕಾಣಲು ಸಾಧ್ಯವಿದೆ. ಚಿತ್ರಕಲೆಯು ಪ್ರಾಗೈತಿಹಾಸಿಕ ಕಾಲದಿಂದಲೂ ಗವಿ, ಆಚರಣೆ, ಸಾಹಿತ್ಯದಲ್ಲಿ ತನ್ನ ಇರುವಿಕೆಯನ್ನು ತೋರಿಸುತ್ತಲೇ ಬಂದಿದೆ. ಆದಿಮಾನವನಿಂದ ಶುರುವಾದ ಚಿತ್ರಕಲೆಯು ಆಧುನಿಕ ಕಾಲ ಘಟ್ಟದವರೆಗೂ ಅನೇಕ ಸ್ಥಿತ್ಯಂತರಗಳ ಜತೆಗೆ ತನ್ನ ಪರಂಪರೆಯನ್ನು ಉಳಿಸಿಕೊಂಡು ಬಂದಿದೆ. ಕೆಲವು ಹಬ್ಬ ಹರಿದಿನಗಳಲ್ಲೂ ಚಿತ್ರಕಲೆಯ ಮಹತ್ವವಿರುವುದು ಜನಪದರಲ್ಲಿಯೂ ಕಾಣುತ್ತೇವೆ.

ದಕ್ಷಿಣ ಭಾರತದ ಕಲಾ ಪರಂಪರೆಯಲ್ಲಿ ನೂತನವಾದ ಅಧ್ಯಾಯ ಬರೆದವರೆಂದರೆ ಪಲ್ಲವರು. ಅವರ ಕಲೆಯೇ ಮುಂದೆ ದಕ್ಷಿಣ ಭಾರತೀಯ ರಾಜರುಗಳಿಗೆ ಮಾದರಿಯಾಯಿತು. ಅವರ ಕಾಲದ ಚಿತ್ರಕಲೆಯು ಸಿತ್ತನ್‌ವಾಸೆಲ್ ಮತ್ತು ತರುಮಲೈಪುರ ಗುಹೆಗಳಲ್ಲಿ ಕಾಣಬಹುದು. ಸಿತ್ತನ್‌ವಾಸೆಲ್ ಜೈನ ಗುಹೆಯಲ್ಲಿ ನೃತ್ಯ ಮಾಡುತ್ತಿರುವ ಅಪ್ಸರೆಯರು, ಶಿವ-ಪಾರ್ವತಿ, ಯಕ್ಷ, ಗಂಧರ್ವ, ವೃಷಭ, ಮೊಸಳೆ, ಪಕ್ಷಿಗಳ ಚಿತ್ರಗಳಿವೆ. ಇಲ್ಲಿ ನರಸಿಂಹವರ್ಮನ ರಾಣಿಯ ಚಿತ್ರಗಳಿವೆ. ತಿರುಮಲೈಪುರ ಗುಹೆಯಲ್ಲಿ ಅಪ್ಸರೆಯರು, ಕಮಲ, ಬಾತುಕೋಳಿ ಚಿತ್ರಗಳಿವೆ. ಕಲೆಯು ಆಗ್ನೇಯ ಏಷ್ಯಾದ ರಾಷ್ಟ್ರಗಳಿಗೂ ಪ್ರಭಾವಿಸಿತ್ತು. ಪರ್ಸಿಜ್ರಾನ್ ದಕ್ಷಿಣ ಭಾರತದ ಯುವ ಶ್ರೇಷ್ಠ ರಾಜ ಸಂತತಿಯು ಸರಿಗಟ್ಟದ ಶಿಲ್ಪಕಲೆ ಸೃಷ್ಟಿಸಿದ ರೀತಿ ಪಲ್ಲವರಿಗೆ ಸಲ್ಲುತ್ತದೆ ಎಂದು ಹೇಳುತ್ತಾರೆ.

ಬಾದಾಮಿ ಚಾಲುಕ್ಯರು ಕ್ರಿ ಶ ೫೫೦-೭೫೦ರ ವರೆಗೆ ಇವರು ಆಳ್ವಿಕೆ ಮಾಡಿದರು. ಇವರ ಆಳ್ವಿಕೆಯ ಸಂದರ್ಭದಲ್ಲಿ ಲಲಿತಕಲೆಗಳಾದ ಚಿತ್ರಕಲೆ, ನೃತ್ಯ ಮತ್ತು ಸಂಗೀತ ಕ್ಷೇತ್ರಗಳಲ್ಲಿ ವಿಶೇಷ ಪ್ರೋತ್ಸಾಹ ನೀಡಿದರು. ಬಾದಾಮಿಯ ಮೊದಲೆರಡು ಗುಹೆಗಳಲ್ಲಿ ಚಿತ್ರಕಲೆಯನ್ನು ಕಾಣುತ್ತೇವೆ. ರಾಜರಾಣಿಯರ ಆಗಮನ, ಇಂದ್ರಸಭಾ, ರಾಜಾಸ್ಥಾನ, ನೃತ್ಯ, ಗಿರಿಜಾಕಲ್ಯಾಣ ಮೊದಲಾದ ಚಿತ್ರಗಳಿವೆ. ಅವು ಪ್ರಸ್ತುತ ಸಂದರ್ಭದಲ್ಲಿ ಮಾಸಿ ಹೋಗಿವೆ. ಅಜಂತಾ ಗುಹೆಗಳಲ್ಲಿ ಚಾಲುಕ್ಯರ ಕಾಲದ ಬುದ್ಧ ಪ್ರೇರಣೆ, ಅವಲೋಕಿತೇಶ್ವರ, ಇಮ್ಮಡಿ ಪುಲಕೇಶಿ, ಪರ್ಶಿಯಾ ರಾಯಭಾರಿಯನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಳ್ಳುವ ಚಿತ್ರಗಳಿವೆ.

ಬಾದಾಮಿಯ ಎರಡು ಮತ್ತು ಮೂರನೇಯ ಗುಹಾಂತರ ದೇವಾಲಯಗಳಲ್ಲಿಯೂ ಭಿತ್ತಿ ಚಿತ್ರಗಳಿವೆ. ಇಲ್ಲಿ ಅಜಂತಾ ಮತ್ತು ಬಾಗ್‌ಗಳಲ್ಲಿನ ತಂತ್ರಜ್ಞಾನವನ್ನು ಬಳಸಿಕೊಂಡು ಚಿತ್ರಗಳನ್ನು ರಚಿಸಿರುವುದು ಕಂಡುಬರುತ್ತದೆ. ಇಲ್ಲಿ ಪ್ರಮುಖವಾಗಿ ವೈಷ್ಣವ ದೇವಾಲಯಗಳೇ ಹೆಚ್ಚು ಆದರೂ ಶೈವಧರ್ಮಕ್ಕೆ ಸಂಬಂಧಿಸಿದ ಚಿತ್ರಗಳನ್ನೂ ಚಿತ್ರಿಸಲಾಗಿದೆ. ಕಾಲ ಮತ್ತು ವಾತಾವರಣದಿಂದಾಗಿ ಬಹುತೇಕ ಚಿತ್ರಗಳು ನಾಶವಾಗಿವೆ. ಶಿವ-ಪಾರ್ವತಿಯರ ಚಿತ್ರಗಳು ಹೆಚ್ಚು ಸ್ಪಷ್ಟವಾಗಿ ಕಾಣುತ್ತವೆ.

**ಕೊನೆ ಟಿಪ್ಪಣಿ**

೧. ಅ. ಸುಂದರ, 'ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ,' ಪು. ೧

೨. ಶಿವರಾಮಕಾರಂತ ಕೆ., 'ಕಲಾ ಪ್ರಪಂಚ,' ಪು. ೧೦೩

೩. ರಂಗಾರೆಡ್ಡಿ ಕೋಡಿರಾಂಪುರ (ಲೇ), 'ಜಾನಪದ ಮತ್ತು ಕಲೆಗಳು,' ಬಸವರಾಜನೆಲ್ಲಿಸರ ಮತ್ತು ಎಚ್. ಜೆ. ಲಕ್ಕಪ್ಪಗೌಡ (ಸಂ) 'ಜಾನಪದ ಮತ್ತು ಪೂರಕ ಕ್ಷೇತ್ರಗಳು.' ಪು. ೨

೪. ಶ್ರೀಶೈಲ ಆರಾಧ್ಯ(ಲೇ), 'ಚಿತ್ರದುರ್ಗ ಪರಿಸರದ ಪ್ರಾಗೈತಿಹಾಸಿಕ ಚಿತ್ರಗಳು', ಪಿ. ಆರ್, ತಿಪ್ಪೆಸ್ವಾಮಿ ಮತ್ತು ಇತರರು(ಸಂ), 'ಚಿತ್ರಕಲಾ ಪ್ರಪಂಚ,' ಪು. ೩೮

೫. ಪಿ. ಆರ್. ತಿಪ್ಪೆಸ್ವಾಮಿ ಮತ್ತು ಇತರರು, 'ಚಿತ್ರಕಲಾ ಪ್ರಪಂಚ,' ಪು. ೧೨

೬. ಎಂ.ಎಚ್.ಕೃಷ್ಣಯ್ಯ, 'ಸಾಹಿತ್ಯ ಕಲೆ', ಅಂಕಿತ ಪುಸ್ತಕ, ಬೆಂಗಳೂರು, ೨೦೧೫

೭. ಅದೇ,

೮. ಶರಣಬಸಪ್ಪ ಕೋಲ್ಕಾರ, 'ಶಿಲಾಯುಗದ ಗವಿಚಿತ್ರಗಳು,' ಪು. ೧೪೫

೯. ಕನ್ನಡ ಜಾನಪದ 'ವಿಶ್ವಕೋಶ ಸಂ.೧,' ಪು. ೭೩೪ ಹಾಗೂ ಅಗ್ರಹಾರ ಕೃಷ್ಣಮೂರ್ತಿ, ಬೆಳದಿಂಗಳಪ್ಪನ ಪೂಜೆ, ಪು. ೧೮

೧೦. ಫಕ್ಕಿರವ್ವ, ೭೫ ವಯಸ್ಸು, ತಾ. ೮-೬-೨೦೧೪, ಕಲಘಟಗಿ, ದ್ಯಾವನಕಿಂಡ ಗ್ರಾಮ.

೧೧. ಎಂ.ವಿ. ಸೀತಾರಾಮಯ್ಯ(ಸಂ), 'ಕವಿರಾಜಮಾರ್ಗ,' ಪು ३೯೮

೧೨. ಡಿ. ಎಲ್. ನರಸಿಂಹಾಚಾರ್. 'ವಡ್ಡಾರಾಧನೆ,' ಪು. ೫೮

೧೩. ಅದೇ, ೧೦೩

೧೪. ಬಿ. ವಿ. ಕೆ. ಶಾಸ್ತ್ರೀ (ಲೇ), 'ಕನ್ನಡ ಸಾಹಿತ್ಯದಲ್ಲಿ ದೃಶ್ಯಕಲೆ,' ಪಿ. ಆರ್. ತಿಪ್ಪೆಸ್ವಾಮಿ ಮತ್ತು ಇತರರು (ಸಂ) 'ಚಿತ್ರಕಲಾ ಪ್ರಪಂಚ.' ಪು. ೧೪೨

೧೫. ಅದೇ, ಪು. ೧೮೭

## ಅಧ್ಯಾಯ ನಾಲ್ಕು

## ಬಿಲ್ ಬುಡಕಟ್ಟು ಜನಾಂಗ: ಸಮಾಜೋಸಾಂಸ್ಕೃತಿಕ ವಿಶ್ಲೇಷಣೆ

೪.೧ ಬಿಲ್‌ರ ಐತಿಹಾಸಿಕ ಮತ್ತು ಪೌರಾಣಿಕ ಹಿನ್ನೆಲೆ

೪.೨ ಬಿಲ್‌ರ ಭಾಷೆ

೪.೩ ಕುಟುಂಬ

೪.೪ ಆಹಾರ ಪದ್ಧತಿ ಮತ್ತು ಮದ್ಯ (ಸಾರಾಯಿ)

೪.೫ ಉಡುಪು ಮತ್ತು ಆಭರಣಗಳ ಬಳಕೆ

೪.೬ ಶಸ್ತ್ರಾಸ್ತ್ರಗಳು

೪.೭ ನೃತ್ಯ ಮತ್ತು ಸಂಗೀತ

೪.೮ ಹಬ್ಬಗಳು ಉತ್ಸವಗಳು

೪.೯ ಜಾತ್ರೆಗಳು

## ಅಧ್ಯಾಯ ೪

# ಬಿಲ್ ಬುಡಕಟ್ಟು ಜನಾಂಗ: ಸಮಾಜೋಸಾಂಸ್ಕೃತಿಕ ವಿಶ್ಲೇಷಣೆ

ಭಾರತದಲ್ಲಿ ಬಿಲ್‌ರನ್ನು ಇತರ ಬುಡಕಟ್ಟುಗಳಿಗೆ ಹೋಲಿಸಿ ನೋಡಿದಾಗ ಇದೊಂದು ಬಹುದೊಡ್ಡ ಬುಡಕಟ್ಟು ಸಮುದಾಯವೆಂದು ತಿಳಿದು ಬರುತ್ತದೆ. ಅಲ್ಲದೆ ಇದೊಂದು ಅತ್ಯಂತ ಪ್ರಾಚೀನವಾದ ಬುಡಕಟ್ಟಾಗಿದೆ. ಬಿಲ್‌ರು ಪ್ರಕೃತಿಯ ಜೊತೆಗೆ ಸಂಬಂಧವನ್ನಿಟ್ಟುಕೊಂಡವರು, ಪ್ರಕೃತಿಯ ಜೊತೆಗೆ ಪ್ರೀತಿ, ವಿಶ್ವಾಸ ಹಾಗೂ ಗಾಢವಾದ ನಂಬಿಕೆಯನ್ನಿಟ್ಟುಕೊಂಡಿದ್ದ ಸಮುದಾಯವಾಗಿದೆ. ಇವರು ಬಿಲ್ಲು ಮತ್ತು ಬಾಣಗಳ ಸಾಂಗತ್ಯದಿಂದಾಗಿ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳುತ್ತಾರೆ. ಈ ಸಮುದಾಯವು ಮಧ್ಯಭಾರತದ ರಾಜ್ಯಗಳಲ್ಲಿ ಮುಖ್ಯವಾಗಿ ಕಂಡುಬರುತ್ತದೆ. ಆ ರಾಜ್ಯಗಳು ಯಾವುವೆಂದರೆ; ಗುಜರಾತ, ಮಧ್ಯಪ್ರದೇಶ, ಛತ್ತೀಸಗಡ, ಮಹಾರಾಷ್ಟ್ರ ಮತ್ತು ರಾಜಸ್ತಾನ.

ಮಧ್ಯಪ್ರದೇಶದ ಪಶ್ಚಿಮಕ್ಕೆ ಇರುವ ಜಾಬುವಾವೊಂದು ಆದಿವಾಸಿ ಬುಡಕಟ್ಟು ಪ್ರದೇಶವಾಗಿದೆ. ಜಾಬುವಾವು ರಾಜಸ್ಥಾನ ಮತ್ತು ಗುಜರಾತದ ಸರಹದ್ದಿನ ನಡುವೆ ಇದೆ. ಜಾಬುವಾಕ್ಕೆ ಹೊಂದಿಕೊಂಡಿರುವಂತಹ ಧಾರ್, ಬಡವಾನಿ ಮತ್ತು ಪಶ್ಚಿಮ ನಿಮಾಡ ಜಿಲ್ಲೆಗಳಲ್ಲಿಯೂ ಬಿಲ್ ಜನಾಂಗ ವಾಸವಿದೆ. ಜಾಬುವಾದ ಭೌಗೋಳಿಕ ಪ್ರದೇಶದಲ್ಲಿ ಬಿಲ್ ಜನ ಸಮುದಾಯವೇ ವಾಸವಿದೆ. ಧಾರ ಮತ್ತು ಜಾಬುವಾ ಪ್ರದೇಶದಲ್ಲಿ ಶೇ.೮೫ ರಷ್ಟು ಜನಸಂಖ್ಯೆ ಬಿಲ್ ಅವರದ್ದೇ ಆಗಿದೆ. ಜಾಬುವಾ ಪ್ರದೇಶವು ರಾಜಸ್ಥಾನ, ಗುಜರಾತ ಮತ್ತು ಮಹಾರಾಷ್ಟ್ರದ ಸೀಮೆಗಳಿಗೆ ಹೊಂದಿಕೊಂಡಿದೆ. ಮತ್ತೊಂದು ಕಡೆಯಿಂದ ಧಾರ, ಬಡವಾನಿ ಮತ್ತು ಪಶ್ಚಿಮ ನಿಮಾಡ ಜಿಲ್ಲೆಗಳಲ್ಲಿ ಇದು ಅಂಟಿಕೊಂಡಿದೆ. ರತ್ಲಾಮ್, ಮಂದಸೌರ ಮತ್ತು ನೀಮಚ ಮಧ್ಯಪ್ರದೇಶದ ಭಾಗಗಳಾಗಿವೆ. ಈ ಜಿಲ್ಲೆಗಳಲ್ಲಿಯೂ ಬಿಲ್‌ರ ಸಂಸ್ಕೃತಿ ಕಂಡುಬರುತ್ತದೆ.

ಜಾಬುವಾ ಪ್ರದೇಶವು ಬಿಲ್‌ರ ಕೇಂದ್ರ ಸ್ಥಾನವಾಗಿದೆ. ನರ್ಮದಾ ನದಿಯ ಕೊಳ್ಳದ ಎರಡು ಬದಿಯಲ್ಲಿ ಬಿಲ್ ಜನಸಮುದಾಯವು ವಾಸಿಸುತ್ತದೆ. ಅರಣ್ಯದಲ್ಲೇ ವಾಸಿಸುವ ಈ ಜನಾಂಗವು ತಾವು ಪ್ರಸ್ತುತ ವಾಸವಿರುವ ಪ್ರದೇಶದ ಅರಣ್ಯವನ್ನು ನಾಶಪಡಿಸಿಕೊಂಡಿದೆ.

ಸಾವಿರಾರು ವರ್ಷಗಳ ಹಿಂದಿನಿಂದಲೂ ಅಲ್ಲಿಯ ವನಸಂಪತ್ತನ್ನು ನಾಶಮಾಡಿದ್ದಾರೆ. ಅದರ ಫಲವೇ ಬಿಲ್‌ರು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ದಿನದಿಂದ ದಿನಕ್ಕೆ ನಶಿಸಲ್ಪಟ್ಟಿದ್ದಾರೆ. ಆದರೆ ಇದನ್ನು ನಾಶವೆನ್ನುವುದಕ್ಕಿಂತ ಸ್ಥಿತ್ಯಂತರವೆನ್ನಬಹುದು. ಜಾಬುವಾದಂತಹ ಪ್ರದೇಶದ ಭೌಗೋಳಿಕ ಪರಿಸ್ಥಿತಿಯ ಕಾರಣ ಬಿಲ್‌ರು ವಲಸೆಯನ್ನು ಆರಂಭಿಸಿರುವುದುಂಟು. ವಸಾಹತು ಸಂದರ್ಭದಲ್ಲಿಯೂ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ವಸಾಹತುಶಾಹಿಯ ಆಡಳಿತದ ವಿರುದ್ಧ ಏಕಾಂಗಿಯಾಗಿಯೂ ಬಿಲ್‌ರು ಹೋರಾಡಿದ್ದಾರೆ.

ವಸಾಹತು ಸನ್ನಿವೇಶದಲ್ಲಿ ಆದ ಗಾಯದ ಜೊತೆಗೆ ಪ್ರಸ್ತುತ ಜಾಗತೀಕರಣದ ಸಂದರ್ಭದಲ್ಲಿಯೂ ಮತ್ತೊಂದು ಬಗೆಯಲ್ಲಿ ಅಸ್ತಿತ್ವವನ್ನು ಉಳಿಸಿಕೊಳ್ಳುವ ಅನಿವಾರ್ಯತೆ ಉಂಟಾಯಿತು. ಇದರ ಪರಿಣಾಮವಾಗಿ ಬಿಲ್‌ರ ಮೂಲ ಮತ್ತು ಪಾರಂಪರಿಕ ಜೀವನ ಕ್ರಮದಲ್ಲಿ ಕೆಲವು ಏರುಪೇರುಗಳಾದರೂ ಸಾಂಪ್ರದಾಯಿಕ ಆಚರಣೆಯನ್ನು ತಮ್ಮ ಸಂಸ್ಕೃತಿಯ ಭಾಗವಾಗಿ ಉಳಿಸಿಕೊಂಡು ಬಂದಿರುವುದು ಗಮನಾರ್ಹವಾಗಿದೆ.

ಮಧ್ಯಪ್ರದೇಶದ ಬಿಲ್‌ರಲ್ಲಿ ನಾಲ್ಕು ಪಂಗಡಗಳಿವೆ. ಅವುಗಳೆಂದರೆ : ಬಿಲ್, ಇದು ಮೂಲ ಬುಡಕಟ್ಟು ಪಂಗಡವಾಗಿದೆ. ಉಳಿದ ಮೂರು 'ಬಿಲಾಲ್, ಪಟಾಲಿಯಾ, ಬಾರೇಲಾ ಅಥವಾ ರಾಥವಾ' ಬುಡಕಟ್ಟು ಪಂಗಡಗಳಿವೆ. ಇವಲ್ಲದೇ ನಾಯಕಡಾ, ಧಾನುಕ ಮತ್ತು ತಡವಿ, ಮನಕರ ಬುಡಕಟ್ಟು ಜನರು ಬಿಲ್‌ರಗಿಂತ ತಮ್ಮನ್ನು ವಿಶಿಷ್ಟವೆಂದುಕೊಳ್ಳುತ್ತಾರೆ. ಜಾಬುವಾ ಪ್ರದೇಶದಲ್ಲಿ ಬಿಲ್‌ರ ವಾಸಸ್ಥಳವು ಜೋಬಟ, ಅಲಿರಾಜಪುರ, ಭಾವರಾಗಳಲ್ಲಿ ಹೆಚ್ಚು ಕಾಣಬರುತ್ತಾರೆ. ಪಟಾಲಿಯಾ ಬುಡಕಟ್ಟು ಕಲ್ಯಾಣಪುರ, ಕಾಳಿದೇವಿ, ರೋಟಲಾ ಕ್ಷೇತ್ರದಲ್ಲಿದ್ದಾರೆ. ಧಾನುಕಾ ಬುಡಕಟ್ಟು ಪಂಗಡದವರು ಮಥವಾಡಾದಲ್ಲಿ ಮತ್ತು ನರ್ಮದಾ ನದಿಯ ಕವಾರಾದಲ್ಲಿರುತ್ತಾರೆ. ನಾಯಕಡಾ ಜನಾಂಗವು ಡಾಹಿ, ಕಟುರಿವಾಡಾದಲ್ಲಿ ಕಂಡುಬರುತ್ತಾರೆ. ಈ ನಾಲ್ಕು ಬುಡಕಟ್ಟು ಪಂಗಡಗಳು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದವರಾಗಿದ್ದರೂ ಸಾಂಸ್ಕೃತಿಕವಾಗಿ ತಮ್ಮದೇ ಆದ ಶ್ರೀಮಂತಿಕೆಯನ್ನು ಉಳಿಸಿಕೊಂಡವರು. ಬಿಲಾಲ್ ಮತ್ತು ಪಟಾಲಿಯಾ ಪಂಗಡವು ತಮ್ಮ ಆಶಯ ಮತ್ತು ಅಭಿವ್ಯಕ್ತಿಯಲ್ಲಿ ಸುಸಂಸ್ಕೃತಿಯನ್ನು ಬಿಟ್ಟುಕೊಟ್ಟಿಲ್ಲ. ಆದ್ದರಿಂದಲೇ ಬಿಲಾಲ್‌ರ ಮೇಲೆ ರಾಜಸ್ಥಾನದ ಸಂಸ್ಕೃತಿಯ ಪ್ರಭಾವವು, ಪಟಲಿಯಾದ ಜನರ ಮೇಲೆ ಗುಜರಾತಿಯ ಸಂಸ್ಕೃತಿಯು ಪ್ರಭಾವಿಸಿದೆ.

'ಬಿಲ್' ದ್ರಾವಿಡ ಭಾಷೆಯ ಶಬ್ದ. ದ್ರಾವಿಡರಲ್ಲಿ ಬಿಲ್ಲು ಶಬ್ದದ ಬಳಕೆ ಇದೆ. ಇದೊಂದು ಬುಡಕಟ್ಟಿನ ಅಸ್ತ್ರವಾಗಿ ಬಳಸಲಾಗುತ್ತಿತ್ತು. ಬಿಲ್ ಅಥವಾ ಬಿಲ್ಲು ಎಂದರ್ಥವಿದೆ. ಇದರ ಇನ್ನೊಂದು ಅರ್ಥ ಧನುಷ್ಯ. ಬಿಲ್‌ರು ಧನುರ್ವಿದ್ಯೆಯಲ್ಲಿ ನಿಪುಣತೆಯನ್ನು ಸಾಧಿಸಿದ್ದರಿಂದ ಈ ಹೆಸರು ಇವರಿಗೆ ಬಂದಿರಬಹುದು. ಸಂಸ್ಕೃತ ಭಾಷೆಯ ಬಿಲ್ಲ ಶಬ್ದದಿಂದ ಬಿಲ್ ಉದ್ಭವಿಸಿದೆ. 'ಭಿದಂತಿ ಇತಿ ಬಿಲ್ಲ': ಭೇದಿಸುವ ಜಾಗದಲ್ಲಿ ಬಿಲ್ ಇರುತ್ತಾರೆ ಎಂಬುವುದು ಇದರ ಅರ್ಥ.

## ೪.೧ ಬಿಲ್‌ರ ಐತಿಹಾಸಿಕ ಮತ್ತು ಪೌರಾಣಿಕ ಹಿನ್ನೆಲೆ

ಭಾರತದ ಅತ್ಯಂತ ಪ್ರಾಚೀನ ಬುಡಕಟ್ಟು ಸಮುದಾಯಗಳಲ್ಲಿ ಬಿಲ್ ಸಮುದಾಯವು ಒಂದು. ಈ ಬುಡಕಟ್ಟಿನ ಸಮುದಾಯದ ಬಗ್ಗೆ ಸಾಹಿತ್ಯ ಮತ್ತು ಪುರಾಣಗಳಲ್ಲಿ ಉಲ್ಲೇಖಗಳು ಲಭ್ಯವಾಗಿವೆ. ಈ ಉಲ್ಲೇಖಗಳು ಬಿಲ್‌ರ ಬಗ್ಗೆ ಬೆಳಕು ಚೆಲ್ಲುತ್ತವೆ. ರಾಮಾಯಣ, ಸ್ಕಂದಪುರಾಣ, ಶಿವಪುರಾಣ, ವಿಷ್ಣುಪುರಾಣ ಮತ್ತು ಮಹಾಭಾರತದಲ್ಲಿ ಬಿಲ್‌ರ ಬಗ್ಗೆ ಉಲ್ಲೇಖಗಳಿವೆ. ಬಿಲ್ ಜನರೇ ಹೇಳಿಕೊಳ್ಳುವಂತೆ ಅವರ ಮೂಲ ರಾಜಸ್ಥಾನದ ಬಾಸವಾಡ ಜಿಲ್ಲೆಯ ಕುಶಾಲಗಡದ ಹತ್ತಿರವಿರುವ ಥೋಲಕವಾಗಿದೆ. ಅಲ್ಲದೇ ತಮ್ಮ ಅತ್ಯಂತ ಪ್ರಾಚೀನ ಮತ್ತು ಮೂಲ ವಂಶ 'ಥೋಮರರ' ಉಪಜಾತಿಯಾಗಿದೆ. ಇವರ ಮೂಲ ಪಿತೃ ಪುರುಷ 'ಕಸುಮರ' ಮತ್ತು 'ಬೈಲುನ' ಇದೇ ಹಳ್ಳಿಯವರೆಂದು ಹೇಳುತ್ತಾರೆ. ಆರಂಭದಲ್ಲಿ ಇಲ್ಲಿ ಇದೇ ಜನಾಂಗದ ರಾಜ್ಯವಿತ್ತು. ಇದು ಧಾರ-ರಾಠವರೆಗೂ ಹಬ್ಬಿತ್ತು. ಜಾಬುವಾ ನಗರದ ಹತ್ತಿರವಿರುವ 'ಬಗೌರಾ' ಊರು ಇವರ ರಾಜಧಾನಿಯಾಗಿತ್ತು. ಬಿಲ್‌ರು ರಾಜಭೋಜನಿಗೂ ಕೂಡ ಸಮಯ ಸಮಯಕ್ಕೆ ಎಲ್ಲಾ ರೀತಿಯ ಸಹಕಾರವನ್ನು ಮಾಡುತ್ತಿದ್ದರು. ಹದಿನೇಳನೇಯ ಶತಮಾನದಲ್ಲಿ 'ಝುಬ್ಬು ನಾಯಕ' ನು ಬಿಲ್‌ರನ್ನು ಸೋಲಿಸಿ ತನ್ನ ಹೆಸರಿನಲ್ಲಿ ಜಾಬುವಾ ನಗರ ಮತ್ತು ರಾಜ್ಯವನ್ನು ಸ್ಥಾಪಿಸಿದನು.[೧]

ಬೂರಿಬಾಯಿ ಮತ್ತು ಸುಭಾಷ ಬಿಲ್‌ರನ್ನು ಸಂದರ್ಶಿಸಿದಾಗ ಅವರ ಅಭಿಪ್ರಾಯವು 'ಜಾಬುವಾ ಪ್ರದೇಶವೇ ನಮ್ಮ ಮೂಲ ಸ್ಥಾನ' ವೆಂದು ಹೇಳುತ್ತಾರೆ. ಬಚ್ಚನ್ ಕುಮಾರ ಎಂಬ ಸಂಶೋಧಕರು 'The Bhils seem to be 'Pygmies' of Ctesias (400 BC), and the Poulindai and Phyllitae of Ptolemy (150 AD); But the name by the which they are at present known cannot be traced for back in Sanskrit literature. The Pulindai tribe is mentioned in the Aitareya Brahman and the edicts of Asoka. the Bhils are often mentioned as foes or allies in the history of Anhilvada. In Katha Sarita Sagara, reference has been made to Bhil chief oppressing the progress of another king through the Vindhyas.'[೨] ಕಥಾ ಸರಿತ್ಸಾಗರದಲ್ಲಿ ಉಲ್ಲೇಖಿತಗೊಂಡ ಬಿಲ್‌ರ ಗುಣಗಳನ್ನು ಶೋಧಿಸುತ್ತಾರೆ. ಬಿಲ್‌ರ ಮೈತ್ರಿ ಮತ್ತು ವಿರೋಧದ ಗುಣಗಳು ಈ ಕೃತಿಯಲ್ಲಿ ಅಭಿವ್ಯಕ್ತಗೊಂಡಿರುವುದನ್ನು ಗುರುತಿಸುತ್ತಾರೆ.

'ಬಿಲ್‌ರ ಬಗ್ಗೆ ಕೆಲವು ಮಹಾಕಾವ್ಯಗಳು ಉಲ್ಲೇಖಿಸಿವೆ. ಅದಕ್ಕೆ ಉಲ್ಲೇಖಿತ ಕಾವ್ಯವಾಗಿ ರಾಮಾಯಣವನ್ನು ಗಮನಿಸಬಹುದು. ಇದರ ಕರ್ತೃ ವಾಲ್ಮೀಕಿ. ಇವನ ಆರಂಭಿಕ ಜೀವನದಲ್ಲಿ ಒಬ್ಬ ಬಿಲ್ ಪಂಡಿತನ ಹೆಸರು ವಾಲಿಯಾ. ನಂತರದಲ್ಲಿ ಇವನು ಸಂತನಾಗಿ ತಪಸ್ಸು ಮಾಡಿದ್ದರಿಂದ ಸರಸ್ವತಿ ದೇವಿಯು ಆಶೀರ್ವದಿಸಿದಳು ಮತ್ತು ಉತ್ಕಟವಾದ ದುಃಖ ಮತ್ತು ತನ್ನ ಹಿಂದಿನ ಕತ್ತಲ ಜೀವನವನ್ನು ಕುರಿತು ಅವನು ಮಹಾ ಕಾವ್ಯವನ್ನು ಬರೆದನು.' ಎಂಬುದಾಗಿ

ಕಮಲಾದೇವಿ ಚಟ್ಟೋಪಾಧ್ಯಾಯರು ಹೇಳುತ್ತಾರೆ. ವಾಲ್ಮೀಕಿಯು ಬಿಲ್‌ರ ಮೂಲದ ವ್ಯಕ್ತಿ ಎಂದು ಇವರು ಗ್ರಹಿಸಿ ಹೇಳಿದ್ದಾರೆ.[೩] ರಾಮಾಯಣದ ಅಯೋಧ್ಯ ಕಾಂಡದ ಅಧ್ಯಾಯ ೫೦, ಶ್ಲೋಕ ೫೦ ಮತ್ತು ಅರಣ್ಯ ಕಾಂಡದ ಅಧ್ಯಾಯ ೭೪, ಶ್ಲೋಕ ೧೭–೧೮ ರಲ್ಲಿ ಶಬರಿಯನ್ನು ಬಿಲ್ ಮಹಿಳೆಯೆಂದು ಉಲ್ಲೇಖಿಸಿರುವುದು ಕಾಣಬರುತ್ತದೆ.

ಮಹಾಭಾರತದಲ್ಲಿ ಬರುವ ಏಕಲವ್ಯ ಒಬ್ಬ ಮಹಾನ್ ಬಿಲ್ಲುಗಾರ. ಈ ಏಕಲವ್ಯ ಬಿಲ್ಲುವಿದ್ಯೆ ಕಲಿಕೆಗಾಗಿ ಪಾಂಡವರ ಗುರುಗಳಾದ ದ್ರೋಣಾಚಾರ್ಯರ ಬಳಿ ಹೋಗುತ್ತಾನೆ. ಆದರೆ ದ್ರೋಣಾಚಾರ್ಯರ ಉಮೇದುವಾರಿಕೆಯನ್ನು ವಹಿಸಿದ್ದ ಪಾಂಡವರು ಏಕಲವ್ಯನ ಬಿಲ್ವಿದ್ಯೆ ಕಲಿಕೆಗೆ ಒಪ್ಪಿಕೊಳ್ಳದಂತೆ ತಡೆಯುತ್ತಾರೆ. ನಂತರದಲ್ಲಿ ಅವನೇ ದ್ರೋಣಾಚಾರ್ಯರ ಪ್ರತಿಮೆಯನ್ನಿಟ್ಟುಕೊಂಡು ಅವನನ್ನು ತನ್ನ ಗುರುವೆಂದು ಭಾವಿಸಿಕೊಂಡು ಬಿಲ್ವಿದ್ಯೆಯನ್ನು ಅಭ್ಯಾಸ ಮಾಡುತ್ತಾನೆ. ಕೊನೆಗೆ ಚತುರ ಬಿಲ್ವಿದ್ಯೆಗಾರನಾಗುತ್ತಾನೆ. ಈ ವಿಷಯವು ದ್ರೋಣಾಚಾರ್ಯರಿಗೆ ಗೊತ್ತಾಗಿ ಅವನ ಬಳಿ ಗುರುದಕ್ಷಿಣೆಯಾಗಿ ತರ್ಜನಿ ಬೆರಳನ್ನು ಕೇಳುತ್ತಾನೆಂದು ಡಬ್ಲ್ಯೂ. ಕ್ರುಕ್ ತಮ್ಮ ಕೃತಿಯೊಂದರಲ್ಲಿ ಉಲ್ಲೇಖಿಸುತ್ತಾರೆ.[೪] ಆದರೆ ಹೆಬ್ಬೆರಳನ್ನು ದ್ರೋಣಾಚಾರ್ಯರು ಪಡೆಯುತ್ತಾರೆ. ಈಗಲೂ ಬಿಲ್‌ರು ಬಿಲ್ಲನ್ನು ಪ್ರಯೋಗಿಸುವಾಗ ಹೆಬ್ಬೆರಳನ್ನು ಬಳಸದೇ ಇರುವುದನ್ನು ಗಮನಿಸಬಹುದು.

ಮಹಾಭಾರತದ ಇನ್ನೊಂದು ಪ್ರಸಂಗ ಶ್ರೀಕೃಷ್ಣನ ಮರಣವು ಒಬ್ಬ ಬಿಲ್ ವ್ಯಕ್ತಿಯಿಂದಾಗುತ್ತದೆ ಎಂಬ ಉಲ್ಲೇಖವಿದೆ. ಶ್ರೀಕೃಷ್ಣನ ಪಾದಕ್ಕೆ ಬಾಣವನ್ನು ಬಿಟ್ಟಾಗ ಅವನ ಸಾವಾಗುತ್ತದೆಯೆಂದು ಕಮಲಾದೇವಿ ಚಟ್ಟೋಪಾಧ್ಯಾಯರು ಅವರು ಉಲ್ಲೇಖಿಸುತ್ತಾರೆ.[೫]

ಹರಿಶ್ಚಂದ್ರ ಉಪ್ರೇತಿ ಅವರು ಬಿಲ್‌ರ ಇತಿಹಾಸದ ಬಗ್ಗೆ ಬರೆದಿದ್ದಾರೆ. ಅಲ್ಲದೇ ಕರ್ನಲ್ ರಾಟ, ಓರ್ಝಾ ಮತ್ತು ಇನ್ನೂ ಅನೇಕ ಇತಿಹಾಸಕಾರರು ಬಿಲ್‌ರು ದಕ್ಷಿಣ, ಪಶ್ಚಿಮ ರಾಜಸ್ಥಾನದ ಮೂಲವಾಸಿಗಳೆಂದು ಹೇಳುತ್ತಾರೆ. ರಜಪೂತರು ಬಿಲ್‌ರನ್ನು ಸೋಲಿಸಿ ತಮ್ಮದೇ ಆದ ರಾಜ್ಯ ಸ್ಥಾಪನೆ ಮಾಡಿದರು. ಈ ರಾಜ್ಯಸ್ಥಾಪನೆಯಿಂದಾಗಿ ಅನೇಕ ಬುಡಕಟ್ಟುಗಳು ಅರಣ್ಯವನ್ನು ಸೇರಬೇಕಾಯಿತು. ಉದಾಹರಣೆಗೆ ಕುಶಾಲಗಡದ ಕುಶಾಲ ಬಿಲ್‌ನನ್ನು ರಾಠೋಡ ವಂಶ್ ರಜಪೂತರು ಸೋಲಿಸಿ ಅಲ್ಲಿ ರಾಜ್ಯಸ್ಥಾಪನೆ ಮಾಡಿದರು. ಡುಂರಪುರ ರಾಜ್ಯದಿಂದ ಡುಂಗರಿಯಾ ಬಿಲ್‌ರ ಸಂಬಂಧ ಬೆಳೆದುಕೊಂಡಿತ್ತು. ಭಾಂಸವಾಡದ ರಾಜ್ಯದಲ್ಲಿ ಭಾಂಸಿಯಾ ಬಿಲ್‌ರ ಅಧಿಪತ್ಯವಿತ್ತು. ಇವರೆಲ್ಲರು ರಜಪೂತರ ಆಳ್ವಿಕೆಯಿಂದಾಗಿ ಪದಚ್ಯುತಿಗೊಂಡರು ಇದರಿಂದಾಗಿಯೇ ಈ ಜನರು ವನ್ಯ ಪ್ರದೇಶ, ಬೆಟ್ಟ–ಗುಡ್ಡ ಮತ್ತು ನಿರ್ಜನ ಪ್ರದೇಶದಲ್ಲಿ ವಾಸಿಸತೊಡಗಿದರು. ಮೂಲತಃ ಅರಣ್ಯವಾಸಿಗಳಾದ ಬಿಲ್‌ರು ವಿಭಿನ್ನವಾದ ಕ್ಷೇತ್ರ, ಮಾರ್ಗ

ಮತ್ತು ಭೌಗೋಳಿಕ ಪರಿಸ್ಥಿತಿಯನ್ನು ಅರಿತವರಾಗಿದ್ದರಿಂದ ರಜಪೂತರಿಗೆ ಯಾವಾಗಲೂ ಕಾಡುತ್ತಿದ್ದರು. ಇದರಿಂದಾಗಿ ಬಿಲ್‌ರ ಜೊತೆಗೆ ಮೈತ್ರಿ ಮಾಡಿಕೊಂಡು ಅವರಿಗೆ ಸನ್ಮಾನ ಮತ್ತು ಪ್ರತಿಷ್ಠೆಯನ್ನು ಕೊಟ್ಟರು ಎಂದು ಹೇಳುತ್ತಾರೆ.

ಡಬ್ಲ್ಯೂ. ಕ್ರುಕ್ ಅವರು 'ಬಿಲ್‌ರು ರಾಜಸ್ಥಾನ, ಸೆಂಟ್ರಲ್ ಇಂಡಿಯಾ ಮತ್ತು ಗುಜರಾತಿನಲ್ಲಿ ವಾಸಿಸುತ್ತಿದ್ದವರು. ಇವರನ್ನು ರಜಪೂತರು, ಮಾಳ್ವರು ಮತ್ತು ಗುಜರಾತಿಯರು ತಮ್ಮ ಅಧೀನವಾಗಿಟ್ಟುಕೊಂಡಿದ್ದರು. ಇದನ್ನು ಅನೇಕ ಆದಿರಾಜ್ಯಗಳು ಒಪ್ಪಿದ್ದರು. ಯಾವಾಗ ಪಟ್ಟಾಭೀಷೇಕ ಅಥವಾ ಸರದಾರ ಗದ್ದುಗೆ ಮೇಲೆ ಕೂಡುವ ಅಗತ್ಯ ಉಂಟಾದಾಗ ಬಿಲ್‌ರ ಸಹಾಯ ಮತ್ತು ಅವರ ರಕ್ಷಣೆಯ ಹಸ್ತ ರಜಪೂತರಿಗೆ ಅಗತ್ಯವಿತ್ತು. ಹಾಗಾಗಿಯೇ ಬಿಲ್ ವ್ಯಕ್ತಿಯ ಕೈಬೆರಳಿನ ಇಲ್ಲವೇ ಕಾಲುಬೆರಳಿನ ಸ್ವಲ್ಪ ಭಾಗವನ್ನು ಕೊಯ್ದು ಆ ರಕ್ತವನ್ನು ಹಚ್ಚಿಕೊಳ್ಳುತ್ತಿದ್ದರು.

ಐತಿಹಾಸಿಕ ಪ್ರಮಾಣಗಳ ಆಧಾರದ ಮೇಲೆ ಹೇಳುವುದಾದರೆ ಈ ಬಿಲ್ ಜನ ಪರೋಕ್ಷವಾಗಿ ಮತ್ತು ಅಪರೋಕ್ಷವಾಗಿ ಸದಾ ರಜಪೂತರಿಗೆ ಯುದ್ಧ ಸಂದರ್ಭಗಳಲ್ಲಿ ಸಹಾಯ ಮಾಡುತ್ತಿದ್ದರು. ಇವರು ಮೊಘಲರಿಗೆ ಯಾವಾಗಲೂ ವಿರೋಧಿಗಳಾಗಿದ್ದರು. ಮೊಘಲರ ಜೊತೆ ಕೈ ಜೋಡಿಸಲಿಲ್ಲ, ಆದರೆ ರಜಪೂತರ ಜೊತೆ ಸೇರಿ ತಮ್ಮ ಪ್ರಾಣವನ್ನು ಲೆಕ್ಕಿಸದೇ ಯುದ್ಧದಲ್ಲಿ ಹೋರಾಡುತ್ತಿದ್ದರು. ರಜಪೂತರನ್ನು ಮತ್ತು ಅವರ ಸಂಪತ್ತನ್ನು ಬಿಲ್‌ರು ರಕ್ಷಣೆ ಮಾಡುತ್ತಿದ್ದರು. ಶತ್ರು ರಾಜ್ಯದೊಂದಿಗೆ ರಜಪೂತರು ಸೋತಾಗ ತಮ್ಮ ಜೊತೆ ಅರಣ್ಯದಲ್ಲಿಟ್ಟುಕೊಂಡು ಆಶ್ರಯ ನೀಡುತ್ತಿದ್ದರು. ಆದ್ದರಿಂದಲೇ ಇವರನ್ನು ಸ್ವಾಭಿಮಾನಿ ಜನಾಂಗವೆಂದು ಹೇಳಬಹುದು. ರಜಪೂತರ ಜೊತೆ ಮಾತ್ರವೇ ಇವರ ಸಮಾಗಮ ಮತ್ತು ಸಂಪರ್ಕವು ಅವಿನಾಭಾವವಾಗಿತ್ತು. ಈ ಕಾರಣದಿಂದಾಗಿಯೇ ಬಿಲ್‌ರಿಗೆ ರಜಪೂತ ಅಥವಾ ರಾಜಸ್ಥಾನಿಯರ ಸಂಸ್ಕೃತಿಯ ಆಳವಾದ ಪ್ರಭಾವವಿತ್ತು.

ಹರ್ಬರ್ಡ್ ರಿಜಲೆಯವರು ಬಿಲ್‌ರನ್ನು ದ್ರಾವಿಡರ ಮೂಲವೆಂದು ಹೇಳಿದ್ದಾರೆ. ಎನ್. ಮಜುಮದಾರ ಇವರನ್ನು ಪೂರ್ವದ್ರಾವಿಡರ ಜನಾಂಗವೆಂದು ಹೇಳಿದ್ದಾರೆ. ಸ್ಟಿಫನ್ ಪ್ಯೂಕರ್ ರವರು ಬಿಲ್‌ರನ್ನು ಅತೀ ಪ್ರಾಚೀನ ಆದಿವಾಸಿ ಜನಾಂಗವೆಂದು ಬಣ್ಣಿಸುತ್ತಾರೆ. ಮೇಜರ್ ಹೆಂಡ್ಲೆ ಬಿಲ್‌ರನ್ನು ಪೌರಾಣಿಕ ಕಾಲದ ಪ್ರಜಾತಿಯೆಂದು ಹೇಳುತ್ತಾರೆ. ಹೆಂಡ್ಲೆಯವರು ಸಹ ಮಾಹಾಭಾರತದ ಏಕಲವ್ಯ ಬಿಲ್ವಿದ್ಯೆ ಮತ್ತು ಕೃಷ್ಣನ ಮರಣ ಪ್ರಸಂಗದಲ್ಲಿ ಬಿಲ್ ಜನಾಂಗದ ವ್ಯಕ್ತಿಯ ಉಲ್ಲೇಖಗಳನ್ನು ನೀಡುತ್ತಾರೆ. ಬಿಲ್‌ರ ಪೌರಾಣಿಕತೆ, ಪರಂಪರೆ, ಇತಿಹಾಸ ಮತ್ತು ಸಂಸ್ಕೃತಿಗಳ ನೆಲೆಯಿಂದ ಇವರು ಭಾರತದ ಪ್ರಾಚೀನ ಜನಾಂಗಗಳಲ್ಲಿ ಒಂದೆಂದು ಗ್ರಹಿಸಬಹುದಾಗಿದೆ. ಆರ್ಯರು ಭಾರತಕ್ಕೆ ಬರುವ ಮುಂಚೆಯೇ ಪುರಾಣ ಕಾವ್ಯಗಳಲ್ಲಿ ಇವರ ಸುಳಿವು ಸಿಗುತ್ತದೆ.

ಭಾಗವತ ಪುರಾಣದ ಸ್ಕಂದ ಖಂಡದ ೧೪ನೇಯ ಆಧ್ಯಾಯದ ೪೫ ನೇಯ ಶ್ಲೋಕದಲ್ಲಿ ಆದಿವಾಸಿ ಜಾತಿಗಳ ಉಗಮಕ್ಕೆ ಸಂಬಂಧಿಸಿದಂತೆ ಒಂದು ಕಥೆಯಿದೆ. ಋಷಿಗಳ ಶಾಪದಿಂದ ರಾಜ'ವೆನ್'ನ ಅಕಾಲ ಮೃತ್ಯುವಾಗಿತ್ತು. ರಾಜ ವೆನ್‌ನ ಮೃತ್ಯು ನಂತರ ಅವನ ಪ್ರಜೆಗಳ ಕಷ್ಟಗಳು ಅಂತ್ಯವಾಗಲಿಲ್ಲ. ಆ ಪ್ರಜೆಗಳು ಋಷಿಗಳಲ್ಲಿ ಶರಣು ಹೋದರು. ಋಷಿಗಳಿಗೆ ತಮ್ಮ ಹಿಂದಿನ ಸಿಟ್ಟಿನ ಅರಿವಾಯಿತು. ಆಗ ಆ ರಾಜ್ಯವನ್ನು ಆಳಲು ಯಾವ ಉತ್ತರಾಧಿಕಾರಿಯೂ ಇರಲಿಲ್ಲ. ಆ ಶಾಪದಿಂದ ಆ ರಾಜನನ್ನು ಮುಕ್ತಗೊಳಿಸುವ ಬದಲು ಆ ರಾಜನ ಮೃತ ದೇಹದಿಂದಲೇ ನಾಲ್ಕು ಪುರುಷರನ್ನು ಹುಟ್ಟಿಸಿದರು, ಅದರಲ್ಲಿ ಮೊದಲನೆಯವ ಬ್ರಾಹ್ಮಣ, ಎರಡನೆಯವ ಕ್ಷತ್ರಿಯ, ಮೂರನೆಯವ ವೈಶ್ಯ ಮತ್ತು ನಾಲ್ಕನೆಯವನಾಗಿ ಶೂದ್ರ. ಶೂದ್ರನು ತೊಡೆಯಿಂದ ಹುಟ್ಟಿದವನು. ಆದ್ದರಿಂದಲೇ ನಾಲ್ಕನೆಯ ವ್ಯಕ್ತಿ ಅಸಮಾನ್ಯ ಪುರುಷನಾಗಿದ್ದನು. ಅವನು ಬಲಿಷ್ಟನಾಗಿದ್ದು, ಕಪ್ಪು ಬಣ್ಣದವನಾಗಿದ್ದನು. ಚಪ್ಪಟೆಯ ಮೂಗು ಹೊಂದಿದ್ದನು. ಕೆಂಪು ಕಣ್ಣುಗಳನ್ನು ಹೊಂದಿದವನಾಗಿದ್ದನು. ಇವನನ್ನು ಗಮನಿಸಿದ ಋಷಿಗಳು ಆಶ್ಚರ್ಯದಿಂದ ನೋಡಿದರು. ಆ ನಾಲ್ಕನೆಯ ವ್ಯಕ್ತಿಯು ವಿನಮ್ರತೆಯಿಂದ ಕೈ ಜೋಡಿಸಿ ಋಷಿಗಳ ಆದೇಶವನ್ನು ಬೇಡಿದನು. ಋಷಿಗಳು 'ನಿಷಿದ' ಎಂದು ಹೇಳಿದರು. 'ನಿಷಿದ' ದ ಅರ್ಥ ಕುಳಿತುಕೊಳ್ಳು ಎಂಬುದಾಗಿತ್ತು. ಆ ಆಜ್ಞೆಯ ಪ್ರಕಾರ ಅವನು ಹತ್ತಿರದಲ್ಲಿ ಕುಳಿತುಕೊಂಡನು. ಈ ನಿಷಿದನ ವಂಶಜರು ನಿಷಾದ ಅನ್ನಿಸಿಕೊಂಡರು. ಬಿಲ್‌ರು ನಿಷಾದದ ಪರ್ಯಾಯವೆಂದು ಹೇಳಲಾಗುತ್ತದೆ. ರಾಮಾಯಣ ಬರೆದ ಮಹಾನ್ ಋಷಿ ಕವಿ ವಾಲ್ಮೀಕಿಯನ್ನು ಕೂಡ ಬಿಲ್‌ರು ತಮ್ಮ ಪೂರ್ವಜನೆಂದು ನಂಬಿದ್ದಾರೆ. ವಾಲ್ಮೀಕಿಯೂ ಸಹ ಬಿಲ್‌ರ ಮೂಲ ವ್ಯಕ್ತಿಯಾಗಿದ್ದಾನೆ. ವಾಲ್ಮೀಕಿಯು 'ಮಾ ನಿಷಾದಃ' ಎಂದು ಉದ್ಗಾರ ತೆಗೆದಿರುವುದನ್ನು ಗಮನಿಸಬಹುದು.

ಬಿಲ್‌ರ ಉಗಮಕ್ಕೆ ಸಂಬಂಧಿಸಿದಂತೆ ಮತ್ತೊಂದು ಮಿತ್ ಇದೆ. ಇದನ್ನು ಎಸ್. ಎಲ್. ವರ್ಮಾರವರು ಹೀಗೆ ಹೇಳುತ್ತಾರೆ: ಬಿಲ್‌ರ ಮತ್ತು ಅವರ ಅರಣ್ಯ ಜೀವನ ಜೊತೆಗಿನ ಅಂತರ್ಗತ ಸಂಬಂಧವು ಮಹತ್ವದ್ದಾಗಿದೆ. ಬಿಲ್‌ರು ಅರಣ್ಯ ದೇವರ ಸಂತಾನದಿಂದ ಹುಟ್ಟಿದವರು ಎನ್ನುವ ಪ್ರತೀತಿ ಇದೆ. ಈ ಪ್ರತೀತಿಯ ಪ್ರಕಾರ ಸತಪುಡಾ ಪರ್ವತದ ಗುಹೆಯೊಳಗೆ ಮುನಿಯೋರ್ವನು ತಪಸ್ಸನ್ನು ಆಚರಿಸುತ್ತಿದ್ದನು. ಅವನ ಈ ತಪಸ್ಸು ಇಂದ್ರನಿಗೆ ಮೆಚ್ಚುಗೆಯಾಗಿ ತಪಸ್ಸಿನಲ್ಲಿ ಲೀನವಾಗಿದ್ದ ಮುನಿಗೆ ವರದಾನವನ್ನು ಕೇಳಲು ಅವನು ಹೇಳಿದನು. ಆ ಮುನಿಯು ಇಂದ್ರನಿಗೆ ಈ ಅರಣ್ಯವು ನನಗೆ ತುಂಬ ಕಷ್ಟಗಳನ್ನು ಕೊಟ್ಟಿದೆ. ಆದ ಕಾರಣ ನಾನು ಯಾವ ಸಮಯದಲ್ಲಾದರೂ, ಯಾವ ಪ್ರದೇಶದಲ್ಲಾದರೂ ನಿಂತುಕೊಂಡು ವರಬೇಡುತ್ತೇನೋ ಅದೇ ಕ್ಷಣದಲ್ಲಿ ಆ ಮರವು ಒಣಗಿ ಹೋಗಬೇಕೆಂದು ವರವನ್ನು ಕೇಳಿದನು. ಇದಕ್ಕೆ ಇಂದ್ರನು

ವರವನ್ನು ಕರುಣಿಸಿ ಕಣ್ಮರೆಯಾದನು. ಇದೇ ಪ್ರಕಾರ ಮುನಿಯು ಪ್ರದೇಶದಿಂದ ಪ್ರದೇಶಕ್ಕೆ ಹೋಗುತ್ತಾ ಹಾರೈಸುತ್ತಾ ಗಿಡ-ಮರಗಳನ್ನು ತನ್ನ ವರದಿಂದ ಅರಣ್ಯಕ್ಕೆ ಶಪಿಸಿ ಗಿಡ-ಮರಗಳನ್ನು ಒಣಗಿಸತೊಡಗಿದನು.

ಈ ಹಿನ್ನೆಲೆಯಿಂದಾಗಿ ಆತಂಕಗೊಂಡ ಅರಣ್ಯ ದೇವನು ಶಿವನ ಆರಾಧನೆಯನ್ನು ಆರಂಭಿಸಿದನು. ಶಿವನು ಪ್ರತ್ಯಕ್ಷನಾಗಿ ಅರಣ್ಯದೇವನಿಗೆ ನಾನು ನಿನ್ನ ಕಷ್ಟವನ್ನು ಅರಿತಿದ್ದೇನೆ. ಅದರ ಕಾರಣವು ಗೊತ್ತೆಂದು ಹೇಳಿದನು. 'ಸೂರ್ಯೋದಯಕ್ಕಿಂತ ಮೊದಲು ಅರಣ್ಯ ದೇವನೇ ನೀನು ಬಿರುಗಾಳಿ ರೂಪವನ್ನು ತಾಳು, ಮೊದಲು ನಿನ್ನ ಬಿರುಗಾಳಿಗೆ ಯಾವ ಮರವು ಮೊದಲು ಬೀಳುವುದೋ ಅದೇ ಜಾಗದಲ್ಲಿ ಒಂದು ಮಗು ಜನಿಸುತ್ತದೆ. ಆ ಮಗುವನ್ನು ಏಳು ದಿನ ಒಂದು ಕಂದಕದಲ್ಲಿ ಎಲೆಗಳ ಸಹಾಯದಿಂದ ಮುಚ್ಚಿಡು. ಆಗ ಮಗು ಹುಯ್ಯಿಲಿಡಲು ಶುರುಮಾಡುತ್ತದೆ. ಅದರ ಧ್ವನಿಯನ್ನು ಕೇಳಿದ ಮುನಿಯು ಆ ಮಗುವಿನ ಬಳಿ ಹೋಗುತ್ತಾನೆ. ಆ ಕಂದಕದಲ್ಲಿ ಬೀಳುವನು. ಆ ಮಗುವಿನಿಂದಲೇ ಆ ಮುನಿಗೆ ಮುಕ್ತಿ ಕೊಡಿಸು. ಒಣ ಮರಕ್ಕೆ ಬೆಂಕಿ ಹಚ್ಚಿ ಅವನ ಶವ ಸಂಸ್ಕಾರ ಮಾಡು. ಅವನ ಬೂದಿಯನ್ನು ಹರಿಯುವ ನದಿಯಲ್ಲಿ ಬಿಟ್ಟು ಸರಿಯಾಗಿ ಆ ಮಗುವಿನ ಲಾಲನೆ-ಪಾಲನೆ ಮಾಡುವ ಜವಾಬ್ದಾರಿಯನ್ನು ಹೊರು, ಮುಂದೆ ಈ ಮಗುವೇ ಬಿಲ್‌ನ ಹೆಸರಿನಲ್ಲಿ ಗುರುತಿಸಿಕೊಂಡು ತನ್ನ ವಂಶವನ್ನು ವೃದ್ಧಿ ಮಾಡುವನೆಂದು ಶಿವನು ಅನುಗ್ರಹಿಸುತ್ತಾನೆ.' ಈ ಅನುಗ್ರಹದೊಂದಿಗೆ ಅರಣ್ಯ ದೇವನು ತನ್ನನ್ನು ಉಳಿಸಿಕೊಂಡನಲ್ಲದೇ, ಮಗುವನ್ನು ಪಡೆಯುವ ಮೂಲಕ ಬಿಲ್‌ರ ವಂಶವನ್ನು ಬೆಳೆಸಿದನು. ಹಾಗಾಗಿಯೇ ಬಿಲ್‌ರು ಅರಣ್ಯದಲ್ಲಿ ತಮ್ಮ ಬುಡಕಟ್ಟು ಜೀವನವನ್ನು ಸಾಗಿಸಿದರು.

ಒಂದು ಪೌರಾಣಿಕ ಕಥೆಯು ಬಿಲ್‌ರ ಬಗ್ಗೆ ಈ ರೀತಿ ಹೇಳುತ್ತದೆ. 'ರಾಮನ ರಾಜ್ಯದ ಅಗಸನೋರ್ವನು ಪ್ರತಿನಿತ್ಯವು ಬಟ್ಟೆಗಳನ್ನು ತೊಳೆಯುತ್ತಿದ್ದನು. ಒಂದು ದಿನ ದೊಡ್ಡದಾದ ಪ್ರವಾಹವೊಂದು ನದಿಯಲ್ಲಿ ಎದ್ದಿತು. ಆ ಪ್ರವಾಹದ ಸೂಚನೆಯನ್ನು ಮೀನೊಂದು ಅಗಸನಿಗೆ ತಿಳಿಸಿತು. ಅಗಸನು ತನ್ನ ಮಡದಿಯನ್ನು ರಕ್ಷಿಸಿಕೊಳ್ಳಲು ಮುಂದಾದನು. ಅದಕ್ಕಾಗಿ ಒಂದು ದೊಡ್ಡ ಮರದ ಪೆಟ್ಟಿಗೆಯನ್ನು ತಯಾರಿಸಿಕೊಳ್ಳಲು ಆ ಮೀನು ಸೂಚಿಸಿತು. ಅದರಂತೆ ದೊಡ್ಡದೊಂದು ಪೆಟ್ಟಿಗೆಯನ್ನು ತಯಾರಿಸಿದನು. ಅದರಲ್ಲಿ ತನ್ನ ಸಹೋದರಿ ಮತ್ತು ಕೋಳಿಯನ್ನು ರಕ್ಷಿಸಿದನು. ಪ್ರವಾಹವು ನಿಂತ ಮೇಲೆ ರಾಮನು ಪ್ರವಾಹದಿಂದ ಆದ ಸ್ಥಿತಿ-ಗತಿಗಳನ್ನು ತಿಳಿದುಕೊಳ್ಳಲು ಸಂದೇಶಕಾರನನ್ನು ಕಳುಹಿಸಿದನು. ಸಂದೇಶಕಾರನಿಗೆ ಕೋಳಿಯ ಕೂಗುವಿಕೆ ಕೇಳಿಸುತ್ತಿತ್ತು. ಆ ಧ್ವನಿಯನ್ನು ಅನುಸರಿಸಿಕೊಂಡು ಆ ಪೆಟ್ಟಿಗೆಯ ಸಮೀಪ ಬಂದನು. ಸಂದೇಶಕಾರನು ಪೆಟ್ಟಿಗೆಯ ವಿಚಾರದ ಬಗ್ಗೆ ತಿಳಿಸಿದನು. ಆಗ ರಾಮನು 'ಯಾರವನು ಮತ್ತು ಪ್ರವಾಹದಿಂದ ಹೇಗೆ ತಪ್ಪಿಸಿಕೊಂಡನು' ಎಂದು ವಿಚಾರಿಸಿದನು. ಆಗ ಅಗಸನು ನಡೆದ ಕಥೆಯನ್ನೆಲ್ಲಾ ವಿಸ್ತಾರವಾಗಿ

ಹೇಳಿದನು. ರಾಮನು ಕಥೆಯನ್ನು ಕೇಳಿದ ನಂತರ ಅಗಸನಿಗೆ ಉತ್ತರ, ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿ ನಿಂತುಕೊಳ್ಳಲು ಹೇಳಿ "ಆ ಹೆಂಗಸು ತನ್ನ ಸಹೋದರಿ" ಎಂದು ಪ್ರತಿಜ್ಞೆ ಮಾಡಲು ಹೇಳಿದನು. ಆ ಅಗಸನು ಯಾವ ಭಯವಿಲ್ಲದೇ ತನ್ನ ಸಹೋದರಿಯೆಂದು ದೃಢೀಕರಿಸಿದನು. ತದನಂತರದಲ್ಲಿ ರಾಮನು ಅಗಸನನ್ನು ದಕ್ಷಿಣಾಭಿಮುಖವಾಗಿ ತಿರುಗಿಸಿ ಕೇಳಿದಾಗ, ಅಗಸನು ತನ್ನ ಮೊದಲಿನ ಹೇಳಿಕೆಗೆ ವಿರುದ್ಧವಾಗಿ ಅವಳು ತನ್ನ ಹೆಂಡತಿಯೆಂದು ಹೇಳಿದನು. ಆಗ ರಾಮನು ಅಗಸನಿಗೆ ಈ ರೀತಿ ಪಾರಾಗಲು ಯಾರು ಹೇಳಿದರೆಂದು ಕೇಳಿದನು. ಈ ಮಾತನ್ನು ಕೇಳಿದ ಕೂಡಲೇ ಮೀನಿನ ನಾಲಿಗೆ ಕತ್ತರಿಸಿತ್ತು. ಅಂದಿನಿಂದ ಇಂದಿನವರೆಗೂ ಮೀನಿಗೆ ನಾಲಿಗೆ ಇಲ್ಲವಾಯಿತು.

ರಾಮನು ಅಗಸನಿಗೆ ಜಗತ್ತಿನ ಮರುಸ್ಥಾಪನೆಯ ಬಗ್ಗೆ ಪ್ರಸ್ತಾಪಿಸಿದನು. ಆ ಕಾರಣಕ್ಕಾಗಿ ಅಗಸನು ತನ್ನ ಸಹೋದರಿಯನ್ನು ಮದುವೆಯಾಗಿ, ಏಳು ಗಂಡು ಹಾಗೂ ಏಳು ಹೆಣ್ಣು ಮಕ್ಕಳನ್ನು ಪಡೆದನು. ಮೊದಲು ಹುಟ್ಟಿದ ಮಗನಿಗೆ ರಾಮನು ಕುದುರೆಯನ್ನು ಕೊಡುಗೆಯಾಗಿ ನೀಡಿದನು. ಅಗಸನ ಮಗ ಆ ಕುದುರೆಯನ್ನು ಸ್ವೀಕರಿಸಿದನೇ ಹೊರತು ಸವಾರಿ ಮಾಡಲಿಲ್ಲ. ಕುದುರೆಯನ್ನು ಸರಳವಾದ ನೆಲದ ಮೇಲೆ ಬಿಟ್ಟು ತಾನು ಅರಣ್ಯದೊಳಗೆ ಕಟ್ಟಿಗೆ ಕಡಿಯಲು ಹೋದನು. ಮುಂದೆ ಅವನ ವಂಶಸ್ಥರು ಬಿಲ್ ಬುಡಕಟ್ಟಿನ ಉದಯಕ್ಕೆ ಕಾರಣರಾದರು.

ಕಾವ್ಯ, ಚರಿತ್ರೆ ಮತ್ತು ಪುರಾಣಗಳ ಹಿನ್ನೆಲೆಯಲ್ಲಿ ಉಗಮ ಮತ್ತು ಇರುವಿಕೆಯನ್ನು ಗುರುತಿಸಬಹುದೇ ಹೊರತು ನಿರ್ದಿಷ್ಟವಾಗಿ ಏಕಭಿಪ್ರಾಯಕ್ಕೆ ಬರಲು ಸಾಧ್ಯವಿಲ್ಲ. ಮಹಾಭಾರತದ ಮೂಲಕ ಬಿಲ್‌ರ ಪ್ರತಿನಿಧಿಯಾಗಿ ಏಕಲವ್ಯನನ್ನು ನೋಡಲಾಗುತ್ತದೆ. ಅಲ್ಲದೇ ಕೃಷ್ಣನನ್ನು ಕೊಂದವನು ಒಬ್ಬ ಬಿಲ್‌ರ ಬುಡಕಟ್ಟಿಗೆ ಸೇರಿದವನು ಎಂಬ ವಾದವಿದೆ. ರಾಮಾಯಣದಲ್ಲಿ ಶಬರಿ ಬಿಲ್‌ರವಳೆಂದು ಕಮಲಾದೇವಿ ಚಟ್ಟೋಪಾಧ್ಯಾಯರವರು ವಾದಿಸುತ್ತಾರೆ. ಅಲ್ಲದೇ ರಾಮಾಯಣವನ್ನು ಬರೆದ ವಾಲ್ಮೀಕಿಯು ಬಿಲ್‌ರ ಬುಡಕಟ್ಟಿಗೆ ಸೇರಿದವನೆಂದು ಸಹ ವಾದಿಸಲಾಗಿದೆ.

ಬಚ್ಚನ್ ಕುಮಾರ ಎಂಬ ಸಂಶೋಧಕರು ಬಿಲ್‌ರ ಐತಿಯಾಸಿಕ ಹಿನ್ನೆಲೆಯನ್ನು ಎಂಟು ಭಾಗ ಮಾಡಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿದರು. ಆ ಭಾಗಗಳು ಕೆಳಕಂಡಂತಿವೆ:

೧. ಪ್ರಾಗೈತಿಹಾಸಿಕ ಕಾಲದಲ್ಲಿ ಬಿಲ್‌ರು

೨. ಆರಂಭಿಕ ಇತಿಹಾಸ ಕಾಲದಲ್ಲಿ ಬಿಲ್‌ರು

೩. ಬಿಲ್-ರಜಪೂತರ ಸಹಕಾರದ ಮೊದಲ ಘಟ್ಟ (ಕ್ರಿ. ಶ. ೭ ರಿಂದ ೧೩)

೪. ಬಿಲ್‌ರ ಸಾಮಾಜಿಕ ಅವನತಿಯ ಮೊದಲ ಘಟ್ಟ (ಕ್ರಿ. ಶ. ೧೪-೧೬)

೫. ಬಿಲ್-ರಜಪೂತರ ಸಹಕಾರದ ಎರಡನೆಯ ಘಟ್ಟ (ಕ್ರಿ. ಶ. ೧೬-೧೭)

೬. ಬಿಲ್‌ರ ಸಾಮಾಜಿಕ ಅವನತಿಯ ಎರಡನೆಯ ಘಟ್ಟ (ಕ್ರಿ. ಶ. ೧೫-೧೭)

೭. ಬಿಲ್‌ರ ಕಪ್ಪು ಅಥವಾ ಕತ್ತಲೆಯುಗ (ಕ್ರಿ. ಶ. ೧೮-೧೯)

೮. ಬ್ರಿಟಿಷರ ಆಳ್ವಿಕೆಯಲ್ಲಿ ಬಿಲ್‌ರು

ಹೀಗೆ ಅವರು ಬಿಲ್‌ರ ಸಾಮಾಜಿಕವಾದ ಜೀವನವು ಐತಿಹಾಸಿಕವಾಗಿ ಬೆಳೆದುಬಂದ ರೀತಿಯನ್ನು ವಿವಿಧ ವಿಭಾಗ ಕ್ರಮಗಳಲ್ಲಿ ಅಧ್ಯಯನ ಮಾಡುತ್ತಾರೆ. ಬಿಲ್‌ರು ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಅನುಭವಿಸುತ್ತಿರುವ ಸ್ಥಿತ್ಯಂತರಗಳನ್ನು ದಾಖಲಿಸುತ್ತಾರೆ.

ಬಿಲ್‌ರ ಬಗ್ಗೆ ಸಾಕಷ್ಟು ಮಿತ್‌ಗಳು ಉಗಮಿಸಿವೆ. ಈ ಮಿತ್‌ಗಳನ್ನು ಬಿಲ್‌ರು ಸಾಕಷ್ಟು ಹೇಳುತ್ತಾರೆ. ಇಂತಹ ಮಿತ್‌ಗಳನ್ನು ಅನೇಕ ವಿದ್ವಾಂಸರು ತಮ್ಮ ಕೃತಿಗಳಲ್ಲಿ ದಾಖಲಿಸಿದ್ದಾರೆ. ಇದರಿಂದಾಗಿ ಬಿಲ್‌ರ ಸಾಮಾಜಿಕ ಜೀವನವೇ ಅವರ ಸಾಂಸ್ಕೃತಿಕ ಜೀವನವನ್ನು ರೂಪಿಸಿದೆ ಎಂಬ ಅಭಿಪ್ರಾಯಕ್ಕೆ ಬರಬಹುದು. ಸ್ಕಂದಪುರಾಣದ ಮಿತ್, ಶಿವ-ಋಷಿ-ಅರಣ್ಯದೇವ-ಮಗುವಿನ ಮಿತ್, ಹಾಗೂ ರಾಮ-ಅಗಸ-ಮೀನು-ಸಹೋದರಿ(ಹೆಂಡತಿ)-ಮಗನ ಮಿತ್‌ಗಳು ಬಿಲ್‌ರ ಉಗಮದ ಬಗ್ಗೆ ಭಿನ್ನವಾದ ಅಭಿಪ್ರಾಯಗಳನ್ನು ತಾಳಿವೆ. ಇದು ಅವರ ವಿಶಿಷ್ಟತೆಯನ್ನು ಹೇಳಬಹುದಲ್ಲದೆ, ಬಿಲ್‌ರ ನಿಜವಾದ ಮೂಲದ ಬಗ್ಗೆ ಒಮ್ಮತವನ್ನು ಹೇಳಿದಂತಾಗುವುದಿಲ್ಲ.

ಈ ಹಿನ್ನೆಲೆಯಲ್ಲಿಯೇ ಬಿಲ್‌ರ ಬಗ್ಗೆ ಅನೇಕ ಅಧ್ಯಯನಗಳು ನಡೆದಿವೆ. ಅವರ ಸಮಾಜಿಕ ಮತ್ತು ಸಾಂಸ್ಕೃತಿಕ ನೆಲೆಯಿಂದಾಗಿ ಅವರ ಚಿತ್ರಕಲೆಯನ್ನು ವಿಶ್ಲೇಷಿಸಿಕೊಳ್ಳುವ ಅಗತ್ಯವಿದೆ. ಅವರ ಚಿತ್ರಕಲೆಯು ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕನ್ನು ಬಿಟ್ಟುಕೊಟ್ಟಿಲ್ಲ. ಹೀಗಾಗಿ ಬಿಲ್‌ರ ಬಗ್ಗೆ ಬಂದಿರಬಹುದಾದ ಅಧ್ಯಯನಗಳು ಹೆಚ್ಚು ಕಾವ್ಯ, ಪುರಾಣ, ಚರಿತ್ರೆಯನ್ನು ಆಧರಿಸಿವೆ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಯನವು ಚಿತ್ರಕಲೆಯನ್ನು ವಿಭಿನ್ನವಾಗಿ ಅಧ್ಯಯನ ಮಾಡಲಾಗುತ್ತದೆ. ಅವರ ಚಿತ್ರಕಲೆಗೂ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿಗೂ ಆಂತರಿಕ ಮತ್ತು ಅವಿನಾಭಾವ ಸಂಬಂಧವಿದೆ. ಆದ್ದರಿಂದ ಮೊದಲಿಗೆ ಅವರ ಸಾಮಾಜಿಕ ಮತು ಸಾಂಸ್ಕೃತಿಕ ಜೀವನವನ್ನು ವಿಶ್ಲೇಷಿಸಲಾಗಿದೆ.

### ೪.೨ ಬಿಲ್‌ರ ಭಾಷೆ

ಜಾಬುವಾ ಬಿಲ್‌ರು ಮಾತನಾಡುವುದು 'ಬಿಲಿ' ಎಂಬ ಆಡುಭಾಷೆ. ಇದೊಂದು ಮಿಶ್ರಸ್ವರೂಪದ ಭಾಷೆಯಾಗಿದೆ. ಎಸ್. ವರ್ಮಾರವರ ಪ್ರಕಾರ ಇವರ ಭಾಷೆಯ ಕೆಲವು ವೈಶಿಷ್ಟ್ಯವಾದ ಲಕ್ಷಣಗಳು 'ರಾಜಸ್ಥಾನಿ' ಮತ್ತು ತುಂಬಾ ವಿಶೇಷವಾಗಿ 'ನಿರ್ಮಾಡಿ' ಜೊತೆಗೆ

ಹೋಲುತ್ತದೆ. ಎಂದು ಹೇಳುತ್ತಾರೆ.[೬] ಬಿಲ್‌ರ ಆಡುಭಾಷೆಯ ಸ್ವರೂಪ ನಿರಂತರವಾಗಿ ರಾಜಸ್ಥಾನಿ, ಗುಜರಾತಿ, ಕಾಂದೇಶಿ ಮತ್ತು ಮರಾಠಿ ಭಾಷೆಗಳ ಪ್ರಭಾವ ಮತ್ತು ಸಂಬಂಧವಿದೆ. ಇವರ ಭಾಷೆಯು 'ಬಿಲ್ ಭಾಷೆ' ಯೆ ಆಗಿದೆ. ನೆರೆಯ ಬುಡಕಟ್ಟುಗಳ ಭಾಷೆಗಳನ್ನು ಅವರ ಬುಡಕಟ್ಟು ಹೆಸರಿನ ಮೇಲೆಯೇ ಗುರುತಿಸಲಾಗುತ್ತದೆ. ಬಿಲ್‌ರ ಉಪಭಾಷೆಯನ್ನು ದಕ್ಷಿಣ ರಾಜಸ್ಥಾನದ ಬಿಲ್‌ರು ಮಾತನಾಡುತ್ತಾರೆ. ಅವರಿಗೆ ರಾಜಸ್ಥಾನದ ಸ್ಥಳೀಯ ಭಾಷೆಯ ಪ್ರಭಾವವಾಗಿರುವುದು ಸಹ ಕಂಡುಬರುತ್ತದೆ.

ಇವರ ಭಾಷೆಯು ವಿಶಿಷ್ಟವಾಗಿರುವುದರಿಂದಲೇ ಮೌಖಿಕವಾದ ಸಾಹಿತ್ಯವನ್ನು ಹೊಂದಿದ್ದಾರೆ. ಅನೇಕ ಮಿತ್‌ಗಳು ಜಾನಪದೀಯ ನೆಲೆಯಲ್ಲಿ ಅವರ ಜೀವನದ ತುಂಬಾ ಆವರಿಸಿಕೊಂಡಿದೆ. ಹುಟ್ಟಿನ ಹಾಡುಗಳು ತಾಯಿ-ಮಗುವಿನ ಸಂಬಂಧವನ್ನು ಹೇಳುತ್ತವೆ. ತಾಯಿ ಮತ್ತು ಮಗು ನಡುವಿನ ವಾತ್ಸಲ್ಯ ಮತ್ತು ಪ್ರೀತಿಯನ್ನು ಹಾಡುಗಳು ಗುನುಗುತ್ತವೆ. ಅಲ್ಲದೇ ಅವರಲ್ಲಿ ಮದುವೆಯ ಹಾಡುಗಳಿವೆ. ಈ ಹಾಡುಗಳಲ್ಲಿ ತಾಯಿ ಮತ್ತು ಮಗಳ ಸಂಬಂಧವನ್ನು ಭಾವನಾತ್ಮಕವಾಗಿ ಹಾಡುತ್ತಾರೆ. ದೇವರನ್ನು ಬಣ್ಣಿಸುವ ಹಾಡುಗಳು ಇವೆ. ಇವೆಲ್ಲವು ಬಿಲ್ ಭಾಷೆಯಲ್ಲಿಯೇ ಹಾಡುತ್ತಾರೆ.

ಜಾರ್ಜ್ ಗ್ರಿಯರ್‌ಸನ್ 'ಬಿಲ್ ಭಾಷೆಗೆ ಹೆಚ್ಚಿನ ಸಂದರ್ಭಗಳಲ್ಲಿ ಮರಾಠಿಯು ಒಂದು ರೀತಿಯಲ್ಲಿ ಬಾಹ್ಯವಾಗಿ ಪ್ರಭಾವಿಸಿದೆ. ಉಳಿದ ಇತರ ಉಪಭಾಷೆಯ ಪಾತ್ರ ಅಥವಾ ಕೆಲವು ಅಂಶಗಳು ಗುಜರಾತಿಯದ್ದಾಗಿಯೇ ಇರುತ್ತವೆ' ಎಂದು ಹೇಳುತ್ತಾರೆ. ಆದರೂ ಈ ಉಪಭಾಷೆ ಆರ್ಯರದ್ದಾಗಿಯೇ ಇಂದಿಗೂ ಇದೆ. ಕೆಲವೊಂದು ಶಬ್ದಗಳು ಮತ್ತು ಅಂಶಗಳು ಮಾತ್ರ ಆರ್ಯನೇತರವಾಗಿವೆ. ಇವರ ಭಾಷೆಯಲ್ಲಿ ಕೆಲವೊಂದು ಕಡೆ ವ್ಯಾಕರಣದಲ್ಲಿ ದ್ರಾವಿಡ ಭಾಷೆಯ ರೂಪಗಳು ಕಂಡುಬರುತ್ತವೆ. ಈ ನೆಲೆಯಿಂದ ನೋಡಿದಾಗ ದ್ರಾವಿಡ ಭಾಷೆಯೊಂದಿಗೆ ಸಂಪರ್ಕ ಹೊಂದಿರಬಹುದೆಂದು ಅನ್ನಿಸುತ್ತದೆ.

ಪ್ರಾದೇಶಿಕವಾಗಿ ರಾಜಸ್ಥಾನ, ಮಹಾರಾಷ್ಟ್ರ, ಮಧ್ಯಪ್ರದೇಶ, ಗುಜರಾತನ ಗಡಿಭಾಗಗಳಲ್ಲಿ ಬಿಲ್‌ರು ವಾಸಿಸುವರು. ಹಾಗಾಗಿಯೇ ಬಿಲ್ ಭಾಷೆಯು ಗುಜರಾತಿ, ಕಾಂದೇಶಿ, ಮರಾಠಿ ಮತ್ತು ರಾಜಸ್ಥಾನಿ ಭಾಷೆಗಳ ನಡುವೆ ಒಂದು ರೀತಿಯ ಸರಪಳಿಯಂತೆ ಸೇರಿಕೊಂಡಿದೆ. ಬಿಲಿ ಉಪಭಾಷೆಗೆ ಮರಾಠಿಯು ಬಾಹ್ಯವಾಗಿ ಪ್ರಭಾವ ಬೀರಿದ್ದರೆ, ಉಳಿದ ಇತರ ಕೆಲವು ಸಾಮಾನ್ಯ ಅಂಶಗಳು ಗುಜರಾತಿ ಭಾಷೆಯವಾಗಿಯೇ ಉಳಿಯುತ್ತದೆ. ಈ ಹಿನ್ನೆಲೆಯಲ್ಲಿ ಮಜುಮದಾರರು 'ಇವರ ಭಾಷೆಯು ಒಂದು ಸಂಪೂರ್ಣ ಕಮಾನನ್ನು ಹೊಂದಿದೆ ಎನ್ನುತ್ತಾರೆ. ಈ ಕಮಾನು ರಚನೆಯಾಗಲು ಎರಡು ಕಂಬಗಳು ಅಗತ್ಯವಾಗಿ ಬೇಕಾಗುತ್ತದೆ. ಅದರಲ್ಲಿ ಒಂದು ಕಂಬ ಮೂಲಭಾರತ ನಿವಾಸಿಗಳದ್ದು, ಮತ್ತೊಂದು ಆರ್ಯರದ್ದು' ಎನ್ನುತ್ತಾರೆ.

ಹೀಗೆ ಬಿಲ್‌ರ ಭಾಷೆಯ ಬೆನ್ನುಹತ್ತಿದರೆ ಸಂಸ್ಕೃತ, ದ್ರಾವಿಡ, ಆರ್ಯ ಹೀಗೆ ಬೇರೆ ಬೇರೆ ಭಾಷಾ ಸಮುದಾಯದ ಕಡೆಯಲ್ಲಾ ಚಲಿಸಬೇಕಾಗುವುದು. ಬಿಲ್‌ರ ಭಾಷೆಯನ್ನು ಕುರಿತ ವೈಜ್ಞಾನಿಕ, ವೈಚಾರಿಕವಾದ ಅಧ್ಯಯನವನ್ನು ಇಲ್ಲಿ ಮಾಡಲಾಗಿಲ್ಲ. ಅವರ ಸಾಂಸ್ಕೃತಿಕ ಜೀವನಕ್ಕೆ ಭಾಷೆಯು ಬಹುಮುಖ್ಯವಾಗಿತ್ತೆಂಬುವುದು ಗಮನಿಸುವ ಒಂದು ಪ್ರಯತ್ನ. ಬಿಲ್ ಭಾಷೆಯೊಂದನ್ನೇ ಮಾತನಾಡುತ್ತಿರುವ ಬಿಲ್‌ನ ಉಪಪಂಗಡವಾದ ಜನಸಮೂದಾಯವಿದೆ. ರಾಥವಾ ಅವರು ಹಿಂದಿಯನ್ನು ಕಲಿಯದೇ ಇರುವುದರಿಂದ ಭೂಪಾಲ ಮಾನವ ಸಂಗ್ರಹಾಲಯದಲ್ಲಿ ಉದ್ಯೋಗ ವಂಚಿತವಾಗಿದ್ದಾರೆ. ಇದಕ್ಕೆ ಅಪವಾದ ಎನ್ನುವಂತೆ ಹರಿಸಿಂಗ್ ಎನ್ನುವ ಒಬ್ಬನೇ ಒಬ್ಬ ವ್ಯಕ್ತಿ ಮಾತ್ರ ಉದ್ಯೋಗ ಪಡೆದಿದ್ದಾನೆ. ಅವನಿಗೆ ಹಿಂದಿ ಈಗಲೂ ಬರುವುದಿಲ್ಲ. ಬಿಲ್ ಭಾಷೆಯ ಜೊತೆಗೆ ಹಿಂದಿಯನ್ನು ಬಿಲ್ ಬುಡಕಟ್ಟಿನ ಬೂರಿಬಾಯಿ, ಗಂಗೂಬಾಯಿ, ಪೇಮಾ ಪತ್ಯಾ, ಸುಭಾಷ ಬಿಲ್ ಮುಂತಾದವರು ಕಲಿತಿದ್ದಾರೆ. ಇದರಿಂದಾಗಿಯೇ ಅವರು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದ ಸಮ್ಮೇಳನಗಳಲ್ಲಿ ಭಾಗಿಯಾಗಿದ್ದಾರೆ.

ಭಾಷೆಯ ಸಂವಹನದಿಂದಾಗಿ ಇವರಿಗೆ ಸೃಜನಶೀಲವಾದಂತಹ ಚಿತ್ರಗಳನ್ನು ಬರೆಯಲು ಸಾಧ್ಯವಾಗಿದೆ. ತಮ್ಮ ಜೀವನ ಚರಿತ್ರೆಯನ್ನು ಚಿತ್ರಗಳಲ್ಲಿ ಮೂಡಿಸಿರುವುದು, ಜಾತ್ರೆಗಳ ಸನ್ನಿವೇಶವನ್ನು ಮೂಡಿಸಿರುವುದು, ಅವು ಚಿತ್ರಕೃತಿಗಳಾಗಿ ಹೊರಹೊಮ್ಮಿವೆ. ಇದಕ್ಕೆ ಕಾರಣ ಭೂಪಾಲ ಮಾನವ ಸಂಗ್ರಹಾಲಯದ ಅಧಿಕಾರಿಗಳು. ಈ ಅಧಿಕಾರಿಗಳ ಮತ್ತು ಬಿಲ್‌ರ ನಡುವಿನ ಭಾಷಾ ಸಂವಹನ ಸಾಧ್ಯವಾಗಿದ್ದಕ್ಕೆ ಪಿಥೋರಾ ಚಿತ್ರಕಲೆಯ ವೈವಿಧ್ಯತೆ ಇಂದು ಅಂತರಾಷ್ಟ್ರೀಯ ಮಟ್ಟಕ್ಕೆ ತಲುಪಿದೆ.

### ೪.೩ ಕುಟುಂಬ

ಬಿಲ್‌ರು ತಮ್ಮ ಕುಟುಂಬಕ್ಕೆ 'ವಸಿಲು' ಎಂದು ಕರೆಯುತ್ತಾರೆ. ಕುಟುಂಬವು ಏಕಪಕ್ಷೀಯವಾಗಿ ಸಂಬಂಧಿತ ವ್ಯಕ್ತಿಗಳ ಗುಂಪಾಗಿರುತ್ತವೆ. ಎಲ್ಲಾ ಬುಡಕಟ್ಟು ಸಮುದಾಯಗಳಲ್ಲಿರುವಂತೆ, ಬಿಲ್ ಬುಡಕಟ್ಟುವಿನ ಕುಟುಂಬವು ಸಾಮಾಜಿಕ ಜೀವನಕ್ಕೆ ಆಧಾರವಾಗಿದೆ. ಬಿಲ್ ಕುಟುಂಬವು ವೈಯಕ್ತಿಕವಾಗಿ ಮತ್ತು ಸಮಾಜಕ್ಕಾಗಿ ಹಲವಾರು ರೀತಿಯಲ್ಲಿ ಸಾಂಸ್ಕೃತಿಕ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿವೆ. ಇದು ಬಾಲ್ಯದ ದಿನಗಳನ್ನು ಮತ್ತು ಯುವಕರ ರಕ್ಷಣೆ ಮತ್ತು ಪೋಷಣೆಯನ್ನು ಮಾಡುತ್ತದೆ. ಅಲ್ಲದೇ ಇದು ಪುರುಷರು ಮತ್ತು ಹೆಣ್ಣು ಮಕ್ಕಳ ಮದುವೆಯ ಬಾಂಧವ್ಯವನ್ನು ಒದಗಿಸುತ್ತದೆ. ತಮ್ಮ ಬುಡಕಟ್ಟಿನ ಬಗೆಗೆ ಪ್ರಾಥಮಿಕ ಜ್ಞಾನ, ಸಾಮಾಜಿಕ ಪದ್ಧತಿ ಮತ್ತು ಸಂಪ್ರದಾಯಗಳನ್ನು ಯುವ ಪೀಳಿಗೆಯು ಅನುಸರಿಸಬೇಕಾದ ಪ್ರಾಥಮಿಕ ರೀತಿ ನೀತಿಗಳನ್ನು ಹೇಳಿಕೊಡುವ ಸ್ಥಳವಾಗಿದೆ. ಕುಟುಂಬವು ಪುರುಷ ಮತ್ತು ಮಹಿಳೆ ಹಾಗೂ ಅವರ ಅವಲಂಬಿತರ ನಡುವೆ ಕೂಡಿ ಬಾಳುವ, ಕೂಡಿ ಕೆಲಸ ಮಾಡುವ ಸಹಕಾರಿ ವ್ಯವಸ್ಥೆಯನ್ನು ಹೊಂದಿದೆ.

ಬಿಲ್‌ರಲ್ಲಿ ಕುಟುಂಬದ ಯಜಮಾನಿಕೆ ತಂದೆಯದ್ದೇ ಆಗಿರುತ್ತದೆ. ಹಾಗಾಗಿ ಕುಟುಂಬದ ಜವಾಬ್ದಾರಿ ಮತ್ತು ನಿರ್ವಹಣೆಗಾಗಿ ನಿಯಮ, ಕಟ್ಟಳೆ ಮತ್ತು ವ್ಯವಸ್ಥೆಯನ್ನು ಕಟ್ಟು ನಿಟ್ಟಾಗಿ ನಿಭಾಯಿಸುತ್ತಾನೆ. ಮನೆಯ ಎಲ್ಲಾ ಮೂಲದ ಆದಾಯವನ್ನು ಸಂಗ್ರಹಿಸಿ, ಖರ್ಚುಗಳನ್ನು ನಿಭಾಯಿಸುತ್ತಾನೆ. ಧಾರ್ಮಿಕ ಆಚರಣೆಗಳನ್ನು ನಿರ್ವಹಿಸುವ ಇಲ್ಲವೇ ನಿರ್ವಹಿಸದೇ ಇರುವ ಬಗ್ಗೆ ನಿರ್ಧಾರಗಳನ್ನು ತೆಗೆದುಕೊಳ್ಳುವ ಅಧಿಕಾರವನ್ನು ಹೊಂದುತ್ತಾನೆ. ಪ್ರಾಚೀನದಿಂದಲೂ ಬಿಲ್ ಕುಟುಂಬವು ಪ್ರತ್ಯೇಕತಾವಾದವನ್ನು ಆಧರಿಸುತ್ತದೆ. ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ವಿರಳವಾಗಿ ಪ್ರತಿನಿಧಿಸುತ್ತದೆ. ಮದುವೆಯಾದ ನಂತರ ಮಗನು ತನ್ನ ಹೆಂಡತಿಯೊಂದಿಗೆ ಬೇರೆ ಮನೆಯಲ್ಲಿ ವಾಸಿಸಬೇಕು. ಆದ್ದರಿಂದಲೇ ಬಹುತೇಕ ಬಿಲ್ ಕುಟುಂಬ ಗಂಡ–ಹೆಂಡತಿ–ಮಕ್ಕಳ ಒಂದು ಚಿಕ್ಕ ಕುಟುಂಬವಾಗಿರುತ್ತದೆ. ಕುಟುಂಬವು ಅನೇಕ ಸಂಬಂಧಿತ ವ್ಯಕ್ತಿಗಳ ಗುಂಪಾಗಿರುತ್ತದೆ. ಅವರೆಲ್ಲರು ಒಂದೆಡೆ ವಾಸಿಸಬಹುದು. ಆದರೆ ಒಂದೇ ಮನೆಯಲ್ಲಿ ಅಲ್ಲ. ಅದು ತಂದೆಯ ಮೂಲಕ ಕೆಲವು ಸಂದರ್ಭಗಳಲ್ಲಿ ಒಂದೇ ಸೂರಿನಲ್ಲಿ ಸೇರಲು ಅವಕಾಶವಿದೆ. ಮಕ್ಕಳು ದೊಡ್ಡವರಾದ ಮೇಲೆ ಬೇರೆ ಕುಟುಂಬ ಮಾಡಬಹುದು ಅಥವಾ ಮಾಡದೇ ಇರಲೂಬಹುದು. ಒಂದು ವೇಳೆ ಬಿಲ್‌ರ ಮಗಳೋ, ಸಹೋದರಿಯೋ ತೀರಿ ಹೋದರೆ ಅವರ ಮಕ್ಕಳನ್ನು ತಂದೆ–ಅಣ್ಣ ಸಾಕಬೇಕಾಗುತ್ತದೆ. ಬಿಲ್ ಇಂತಹ ಮಕ್ಕಳನ್ನು ಎಂಟು–ಹತ್ತು ವರ್ಷ ಬೆಳೆಸುತ್ತಾರೆ. ನಂತರ ಆ ಮಕ್ಕಳು ತಂದೆಯ ಮನೆಗೆ ಹೋಗುತ್ತಾರೆ.

ಕುಟುಂಬದಲ್ಲಿ ತಾಯಿಗೂ ಕೂಡ ಮಹತ್ತರವಾದ ಸ್ಥಾನಮಾನವಿದೆ. ಅವಳು ಮನೆಯ ಜೀವ ಮತ್ತು ಬೆನ್ನೆಲುಬಿನಂತಿರುತ್ತಾಳೆ. ಯಾವುದೇ ಅಧಿಕಾರವಿಲ್ಲದಿದ್ದರೂ ತನ್ನದೇ ಆದ ಜ್ಞಾನ, ಅನುಭವ ಮತ್ತು ತಂತ್ರದಿಂದಾಗಿ ಕೆಲಸ ಮಾಡುತ್ತಾಳೆ. ಮಕ್ಕಳು ಮತ್ತು ಸೊಸೆಯಂದಿರಿಂದ ಕೆಲಸವನ್ನು ತೆಗೆಸುತ್ತಾಳೆ. ಅವಳು ಮನೆಯ ಯಜಮಾನನಿಗೆ ಮಾರ್ಗದರ್ಶಿಯಾಗಿ, ಹೆಂಡತಿಯಾಗಿ, ಮಕ್ಕಳಿಗೆ ತಾಯಿಯಾಗಿ ತನ್ನ ಜವಾಬ್ದಾರಿಯನ್ನು ನಿಭಾಯಿಸುತ್ತಾಳೆ. ಮಗಳಿಗೆ ಮತ್ತು ಸೊಸೆಯಂದಿರಿಗೆ ಮನೆ ಕೆಲಸ ಹಂಚುವ ಅಥವಾ ಮಾಡಿಸಲು ಸಹಾಯ ಮಾಡುತ್ತಾಳೆ.

ಬಿಲ್ ಬುಡಕಟ್ಟುವಿನಲ್ಲಿ ಮಹಿಳೆಯ ಪಾತ್ರವು ತುಂಬ ಮಹತ್ವದ್ದಾಗಿದೆ. ಅವರು ಬಹುತೇಕ ತಮ್ಮ ಜೀವನದ ನಡಿಗೆಯಲ್ಲಿ ಮತ್ತು ವಾಕ್ಚಾತುರ್ಯದಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ಯಾವುದೇ ಇತರ ಬುಡಕಟ್ಟು ಅಥವಾ ಜಾತಿಗಳ ಮಹಿಳೆಯರಂತೆ, ಜಾಬುವಾದ ಬಿಲ್ ಮಹಿಳೆಯರು ಮೂರು ಪ್ರಮುಖ ಹಂತಗಳಲ್ಲಿ ಹಾದು ಹೋಗುತ್ತಾರೆ. ಒಂದು ಬಾಲಕಿಯಾಗಿ, ಎರಡು ತಾಯಿಯಾಗಿ ಮತ್ತು ಮೂರು ಗೃಹಿಣಿಯಾಗಿ.

ಬಾಲಕಿಯಾಗಿ ಅವಳು ಕುಟುಂಬದೊಳಗೆ ಕೆಲಸ ಮಾಡುತ್ತಲೇ ಬೆಳೆಯುತ್ತಾಳೆ. ಬಿಲ್ ಸಂಸ್ಕೃತಿಯನ್ನು ನೋಡುತ್ತಾ, ಕಲಿಯುತ್ತಾ ಎಲ್ಲದರಲ್ಲಿಯೂ ಭಾಗವಹಿಸುತ್ತಾಳೆ. ಮನೆಯ

ಒಳಗಿನ ಕೆಲಸಗಳಿಗೆ ತಾಯಿ, ಅತ್ತಿಗೆ ಅವರಿಗೆಲ್ಲ ಸಹಕಾರಿಯಾಗುತ್ತಾಳೆ. ಹಬ್ಬ, ಉತ್ಸವ ಮುಂತಾದವುಗಳಲ್ಲಿ ಇವಳಿಗೆ ಅತೀ ಪ್ರಮುಖ ಪಾತ್ರವಿರುತ್ತದೆ. ತನ್ನ ಏಳು–ಎಂಟನೇಯ ವಯಸ್ಸಿನಲ್ಲಿ ತಾಯಿಯ ಅನುಪಸ್ಥಿತಿಯಲ್ಲಿ ತಮ್ಮ–ತಂಗಿಯರನ್ನು ಪಾಲನೆ ಮಾಡುತ್ತಾಳೆ. ಆಕೆ ಹದಿಮೂರು ವರ್ಷದವಳಾದಾಗ ಮನೆಯ ಕೆಲಸಗಳಲ್ಲಿ ಭಾಗಿಯಾಗುತ್ತಾಳೆ.

ಬಿಲ್ ಮಹಿಳೆಯು ಮನೆಯಲ್ಲಿ ಕೆಲಸ ಮಾಡುವುದರ ಜೊತೆಗೆ ಗಂಡನೊಂದಿಗೆ ಹೊಲಕ್ಕೂ ಹೋಗಿ ಕೆಲಸ ಮಾಡುತ್ತಾಳೆ. ಜಾನುವಾರುಗಳನ್ನು ಮೇಯಿಸುವುದು, ಹಾಲು ಹಿಂಡುವುದು, ಸಗಣಿಯನ್ನು ಸಂಗ್ರಹಿಸಿ ಕುಳ್ಳನ್ನು ತಯಾರಿಸುವುದು. ಮನೆಗೆ ಬಳಸಲು ನೀರನ್ನು ಕೆರೆಯಿಂದ ಮಣ್ಣಿನ ಮಡಿಕೆಯಲ್ಲಿ ತರುವುದು, ಕಟ್ಟಿಗೆಯನ್ನು ಆರಿಸಿ ಅಥವಾ ಕಡಿದುಕೊಂಡು ತರುವುದು. ಹೀಗೆ ಅನೇಕ ರೀತಿಯ ಕೆಲಸಗಳನ್ನು ಮಾಡುವುದರಲ್ಲಿ ನಿರಂತರವಾಗಿ ನಿರತಳಾಗಿರುತ್ತಾಳೆ. ಅಲ್ಲದೆ ಗಂಡಿಗೆ ನೆರವಾಗುವ ಸಲುವಾಗಿ ಜಾನಪದ ಕೃಷಿ, ಗ್ರಾಮೀಣ ಅರಣ್ಯ ಮತ್ತು ಇತರ ಕರ್ತವ್ಯಗಳನ್ನು ನಿಭಾಯಿಸುತ್ತಾಳೆ.

**ಮದುವೆ:**

ಬಿಲ್‌ರು ಸಾಮಾನ್ಯವಾಗಿ ಬಾಲ್ಯವಿವಾಹವನ್ನು ಪ್ರೋತ್ಸಾಹಿಸುವುದಿಲ್ಲ. ೨೦ ರಿಂದ ೨೫ ರ ವಯಸ್ಸಿನ ವರೆಗಿನ ಯುವಕ ಯುವತಿಯರು ಈಗಲೂ ಕಾಣಸಿಗುತ್ತಾರೆ. ಬಿಲ್ ಸಮುದಾಯದಲ್ಲಿ ಮದುವೆಯು ಹುಡುಗ ಮತ್ತು ಹುಡುಗಿಯ ತಂದೆಯರ ಮಧ್ಯಸ್ಥಿಕೆಯಲ್ಲಿ ನಡೆಯುತ್ತದೆ. ಅವರ ಮದುವೆಯಲ್ಲಿ ವರನ ಕಡೆಯವರು 'ವಧು ದಕ್ಷಿಣೆ' ಕೊಡುವ ಪದ್ಧತಿಯಿದೆ. ಇದನ್ನು ನಿಶ್ಚಿತಾರ್ಥ ದಿನದಂದು 'ದಪ' ವನ್ನು ಹಣದ ರೂಪದಲ್ಲಿ ಮಾತಾಡುತ್ತಾರೆ. ವರನ ತಂದೆಯು ದಪವನ್ನು ವಧುವಿನ ತಂದೆಗೆ ತಲುಪಿಸಬೇಕಾಗುತ್ತದೆ. ವಿಶೇಷವೇನೆಂದರೆ ನಿಶ್ಚಿತಾರ್ಥದ ಸಂದರ್ಭದಲ್ಲಿ ವರನ ತಂದೆ, ಅವರ ಸಂಬಂಧಿಕರು ಮತ್ತು ಗೆಳೆಯರು ವಧುವಿನ ಊರಿಗೆ ಭೇಟಿ ಕೊಡುತ್ತಾರೆ. ಹತ್ತಿರದ ಗಿಡ ಅಥವಾ ಹೊಲದಲ್ಲಿ ಮಾತುಕತೆ ಪ್ರಾರಂಭವಾಗುತ್ತದೆ. ಅದೇ ಸಮಯದಲ್ಲಿ ಹೆಣ್ಣು ಮಗಳ ಕಡೆಯವರು ಒಣ ಹುಲ್ಲನ್ನು ತಂದು ಮಧ್ಯದಲ್ಲಿ ಹರಡುತ್ತಾರೆ. ಈ ಸೂಚನೆಯೇ ನಿಶ್ಚಿತಾರ್ಥದ ಆರಂಭದ ಸಂಕೇತವಾಗಿದೆ.

ಮಾತುಕತೆಯನ್ನು ತಂಬಾಕು ಸವಿಯುತ್ತ ಹಿರಿಯರು ಆರಂಭಿಸುತ್ತಾರೆ. ಇಲ್ಲಿ ವಧು ದಕ್ಷಿಣೆಗೆ ಸಂಬಂಧಿಸಿದಂತೆ ಎರಡೂ ಕಡೆಯವರು ಚರ್ಚೆ ನಡೆಸುತ್ತಾರೆ. ಈ ಚರ್ಚೆಯಲ್ಲಿ ವಧುವಿಗೆ ಸಲ್ಲಿಸುವ ದಕ್ಷಿಣೆ ಸರ್ವ ಸಮ್ಮತವಾಗಿ ನಿಗದಿಯಾಗುತ್ತದೆ. ಅವರು ವರನ ಗುಂಪಿಗೆ "ಡೆಚ್" ಎಂದು, ವಧುವಿನ ಗುಂಪಿಗೆ "ದಪನ್" ಎಂದು ಸಂಬೋಧಿಸುತ್ತಾರೆ. ವಧುದಕ್ಷಿಣೆಯನ್ನು ನಿರ್ಧರಿಸಿದ ಮೇಲೆ ವರನ ತಂದೆಯು ಮಧ್ಯಸ್ಥನೋರ್ವನ ಮೂಲಕ ವಧುವಿನ ಗುಂಪಿಗೆ ಮುಂಗಡವಾಗಿ ಸ್ವಲ್ಪ ಹಣವನ್ನು ತಲುಪಿಸುತ್ತಾನೆ. ಈ ಹಣವು ಮಧ್ಯಸ್ಥನಿಂದ ವಧುವಿನ ತಂದೆಗೆ ತಲುಪುತ್ತದೆ.

ಮದುವೆಯ ಊಟದ ಖರ್ಚು ವೆಚ್ಚವನ್ನೆಲ್ಲ ವರನ ತಂದೆಯೇ ನಿಭಾಯಿಸಬೇಕಾಗುತ್ತದೆ. ವರ–ವಧುವಿಗೆ ಪರಸ್ಪರ ಕುಟುಂಬಗಳೆರಡು ಬಟ್ಟೆ, ಆಭರಣಗಳನ್ನು ತರುವ ಪದ್ಧತಿಯೂ ಇದೆ. ಇಂತಹ ಮದುವೆಯ ಸಂದರ್ಭದಲ್ಲಿಯೇ ಬಿಲ್‌ರ ರಾಥವಾ ಪಂಗಡವು ಮನೆಯ ಗೋಡೆಯನ್ನು ಶುದ್ಧಗೊಳಿಸಿ, ಗೋಡೆಯ ಮೇಲೆ ಪಿಥೋರಾ ಚಿತ್ರಕಲೆಯನ್ನು ಬಿಡಿಸಿ, ಬಡವಾನಿಂದ ಪೂಜೆ, ಭಜನೆ ಇತ್ಯಾದಿಗಳನ್ನು ಮಾಡಿ ಸಂಭ್ರಮಿಸುತ್ತಾರೆ.

ಬಿಲ್‌ರು ಎಪ್ರಿಲ್ ಮತ್ತು ಮೇ ತಿಂಗಳಿನಲ್ಲಿ ಮದುವೆ ಕಾರ್ಯಗಳನ್ನು ಮಾಡುತ್ತಾರೆ. ಇದಕ್ಕೆ ಕಾರಣವೇನೆಂದರೆ ಜುಲೈ ಮತ್ತು ಅಗಷ್ಟ ತಿಂಗಳಿನಲ್ಲಿ ವ್ಯವಸಾಯಕ್ಕೆ ತೊಡಗುತ್ತಾರೆ. ಈ ಜನಾಂಗದವರಿಗೆ ಮದುವೆಯು ಕುಟುಂಬದ ನಿರ್ವಹಣೆಯಲ್ಲಿ ಹೆಣ್ಣಿನ ಪಾತ್ರ ಮಹತ್ತರವಾದದ್ದೆಂದು ಅರಿತಿರುವುದನ್ನು ಗಮನಿಸಬಹುದು. ಅವರ ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿ ಅವಳ ಪಾತ್ರ ಗಣನೀಯವೆಂಬುವುದು ಅವರಿಗೆ ತಿಳಿದಿದೆ.

ಈ ಹಿನ್ನೆಲೆಯಲ್ಲಿ ಬಿಲ್ ಕುಟುಂಬವು ತನ್ನ ಸಾಮಾಜಿಕ ಮತ್ತು ಆರ್ಥಿಕ ಚಟುವಟಿಕೆಯಲ್ಲಿ ನಿರಂತರ ಶ್ರಮವಹಿಸುತ್ತದೆ. ಈ ಶ್ರಮವನ್ನು ಅವರು ಧಾರ್ಮಿಕ ಆಚರಣೆ, ಜಾನಪದ ನೃತ್ಯ, ಸಂಗೀತದಲ್ಲಿ ವಿರಮಿಸುತ್ತಾರೆ.

## ೪.೪ ಆಹಾರ ಪದ್ಧತಿ ಮತ್ತು ಮದ್ಯ (ಸಾರಾಯಿ)

ಬಿಲ್‌ರು ಮಿಶ್ರ ಆಹಾರ ಪದ್ಧತಿಯವರಾಗಿದ್ದಾರೆ. ಅವರು ಸಸ್ಯಾಹಾರಿಗಳೂ ಹೌದು, ಮಾಂಸಾಹಾರಿಗಳೂ ಹೌದು. ಅವರು ವ್ಯವಸಾಯ ಮಾಡುವುದರಿಂದ ತಾವು ಬೆಳೆದ ಆಹಾರಗಳನ್ನು ಸೇವಿಸುತ್ತಾರೆ. ಮತ್ತು ಬೇಟೆಯಾಡುವುದು ಅವರ ಕಸಬು ಆಗಿರುವುದರಿಂದ ಮಾಂಸಾಹಾರವನ್ನು ಸೇವಿಸುತ್ತಾರೆ. ಜಾಬುಬಾ ಪ್ರದೇಶದವರಾದ 'ದಿಲೀಪ ಬಿಲ್' ಮತ್ತು 'ಕಟ್ಟು ಬಿಲ್' ಅವರ ಪ್ರಕಾರ ಈ ಜನಾಂಗದವರು ಅನ್ನವನ್ನು ಸೇವಿಸುವುದು ಬಹಳ ಕಡಿಮೆ. ಅವರು ಮಕ್ಕಿ, ರೋಟಿ, ಮುಸುಕಿನ ಜೋಳದ ಆಹಾರವನ್ನು ಸೇವಿಸುತ್ತಾರೆ. ಹಬ್ಬದ ದಿನಗಳಲ್ಲಿ ಮಾತ್ರ ಅನ್ನವನ್ನು ಬಳಸುತ್ತಾರೆ. ಅತಿಥಿಗಳು ಮನೆಗೆ ಬಂದಾಗ ಗೋದಿಯಿಂದ ತಯಾರಿಸಿದ ಖಾದ್ಯಗಳನ್ನು ಸವಿಯುತ್ತಾರೆ. ದಿನಕ್ಕೆ ಮೂರು ಬಾರಿ ಆಹಾರ ಸೇವಿಸುತ್ತಾರೆ. ಅವರು ಹಿಂದಿನ ದಿನ ಸಾಯಂಕಾಲ ತಯಾರಿಸಿದ ಊಟವನ್ನು ಮರುದಿನ ಮುಂಜಾನೆಯೂ ಉಪಯೋಗಿಸುತ್ತಾರೆ. ಸಂಜೆ ಸಾಮಾನ್ಯವಾಗಿ ಊಟಕ್ಕೆ ರೋಟಿಯನ್ನು ಬಡಿಯುತ್ತಾರೆ. ರೋಟಿಯ ಹಿಟ್ಟನ್ನು ಮೋರ್ಯಾ, ಬಂಟಿ, ನಗ್ಲಿ ಅಥವಾ ಜುವಾರನಿಂದ ತಯಾರಿಸುತ್ತಾರೆ. ಹಿಟ್ಟನ್ನು ನಾದಿ, ಬಡಿದು ಬೆಂಕಿಯ ಮೇಲೆ ಸುಡುತ್ತಾರೆ. ಚಹಾವನ್ನು ತುಂಬಾ ಇಷ್ಟ ಪಡುತ್ತಾರೆ. ಚಹಾಕ್ಕೆ ಆಡಿನ ಅಥವಾ ಆಕಳಿನ ಹಾಲನ್ನು ಮಿಶ್ರಣ ಮಾಡಿ ಬಳಸುತ್ತಾರೆ.

ಬಿಲ್‌ರು ಮೆಕ್ಕೆಜೋಳ, ಜುವಾರ, ಭತ್ತ, ಗೋಧಿ, ಕೋಧ್ರಾ ಇತ್ಯಾದಿಗಳನ್ನು ಬೆಳೆದು ಇವನ್ನು ತಮ್ಮ ಆಹಾರ ಧಾನ್ಯಗಳಾಗಿ ಉಪಯೋಗಿಸುತ್ತಾರೆ. ದ್ವಿದಳ ಧಾನ್ಯ, ತವ್ವಾರ (ಬೇಳೆಕಾಳು)ಗಳನ್ನು ಸಾಂಬಾರಗಾಗಿ ಬಳಸುತ್ತಾರೆ. ಮುಂಜಾನೆಯ ಆಹಾರವಾಗಿ ಕೋಧ್ರಿಯನ್ನು ತಯಾರಿಸಿಕೊಳ್ಳುತ್ತಾರೆ. ಇದನ್ನು ಮೂರರಿಂದ ನಾಲ್ಕು ಬಾರಿ ತಣ್ಣೀರು ಹಾಗೂ ಬಿಸಿನೀರಿನಿಂದ ತೊಳೆದು ನಂತರ ಅದನ್ನು ಬೇಯುವ ತನಕ ಕುದಿಸುತ್ತಾರೆ. ನಂತರ ಕುದಿಯಿಂದ ಬಂದಂತಹ ನೀರಿನ ಗಂಜಿಗೆ 'ಪೇಜ್' ಎಂದು ಕರೆಯುತ್ತಾರೆ. ಅದನ್ನು ಮಕ್ಕಳು ಮತ್ತು ಬಾಣಂತಿಯರಿಗೆ ಕೊಡುತ್ತಾರೆ. ಇದರೊಂದಿಗೆ ರುಚಿ ಹೆಚ್ಚಿಸಲು ಬಂಡಿ ಅಥವಾ ಇಮ್ಲಿ ಕಿಚಡಿಯನ್ನು ಸೇವಿಸುತ್ತಾರೆ. ಬೇಳೆ ಇಲ್ಲದ ಸಂದರ್ಭದಲ್ಲಿ ತರಕಾರಿಯನ್ನು ಬಳಸುತ್ತಾರೆ.

ಪಕ್ಷಿಗಳ ಮೊಟ್ಟೆಗಳನ್ನು ಕುದಿಸಿ, ಪಲ್ಯದ ಮಾದರಿಯಲ್ಲಿ ಕಿಚಡಿಯ ಜೊತೆ ಸವಿಯುತ್ತಾರೆ. ಕೋಳಿ ಮತ್ತು ಬೇಟೆಯಾಡಿ ತಂದಂತಹ ಪಕ್ಷಿಗಳನ್ನು ಸುಟ್ಟು ತಿನ್ನುತ್ತಾರೆ. ಹಬ್ಬ, ಜಾತ್ರೆಯ ದಿನಗಳಲ್ಲಿ ಅಥವಾ ಅತಿಥಿಗಳು ಮನೆಗೆ ಬಂದಾಗ ಬೇಟೆಯಾಡುವ ಪದ್ಧತಿಯು ಇದೆ. ಆಗ ಬೇಟೆಯಿಂದ ತಂದಂತಹ ಪಕ್ಷಿಗಳನ್ನು ಬೆಂಕಿಯಲ್ಲಿ ಸುಟ್ಟು ಉಪ್ಪಿನ ಜೊತೆಗೆ ತಿನ್ನುತ್ತಾರೆ. ಹೆಚ್ಚಾಗಿ ಉಪ್ಪಿನ ನೀರಿನಲ್ಲಿ ಹಾಗೂ ಎಣ್ಣೆಯಲ್ಲಿ ಕುದಿಸಿ ಸೇವಿಸುತ್ತಾರೆ. ಕೆಲವೊಮ್ಮೆ ಹಾಲಿನಲ್ಲಿ ಕೂಡ ಕುದಿಸುವುದುಂಟು. ಭಿನ್ನ ರುಚಿಗಳನ್ನು ಸವಿಯಲು ಈ ರೀತಿ ಮಾಡುತ್ತಾರೆ. ಹಬ್ಬ, ಜಾತ್ರೆಗಳ ಸಂದರ್ಭದಲ್ಲಿ ಆಡು ಬಲಿ ನಡೆಯುವುದುಂಟು. ಅದರ ಬಲಿಯಾದ ನಂತರ ಅಡುಗೆ ತಯಾರಿಸಿ ಬಂಧುಗಳ ಜೊತೆ ಸವಿಯುವ ಪದ್ಧತಿಯೂ ಇದೆ. ಮೀನನ್ನು ಹಿಡಿದು ತಂದು ಸವಿಯುತ್ತಾರೆ.

ಮನೆಯಲ್ಲಿನ ಆಕಳು, ಎಮ್ಮೆಯಿಂದ ಹಾಲು ಹಿಂಡುತ್ತಾರೆ. ಅಲ್ಲದೇ ಅದರ ಉಪ ಉತ್ಪನ್ನಗಳನ್ನು ಆಹಾರವಾಗಿ ಬಳಸುತ್ತಾರೆ. ಇನ್ನೊಂದು ಅವರ ಬಹು ಮುಖ್ಯವಾದ ಆಹಾರವಲ್ಲವಾದರೂ ಚಟವಾಗಿ ತಂಬಾಕನ್ನು ಮೆಲ್ಲುತ್ತಾರೆ. ಇದನ್ನು ಅವರು ಹೊಲದಲ್ಲಿಯೇ ಬೆಳೆಯುತ್ತಾರೆ.

ಮದ್ಯವು ಬಿಲ್‌ರಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಜಾತ್ರೆ, ಉತ್ಸವ, ಸಾಮಾಜಿಕ ಸಮಾರಂಭ ಇತ್ಯಾದಿ ವಿವಿಧ ಸಂದರ್ಭಗಳಲ್ಲಿ ಮದ್ಯ ಇರಲೇಬೇಕು. ಅವರು 'ತಾಡಿ' ಎನ್ನು ನಶೆಯ ಪದಾರ್ಥವನ್ನಾಗಿ ಸೇವಿಸುತ್ತಾರೆ. ಬೇಸಿಗೆಯ ದಿನಗಳಲ್ಲಿ ಇದೇ ತಾಡಿಯನ್ನು ಆಹಾರವನ್ನಾಗಿಯೂ ಬಳಸುತ್ತಾರೆ. ಇದನ್ನು ಬೇಸಿಗೆ ಮತ್ತು ಚಳಿಗಾಲದಲ್ಲಿ ತಾಳೆ ಗಿಡಗಳಿಂದ ತೆಗೆಯುತ್ತಾರೆ. ಜಾಗರೂಕತೆಯಿಂದ ಮನೆಯಲ್ಲಿ ಶೇಖರಿಸಿ ಇಡುತ್ತಾರೆ. ಏಕೆಂದರೆ ಇದು ಅವರ ಬದುಕಿನ ಪ್ರತಿಕ್ಷಣದ ಅತ್ಯಮೂಲ್ಯವಾದ ವಸ್ತುವಾಗಿದೆ.

ಕೆಲವೊಮ್ಮೆ 'ಮಹುವಾ' ಎಂಬ ಗಿಡದ ಹೂವುಗಳಿಂದ ಕೂಡ ಮದ್ಯ ತಯಾರಿಸಿಕೊಳ್ಳುತ್ತಾರೆ. ಸರಕಾರವು ತಮ್ಮ ಮನೆಯ ಸದಸ್ಯರಿಗೋಸ್ಕರ ಈ ರೀತಿಯ ಮಹುವಾ ಮದ್ಯವನ್ನು ತಯಾರಿಸಲು ಅನುಮತಿ ಕೊಟ್ಟಿದೆ.

### ೪.೫ ಉಡುಪು ಮತ್ತು ಆಭರಣಗಳ ಬಳಕೆ

ಬಿಲ್ ಆದಿವಾಸಿಗಳ ಉಡುಪು ಸರಳವಾಗಿರುತ್ತದೆ. ಹಳೆಯ ಪೀಳಿಗೆಯ ಜನರು ಸೊಂಟಕ್ಕೆ ಲುಂಗಿ, ಕಚ್ಚೆ ಮತ್ತು ತಲೆಗೆ ರುಮಾಲು ಧರಿಸುತ್ತಾರೆ. ಈ ಲುಂಗಿಯು ಅವರ ಮೊಣಕಾಲಿನ ಕೆಳಗಡೆಯವರೆಗೆ ದಾಟಿರುವುದಿಲ್ಲ. ಮೈಗೆ ಅಂಗಿಯನ್ನು ಧರಿಸುತ್ತಾರೆ. ರುಮಾಲು ಅವರಿಗೆ ಸಾಮಾಜಿಕ ಸ್ಥಿತಿಗತಿಯನ್ನು ತಂದು ಕೊಡುತ್ತದೆಂಬ ಭಾವನೆಯಿಂದ ಧರಿಸುವಂತದ್ದಲ್ಲ. ಇದೊಂದು ಅವರಿಗೆ ಅವಶ್ಯಕವಾದ ಉಡುಪು ಅಷ್ಟೆ. ಮನೆಯಲ್ಲಿರುವಾಗಲೂ ರುಮಾಲನ್ನು ತಲೆಗೆ ಧರಿಸಿಯೇ ಇರುತ್ತಾರೆ. ತಮ್ಮ ಮಕ್ಕಳಿಗೂ ರುಮಾಲನ್ನು ಧರಿಸದೇ ಹೊರಗೆ ಹೋಗಬಾರದೆಂದು ತಿಳಿಸುತ್ತಾರೆ. ಅವರು ಚರ್ಮದ ಚಪ್ಪಲಿಗಳನ್ನು ತಮ್ಮ ಪಾದಗಳಿಗೆ ಧರಿಸುತ್ತಿದ್ದರು. ಬಿಲ್‌ರು ಬಟ್ಟೆಗಳನ್ನು ಶೀತ ಮತ್ತು ಸೂರ್ಯನಿಂದ ದೇಹವನ್ನು ಸಂರಕ್ಷಿಸಿಕೊಳ್ಳಲು ಬಳಸುತ್ತಿದ್ದರು. ಅವರಿಗೆ ಅದು ಫ್ಯಾಶನ್ ಆಗಿರಲಿಲ್ಲ. ಏಕೆಂದರೆ ಅವರಿಗೆ ಬಟ್ಟೆ ಕೊಳ್ಳುವಷ್ಟು ಆರ್ಥಿಕತೆ ಇರಲಿಲ್ಲ. ವ್ಯವಸಾಯದಿಂದ ಬಂದ ಫಸಲನ್ನು ಮಾರಿದಾಗ ಬಂದ ಹಣದಿಂದ ಹೊಸ ಬಟ್ಟೆ ಖರೀದಿಸುತ್ತಿದ್ದರು. ಹೊಸ ಬಟ್ಟೆಗಳನ್ನು ಮುಂದಿನ ಒಂದು ವರ್ಷದ ವರೆಗೆ ಉಪಯೋಗಿಸುತ್ತಾರೆ.

ಬಿಲ್‌ರ ಮಹಿಳೆಯರು ಸೊಂಟಕ್ಕೆ 'ಗಾಗ್ರಾ'ವನ್ನು ಧರಿಸುತ್ತಾರೆ. ಎದೆಯ ಭಾಗಕ್ಕೆ 'ಕಂಚ್ಲೆ' ಎನ್ನುವ ರವಿಕೆಯನ್ನು ಧರಿಸುವರು. ಗಾಗ್ರಾವು ಪಾದದವರೆಗೂ ಇರುತ್ತಿತ್ತು. ಅವರು ಪುರುಷರ ಹಾಗೆ ಮೊಣಕಾಲಿನವರೆಗೆ ಇರುವಂತೆ ಬಟ್ಟೆ ಧರಿಸುತ್ತಿರಲಿಲ್ಲ. ಸೊಂಟ, ಎದೆ ಮತ್ತು ತಲೆ ಮೂರಕ್ಕೂ ಸೇರಿ 'ಓಢ್ನಿ' ಎನ್ನುವ ಬಟ್ಟೆಯನ್ನು ಹಾಕಿಕೊಳ್ಳುತ್ತಿದ್ದರು.

ಇತ್ತೀಚಿನ ದಿನಗಳಲ್ಲಿ ಬಿಲ್ ಮಕ್ಕಳು ಮತ್ತು ಕೆಲವು ಪುರುಷರು ಪ್ಯಾಂಟ್, ಅಂಗಿ, ಟಿ-ಶರ್ಟ್‌ಗಳನ್ನು ಧರಿಸುವರು. ಹೆಣ್ಣು ಮಕ್ಕಳು ಚೂಡಿದಾರವನ್ನು ಧರಿಸುವರು. ಹೆಣ್ಣು ಮಕ್ಕಳು ಮದುವೆಯಾದ ಮೇಲೆ ಚೂಡಿದಾರ ಧರಿಸುವಂತಿರಲಿಲ್ಲ. ಸಾಮಾನ್ಯ ಬಿಲ್ ಮಹಿಳೆಯಂತೆಯೇ ಬಟ್ಟೆ ಧರಿಸಬೇಕು ಹಾಗೂ ಮುಖವನ್ನು ತೆಳುವಾದ ಓಢ್ನಿಯಿಂದ ಮುಚ್ಚಿಕೊಳ್ಳುತ್ತಾರೆ.

ಬಿಲ್‌ರ ಪುರುಷ ಮತ್ತು ಮಹಿಳೆಯರು ಆಭರಣಗಳನ್ನು ಧರಿಸುತ್ತಿದ್ದರು. ದೇಹದ ಅಲಂಕಾರಿಕ ವಸ್ತುಗಳಾಗಿ ಉಪಯೋಗಿಸುತ್ತಿದ್ದರು. ಗಂಡು ಮತ್ತು ಹೆಣ್ಣು ಇಬ್ಬರೂ ಕೈಬೆರಳುಗಳಿಗೆ ಬಿಳಿ ಲೋಹದ ಅಥವಾ ಹಿತ್ತಾಳೆಯ ಉಂಗುರಗಳನ್ನು ಧರಿಸುವರು. ಆರ್ಥಿಕ

ಸ್ಥಿತಿ ಉತ್ತಮವಾಗಿದ್ದರೆ ಬೆಳ್ಳಿ, ಬಂಗಾರದ ಉಂಗುರಗಳನ್ನು ಕೂಡ ಧರಿಸುವರು. ಕಿವಿಗೆ ಓಲೆ, ಸೊಂಟಕ್ಕೆ ಹಾಕುವ ಪಟ್ಟಿಯನ್ನು ಧರಿಸುವರು. ಹರೆಯದ ಹುಡುಗಿಯರು ತಮ್ಮ ಬಟ್ಟೆಗಳ ಮೇಲೂ ಆಭರಣಗಳನ್ನು ಧರಿಸುತ್ತಾರೆ. ಮದುವೆಯಾದವರು ಕೊರಳ ಸುತ್ತ ಮಂಗಳಸೂತ್ರವನ್ನು ಧರಿಸುವರು. ಮದುವೆ, ಹಬ್ಬ ಮತ್ತು ಉತ್ಸವಗಳ ದಿನಗಳಂದು ಕೆಲವೊಂದು ಆಭರಣಗಳನ್ನು ಧರಿಸುವರು. ಕಿವಿಯೋಲೆಯನ್ನು ಇಬ್ಬರೂ ಧರಿಸುತ್ತಿದ್ದರು. ಅಲಂಕಾರಕ್ಕಾಗಿ ಆಭರಣಗಳನ್ನು ವೈಯಕ್ತಿಕವಾಗಿ ಅವರು ಇಷ್ಟಪಡುತ್ತಿದ್ದರು.

ಬಿಲ್‌ರು ಕಂಚು, ಅಲ್ಯೂಮಿನಿಯಂ, ನಿಕ್ಕಲ್ ಮತ್ತು ಬೆಳ್ಳಿಯ ಆಭರಣಗಳನ್ನು ಧರಿಸುತ್ತಿದ್ದರು. ಅವರು ಕಿವಿಯ ಹಾಲೆಗಳಲ್ಲಿ 'ಮುರ್ಕಿಸ್' ಧರಿಸುವರು. 'ಹನ್‌ಸ್ಲಿ' ಯನ್ನು ಕುತ್ತಿಗೆ ಸುತ್ತಲೂ ಮತ್ತು ಮಣಿಕಟ್ಟುಗಳ ಸುತ್ತಲೂ 'ಕಾಡ' ವನ್ನು ಧರಿಸುತ್ತಿದ್ದರು. ಅವರು ಬೆಳ್ಳಿಯ ಗುಂಡುಗಳನ್ನು ಬಹಳ ಇಷ್ಟ ಪಡುತ್ತಿದ್ದರು ಅವುಗಳನ್ನು ಅವರು ತಮ್ಮ ಜಾಕೇಟಗಳಿಗೆ ಬಳಸುತ್ತಿದ್ದರು. ಕೆಲವೊಂದು ಬುಡಕಟ್ಟುಗಳು ಬಂಗಾರದ ಒಡವೆಗಳನ್ನು ಬಳಸುವರು.

ಈ ಕೆಳಗಿನ ಆಭರಣಗಳು ಬಿಲ್‌ರಲ್ಲಿ ಪ್ರಮುಖವಾದವು:

ಬಾರ್: ಬೆಳ್ಳಿ ಅಥವಾ ಬಿಳಿ ಲೋಹದಿಂದ ತಯಾರಿಸಿದ ಈ ಆಭರಣವನ್ನು ಹಣೆಯ ಮೇಲೆ ಮುಂದಲೆಯ ಮೇಲೆ ಧರಿಸುವರು.

ರಾಖ್‌ಡಿ: ಹಿತ್ತಾಳೆಯಿಂದ ತಯಾರಿಸಿದ ಆಭರಣ. ಇದನ್ನು ತಲೆಯ ಹಿಂದಿನ ಜಡೆಗೆ ಹಾಗೂ ಬೆನ್ನಿನ ಮೇಲೆ ಜೋತು ಬಿಡುತ್ತಾರೆ.

ಝುಮಕಿ: ಬೆಳ್ಳಿ ಅಥವಾ ಬಿಳಿ ಲೋಹದಿಂದ ತಯಾರಿಸಿರುತ್ತಾರೆ. ಕಿವಿಗೆ ಹಾಕಿಕೊಳ್ಳುತ್ತಾರೆ.

ಪಂಡಿ: ಇದು ಸಹ ಬೆಳ್ಳಿ ಅಥವಾ ಬಿಳಿ ಲೋಹದ ಒಡವೆ. ಕಿವಿಯ ಮೇಲಿನ ಭಾಗಕ್ಕೆ ಚಿಕ್ಕದಾದ ತೂತು ಮಾಡಿಕೊಂಡು ಇದನ್ನು ಇಟ್ಟುಕೊಳ್ಳುತ್ತಾರೆ

ಟೋಟಿ: ಬಿಳಿ ಲೋಹ ಅಥವಾ ಬೆಳ್ಳಿಯ ಒಡವೆಯಿದು. ಇದನ್ನು ಕಿವಿಗಳ ಕೆಳಗಿನ ಭಾಗಕ್ಕೆ ತೂತು ಮಾಡಿಕೊಂಡು ಇಟ್ಟುಕೊಳ್ಳುತ್ತಾರೆ.

ಮೂಗುಬೊಟ್ಟು: ಬೆಳ್ಳಿ ಅಥವಾ ಬಂಗಾರದ ಆಭರಣವನ್ನು ಧರಿಸುತ್ತಾರೆ. ಇದನ್ನು ಮೂಗಿನ ಎಡಹೊಳ್ಳೆಗೆ ಚುಚ್ಚಿಕೊಳ್ಳುತ್ತಾರೆ.

ಹನ್‌ಸ್ಲಿ: ಇದನ್ನು ಕುತ್ತಿಗೆಯ ಸುತ್ತ ಹಾಕಿಕೊಳ್ಳುತ್ತಾರೆ. ಇದು ಬೆಳ್ಳಿಯದ್ದು ಇಲ್ಲವೇ ಬಿಳಿ ಲೋಹದ್ದಾಗಿರುತ್ತದೆ.

ಬೀಡ್ಸ್: ಕೃತಕ ಬಿಳಿ ಮತ್ತು ಕಪ್ಪು ಬಣ್ಣದ ಮುತ್ತಿನ ಸರವಾಗಿದೆ. ಇದನ್ನು ಕೊರಳಿಗೆ ಹಾಕಿಕೊಳ್ಳುತ್ತಾರೆ

ಪಾಟ್ಲಿ: ಇದೊಂದು ತೋಳಿಗೆ ಹಾಕಿಕೊಳ್ಳುವ ಆಭರಣವಾಗಿದೆ. ಇದನ್ನು ತೋಳಿಗೆ ಹದಿನೈದಕ್ಕಿಂತ ಹೆಚ್ಚು ಹಾಕಿಕೊಳ್ಳುತ್ತಾರೆ.

ಕಾಡ: ಎರಡು ತೋಳಿಗೆ ಒಂದೊಂದು ತೋಳುಬಂದಿಯನ್ನು ಬಿಗಿದು ಕಟ್ಟಲು, ಮಣಿಕಟ್ಟುಗಳ ಸುತ್ತಲೂ ಇದನ್ನು ಕಟ್ಟುತ್ತಾರೆ.

ಚುಡಿಯಾ: ಎರಡು ಕಡೆಯ ಮಣಿಕಟ್ಟಿಗೆ ಒಂದೊಂದು ಕಟ್ಟುತ್ತಾರೆ

ಕಾಕನ್: ಹಿತ್ತಾಳೆಯ ಮಣಿಕಟ್ಟು, ಆರರಿಂದ ಏಳು ಒಂದೊಂದು ಕೈಯಲ್ಲಿ ಇರುತ್ತವೆ.

**೪.೬ ಶಸ್ತ್ರಾಸ್ತ್ರಗಳು**

ಬಿಲ್‌ರು ಬಿಲ್ಲುಗಾರಿಕೆಯಲ್ಲಿ ಅತೀ ನಿಪುಣತೆಯನ್ನು ಸಾಧಿಸಿದ್ದಾರೆ. ಅವರ ಶಕ್ತಿ ಸಾಮರ್ಥ್ಯವು ರಜಪೂತರಿಗೂ, ಬ್ರಿಟಿಷರಿಗೂ ತಿಳಿಯಲ್ಪಟ್ಟಿತ್ತು. ಬ್ರಿಟಿಷರು ಬಿಲ್‌ರ ಜೊತೆ ನಿರಂತರವಾದ ಕಾದಾಟಗಳನ್ನು ಮಾಡುತ್ತಿದ್ದರು. ಬ್ರಿಟಿಷರಿಗೆ ಆಧುನಿಕವಾದ ಬಂದೂಕುಗಳಿದ್ದರೆ, ಬಿಲ್‌ರಿಗೆ ಬಿಲ್ಲು ಬಾಣಗಳೇ ಅಸ್ತ್ರಗಳಾಗಿದ್ದವು. ಬ್ರಿಟಿಷರಿಗೆ ಅವರು ನಿರಂತರವಾಗಿ ತಲೆನೋವಾಗಿ ಪರಿಣಮಿಸಿದ್ದರು. ಅದು ಏನೇ ಇರಲಿ ಬಿಲ್‌ರು ಮಾತ್ರ ಸಾಂಪ್ರದಾಯಿಕವಾದ ಶಸ್ತ್ರಾಸ್ತ್ರಗಳನ್ನು ಬಳಸುತ್ತಿದ್ದರು. ಅವರಿಗೆ ಶಸ್ತ್ರಾಸ್ತ್ರಗಳು ಬದುಕಿನ ಒಂದು ಭಾಗವಾಗಿಯೇ ಹೋಗಿದ್ದವು. ಆದ್ದರಿಂದಲೇ ಅವರು ಮದುವೆ, ಹಬ್ಬ, ಜಾತ್ರೆಗಳ ಸಂದರ್ಭಗಳಲ್ಲಿ ತಾವು ಬಳಸುವ ಅಸ್ತ್ರಗಳಿಗೆ ಪೂಜೆ ಸಲ್ಲಿಸುತ್ತಿದ್ದರು ಹಾಗೆಯೇ ಅವುಗಳನ್ನು ಕೈಯಲ್ಲಿ ಹಿಡಿದುಕೊಂಡು ನೃತ್ಯವನ್ನು ಕೂಡ ಮಾಡುತ್ತಿದ್ದರು.

ಬಿಲ್‌ರು ಬಿಲ್ಲನ್ನು ತಯಾರಿಸಲು 'ಧಮನ್' ಎಂಬ ಕಟ್ಟಿಗೆ ಅಥವಾ ಬಿದಿರನ್ನು ಬಳಸುತ್ತಾರೆ. ತೆಳ್ಳನೆಯ ಬಿದಿರನ್ನು ತೆಗೆದುಕೊಂಡು ಅದನ್ನು ಬಾಗಿಸಿ ಎರಡೂ ಬದಿಗೆ ತೆಳ್ಳನೆಯ ಹಗ್ಗ ಅಥವಾ ನಾರಿನಿಂದ ಕಟ್ಟುತ್ತಾರೆ. ಖಾರಿ ಎನ್ನುವ ಕಟ್ಟಿಗೆ ಅಥವಾ ಬಿದಿರಿನ ಸಹಾಯದಿಂದ ಬಾಣಗಳನ್ನು ಮಾಡಿಕೊಳ್ಳುತ್ತಾರೆ. ನಂತರದಲ್ಲಿ ಕಟ್ಟಿಗೆ ಅಥವಾ ಬಿದಿರಿನಿಂದ ಮಾಡಿದ ಬಾಣದ ತುದಿಗೆ ಚೂಪಾದ, ತ್ರಿಕೋನಾಕಾರದಲ್ಲಿರುವ ಹರಿತವಾದ ಕಬ್ಬಿಣದ ತುಂಡನ್ನು ಗಟ್ಟಿಯಾಗಿ ಜೋಡಿಸುತ್ತಾರೆ. ಬಾಣದ ಇನ್ನೊಂದು ತುದಿಗೆ ಗರಿಗಳನ್ನು ಅಂಟಿಸುತ್ತಾರೆ. ಏಕೆಂದರೆ ಬಾಣವು ಗುರಿಇಟ್ಟ ವಸ್ತುವಿನ ಕಡೆಗೆ ಹಾರಲು ಇದು ಸಹಾಯವಾಗುತ್ತದೆ. ಜಾಬುವಾ ಜಿಲ್ಲೆಯಲ್ಲಿ ಆರು ತರಹದ ಬಾಣಗಳನ್ನು ಇವರು ಬಳಸುತ್ತಿದ್ದರು. ಅವುಗಳೆಂದರೆ : ಗಂಡಿಯಾಲ, ಜಮ್ನಿ, ಭಾಲ್ಕಾ, ತಾವಡಿಯಾ, ಕನ್ಯಾಲಿ, ಬಿಟ್ಲ.

**ಬಾಣಗಳ ವಿವರಗಳು:**

ಗಂಡಿಯಾಲ: ದೂರದಲ್ಲಿರುವ ಪ್ರಾಣಿಯನ್ನು ಹೊಡೆಯಲು ಈ ಬಾಣವನ್ನು ಉಪಯೋಗಿಸಲಾಗುತ್ತದೆ.

ಜಮ್ನಿ: ಇದರ ತಲೆ ವಿಸ್ತಾರವಾಗಿರುತ್ತದೆ. ಇದು ಗಡಿಯಾಲ ತರ ಅತೀ ದೂರ ಹೋಗುವುದಿಲ್ಲ. ಹೆಚ್ಚು ಆಳವಾಗಿ ಹಾಗೂ ಅಗಲವಾಗಿ ಭೇದಿಸುತ್ತದೆ. ಹೆಚ್ಚಾಗಿ ಈ ಬಾಣವನ್ನು ಚಿಗರೆಯ ಬೇಟೆಯಾಡಲು ಉಪಯೋಗಿಸುವರು.

ಬಾಲ್ಕಾ : ಇದೊಂದು ಭಾರವಾದ ಬಾಣವಾಗಿದ್ದು, ಕಡಿಮೆ ದೂರವನ್ನು ಬಹು ತೀಕ್ಷವಾಗಿ ಭೇದಿಸುತ್ತದೆ. ಹುಲಿಯಂತಹ ಪ್ರಾಣಿಯ ಬೇಟೆಗೆ ಇದನ್ನು ಬಳಸುವರು.

ತಾವಡಿಯಾ: ಚೂಪಾದ ನಾಲ್ಕು ಅಂಚುಗಳನ್ನು ಈ ಬಾಣವು ಹೊಂದಿರುತ್ತದೆ. ಇದನ್ನು ಹೆಚ್ಚಾಗಿ ದೊಡ್ಡ ಗಾತ್ರದ ಪ್ರಾಣಿಯನ್ನು ಬೇಟೆಯಾಡಲು ಉಪಯೋಗಿಸುವರು.

ಕನ್ಯಾಲಿ: ಇದು ಜಮ್ನಿ ಬಾಣವನ್ನು ಹೋಲುತ್ತದೆ. ಆದರೆ ಈ ಬಾಣವನ್ನು ಭೇದಿಸಿದ ನಂತರ ಚುಚ್ಚಿಸಿಕೊಂಡ ಪ್ರಾಣಿಯ ಮೈಯಿಂದ ಬಾಣ ಕಿತ್ತರೆ ಆ ಪ್ರಾಣಿಯ ಒಳಗಿನ ಭಾಗವು ಕಿತ್ತುಕೊಂಡು ಹೊರಗೆ ಬರುತ್ತದೆ.

ಬಿಟ್ಲ: ಮೊಂಡಾದ ತುದಿಯನ್ನು ಇದು ಹೊಂದಿರುತ್ತದೆ. ಬಿಲ್ಲುಗಾರಿಕೆಯನ್ನು ಕಲಿಯಲು ಇದನ್ನು ಬಳಸುತ್ತಾರೆ. ಇದರಿಂದ ಸಣ್ಣ ಹಕ್ಕಿಗಳನ್ನು ಬೇಟೆಯಾಡುತ್ತಾರೆ.

ಬಿಲ್ ಆದಿವಾಸಿಗಳು ಬಿಲ್ಲು, ಬಾಣಗಳಲ್ಲದೇ ಕತ್ತಿ ಮತ್ತು ಗುರಾಣಿಗಳನ್ನು ಬಳಸುತ್ತಿದ್ದರು. ಈ ಅಸ್ತ್ರಗಳನ್ನು ರಕ್ಷಣೆ ಹಾಗೂ ಆಕ್ರಮಣಕ್ಕೆ ಉಪಯೋಗಿಸುತ್ತಾರೆ. ಬಿಲ್ ಜನರು ಕಲ್ಲು ಅಥವಾ ಕೈ ಬಾಂಬುಗಳನ್ನು ತೂಗು ಹಗ್ಗಗಳಿಂದ ಬೀಸಿ ಒಗೆಯುವುದರಲ್ಲಿ ನಿಪುಣರು. ಎದುರಾಳಿಗಳನ್ನು ಅತೀವ ಗಾಯಗೊಳಿಸಲು ಇವು ಸಹಕಾರಿಯಾಗುತ್ತಿದ್ದವು. ಪ್ರಸ್ತುತದಲ್ಲಿ ಕೈ ಬಂದೂಕುಗಳನ್ನು ಉಪಯೋಗಿಸಲು ಪರವಾನಿಗೆ ಪಡೆದುಕೊಂಡಿದ್ದಾರೆ. ಬಲೆಗಳನ್ನು ಕೂಡ ತಯಾರಿಸಿಕೊಂಡು ಮೀನು, ಹಕ್ಕಿ, ಕಾಡು ಪ್ರಾಣಿಗಳನ್ನು ಹಿಡಿಯುತ್ತಾರೆ.

## ೪.೭ ನೃತ್ಯ ಮತ್ತು ಸಂಗೀತ

ಬಿಲ್ ಆದಿವಾಸಿಗಳು ಉತ್ತಮವಾಗಿ ಬುಡಕಟ್ಟು ನೃತ್ಯವನ್ನು ಮಾಡುತ್ತಾರೆ. ಪ್ರಾಚೀನ ಆದಿವಾಸಿಗಳಲ್ಲಿ ಅವರಷ್ಟು ಸಮೂಹ ನೃತ್ಯ ಮಾಡುವವರು ಕಾಣಬರುವುದಿಲ್ಲ. ಕೆಲವು ಸಮಾರಂಭಗಳಲ್ಲಿ ಅವರು ವೇಷ ಭೂಷಣ, ಬಣ್ಣ ಮತ್ತು ಮುಖವಾಡಗಳನ್ನು ಧರಿಸಿಕೊಂಡು

ಪೌರಾಣಿಕ ಹಿನ್ನೆಲೆಯಲ್ಲಿ ನೃತ್ಯವನ್ನು ಪ್ರಸ್ತುತ ಪಡಿಸುತ್ತಾರೆ. ಪ್ರಾಣಿಗಳ ವೇಷವನ್ನು ಸಹ ಧರಿಸಿ ನೃತ್ಯ ಮಾಡುತ್ತಾರೆ. ಅವರಿಗೆ ನೃತ್ಯದ ಕಲೆ ತಲೆತಲಾಂತರಗಳಿಂದ ರಕ್ತದಲ್ಲಿಯೇ ಬಂದಂತೆ ಕಾಣುತ್ತದೆ. ಎಲ್ಲ ಗಂಡಸರು, ಹೆಂಗಸರು, ಹುಡುಗ ಹುಡುಗಿಯರು ಕೂಡ ಒಂದೇ ತರಹ ಹೆಜ್ಜೆಯನ್ನು ಹಾಕುತ್ತ ನೃತ್ಯ ಮಾಡುತ್ತಾರೆ. ಗಂಡು ಮಕ್ಕಳಿಗೆ ಕಠಿಣ ಕೆಲಸಗಳ ನಡುವೆ ನೃತ್ಯ ಒಂದು ಮನಸ್ಸಿಗೆ ಮುದ ನೀಡುವ ಕಲೆ. ಈ ಕಲೆಯಲ್ಲಿ ಎಲ್ಲರೂ ಸೇರಿಕೊಂಡು ನಿಸರ್ಗದಲ್ಲಿ ನೃತ್ಯ ಮಾಡುವುದರಿಂದ ನೋವು, ದುಃಖ ದೂರವಾಗಿ ಹುಮ್ಮಸ್ಸು, ಉತ್ಸಾಹ, ಸಂತೋಷ ಹೆಚ್ಚಾಗುತ್ತದೆಂಬ ಭಾವನೆಯಿದೆ.

ಬಿಲ್‌ರ ನೃತ್ಯವು ಪೌರಾಣಿಕ ನೆಲೆಯಿಂದ ಕೂಡಿದ್ದಾಗಿದೆ. ಪೌರಾಣಿಕತೆಯಲ್ಲಿ ಬರುವ ಅಂಬಾ, ಕಾಳಿ, ಬುನಿಯಾವಾಡ, ಶಿವ ಮತ್ತು ಇನ್ನಿತರರನ್ನು ಕುರಿತು ಕಥಾ ರೂಪಕಗಳು ನಡೆಯುತ್ತವೆ. ಅವರ ನೃತ್ಯವು ಕೇವಲ ಪೌರಾಣಿಕ ವಿಷಯಕ್ಕೆ ಸೀಮಿತವಾಗದೇ, ಅಲೌಕಿಕವಾದ ರೋಗಗಳ ಹಾಗೂ ಪವಾಡ ಮರುಸ್ಥಾಪನೆಯಂತಹ ವಿಷಯಗಳನ್ನು ಕೂಡ ಒಳಗೊಂಡಿರುವುದು.

ಬಿಲ್ ಆದಿವಾಸಿಗಳು ಧೈರ್ಯಶಾಲಿಗಳಾಗಿದ್ದು ನೃತ್ಯದಲ್ಲಿ ಕಲಾತ್ಮಕವಾಗಿದ್ದಾರೆ. ಅತೀ ಸಾವಕಾಶವಾಗಿ ಹಾವ-ಭಾವಗಳನ್ನು ನೃತ್ಯದಲ್ಲಿ ಆರಂಭಿಸುತ್ತಾರೆ. ಈ ಸನ್ನಿವೇಶ ಅತೀ ನಿಧಾನವಾಗಿ ಚಲಿಸುವ ನೃತ್ಯಗಳಾಗಿ ಕಾಣುತ್ತದೆ. ನಂತರದಲ್ಲಿ ಲಯ, ಹುರುಪು ಬಂದ ತಕ್ಷಣ ವೇಗವಾಗಿ ಚಲನೆಯಲ್ಲಿ ತೊಡಗುತ್ತಾರೆ. ಕೈ ಮತ್ತು ತೋಳುಗಳನ್ನು ಬಾಗಿಸುತ್ತ, ತಿರುಚುತ್ತಾ ವೇಗವಾದ ಲಯವನ್ನು ಕಂಡುಕೊಳ್ಳುತ್ತಾರೆ. ಗಂಡಸರು ಕಟ್ಟಿಗೆ, ಬಿಲ್ಲು, ಬಾಣ ಮತ್ತು ಕತ್ತಿಯನ್ನು ಹಿಡಿದುಕೊಂಡು ನೃತ್ಯ ಮಾಡುತ್ತಾರೆ. ಕೆಲವೊಮ್ಮೆ ನೃತ್ಯ ಮಾಡುವ ವಿಧಾನವೂ ಬದಲಾಗುತ್ತಿರುತ್ತದೆ. ಭೂಮಿಯನ್ನು ಒದೆಯುತ್ತ ನೃತ್ಯ ಮಾಡುತ್ತಾರೆ. ಅವರ ನೃತ್ಯವು ತಾಸಿನಿಂದ ತಾಸಿಗೆ ಚುರುಕುತನದಿಂದ ಸಾಗಿ ನಿರ್ಣಾಯಕವಾದ ಹಂತ ತಲುಪುತ್ತದೆ.

ಬಿಲ್‌ನ ಮೇವಾರವರು ವಿಶೇಷವಾದ ನೃತ್ಯವನ್ನು ಮಾಡುತ್ತಾರೆ. ಒಂದು ಕೇಂದ್ರೀಕೃತವಾದ ವೃತ್ತದ ಆಕಾರದಲ್ಲಿ ನಿಂತುಕೊಂಡು ಎಲ್ಲಾ ವಯಸ್ಸಿನ ಗಂಡಸರು, ಹೆಂಗಸರು ನೃತ್ಯ ಮಾಡುತ್ತಾರೆ. ಈ ನೃತ್ಯದಲ್ಲಿ ಗಂಡಸರ ಮಧ್ಯದಲ್ಲಿ ಹೆಂಗಸರು ಸುತ್ತುತ್ತಾ ಸುತ್ತುತ್ತಾ ಗಾಂಭೀರ್ಯವಾಗಿ ಲಯಬದ್ಧವಾಗಿ ನೃತ್ಯ ಮಾಡುತ್ತಾರೆ. ಅವರು ಮಾಡುವ ನೃತ್ಯವು ಮೇಳಗೀತೆಯೊಂದಿಗೆ ಶುರುವಾಗುತ್ತದೆ. ಪ್ರತಿ ಏಕರೂಪದ ಗುಂಪು ಒಂದಾದ ನಂತರ ಒಂದರಂತೆ ಹಾಡುತ್ತಾರೆ. ಅವರು ಸಮಯ ಕಳೆದಂತೆ ಉತ್ಸಾಹ ಹೆಚ್ಚಾಗಿ ಲಯ ಮತ್ತು ಹಾಡನ್ನು ತೀವ್ರಗೊಳಿಸುತ್ತಾರೆ. ಅವರು ತಮ್ಮ ದೇಹಗಳನ್ನು ಸ್ವಲ್ಪ ಬಾಗಿಸಿಕೊಂಡು ನೂಕುತ್ತ ಮೇಲೆ ಕೆಳಗೆ ಎಳೆಯುತ್ತಾರೆ.

ಹಾಡುಗಾರರ ಪ್ರತಿ ಉಚ್ಚಾರಕ್ಕೆ ತಕ್ಕಂತೆ ನೃತ್ಯಗಾರರು ಹೆಜ್ಜೆ ಹಾಕುತ್ತಾರೆ. ಹೀಗೆ ನೃತ್ಯದಲ್ಲಿ ಸಮಯ ಕಳೆದಂತೆ ಹೆಚ್ಚಾಗಿ ಉತ್ಸಾಹಗೊಂಡು ಯಾವುದೇ ಹಿಂಜರಿಕೆಯಿಲ್ಲದೇ ಒಗ್ಗಟ್ಟಿನಿಂದ ಕೂಡಿಕೊಂಡು ಎಲ್ಲರೂ ನೃತ್ಯ ಪ್ರದರ್ಶನ ಮಾಡುತ್ತಾರೆ.

ಗುಜರಾತಿನ ಕೆಲವು ಭಾಗಗಳಲ್ಲಿ ಕೂಡ ಬಿಲ್ ಆದಿವಾಸಿಗಳು ಸಾಮಾಜಿಕ ಸಮಾರಂಭಗಳಲ್ಲಿ ಅನೇಕ ಪ್ರಕಾರದ ನೃತ್ಯ ಪ್ರದರ್ಶನ ಮಾಡುತ್ತಾರೆ. ಅವುಗಳಲ್ಲಿ ಕೆಲವನ್ನು ಹೀಗೆ ಗುರುತಿಸಬಹುದು : ಗೌರ್, ಅಂತಿಯಾ, ವನ, ಧರ್ವ

**ಗೌರ:** ಈ ನೃತ್ಯ ಪ್ರಕಾರದಲ್ಲಿ ಕೇವಲ ಹೆಂಗಸರು ಮಾತ್ರ ಭಾಗವಹಿಸುತ್ತಾರೆ. ಎಲ್ಲ ಸದಸ್ಯರು ಕೈಗಳನ್ನು ಒಬ್ಬರಿಗೊಬ್ಬರು ಜೋಡಿಸಿ ಹಿಡಿದುಕೊಂಡು ವೃತ್ತಾಕಾರದ ರೀತಿಯಲ್ಲಿ ನಿಲ್ಲುತ್ತಾರೆ. ನಂತರ ವೃತ್ತಾಕಾರದ ಚಲನೆಯಲ್ಲಿ ಲಯದೊಂದಿಗೆ ಚಲಿಸಲು ಆರಂಭಿಸಿ ನೃತ್ಯ ಪ್ರದರ್ಶನ ಕೊಡುತ್ತಾರೆ.

**ಅಂತಿಯಾ:** ಈ ನೃತ್ಯ ಪ್ರಕಾರದಲ್ಲಿ ಕೇವಲ ಗಂಡಸರು ಪ್ರದರ್ಶನ ನೀಡುತ್ತಾರೆ. ಒಬ್ಬರನ್ನು ಬಿಟ್ಟು ಇನ್ನೊಬ್ಬರು ಕೈಯಲ್ಲಿ ಬಡಿಗೆಯನ್ನು ಹಿಡಿದುಕೊಂಡು ಲಯದಲ್ಲಿ ನೃತ್ಯ ಮಾಡುತ್ತಾರೆ. ಜೊತೆಗೆ ಡೊಳ್ಳನ್ನು ಬಾರಿಸುತ್ತಾರೆ. ಇಲ್ಲಿಯೂ ಕೂಡ ಸಾವಕಾಶವಾಗಿ ಆರಂಭಗೊಂಡ ನೃತ್ಯ ಬರಬರುತ್ತ ತೀವ್ರತೆಯಿಂದ ಕೂಡಿ ಕೊನೆಗೊಳ್ಳುತ್ತದೆ.

**ವನ:** ಈ ನೃತ್ಯದಲ್ಲಿ ಪುರುಷರು ಮತ್ತು ಮಹಿಳೆಯರು ಒಂದು ವೃತ್ತದೊಳಗೆ ನಿಂತುಕೊಂಡು ವೃತ್ತಾಕಾರದ ಚಲನೆಯಲ್ಲಿ ಚಲಿಸುತ್ತಿರುತ್ತಾರೆ. ಅವರಿಗೆ ಥಾಲಿ ಆಟಗಾರರು ಡೊಳ್ಳು ವಾದ್ಯವನ್ನು ಬಡಿಯುತ್ತಾ ವೃತ್ತದ ಮಧ್ಯದಲ್ಲಿ ನಿಂತಿರುತ್ತಾರೆ.

ಬಿಲ್ ಆದಿವಾಸಿಗಳು ಜಾಬುವಾ ಜಿಲ್ಲೆಯಲ್ಲಿ ಇರುವವರು ಅನೇಕ ಪ್ರಕಾರದ ಸಂಗೀತ ವಾದ್ಯಗಳನ್ನು ಬಳಸುತ್ತಾರೆ. ಅವುಗಳಲ್ಲಿ ಮುಖ್ಯವಾದವು : ಡೊಳ್ಳು, ಕೊಳಲು, ಟಾಮ್ ಟಾಮ್, ಬಾಯಿಯಿಂದ ಊದಿ ಸ್ವರ ಬಿಡುವ ಟೆಂಗಾರಿ ಮುಂತಾದವು. ಕಂಚಿನ ತಟ್ಟೆಗೆ ಒಂದು ಕೋಲಿನಿಂದ ಬಡಿಯುವುದನ್ನು ಮಾಡುತ್ತಾರೆ.

### ೪.೮ ಹಬ್ಬಗಳು ಉತ್ಸವಗಳು

ಬಿಲ್ ಬುಡಕಟ್ಟುಗಳಲ್ಲಿನ ಹಬ್ಬಗಳು ಮತ್ತು ಉತ್ಸವಗಳು ಅವರ ಸಾಂಸ್ಕೃತಿಕ ಜೀವನವನ್ನು ಅನಾವರಣ ಮಾಡುತ್ತವೆ. ಹಬ್ಬ ಉತ್ಸವಗಳು ಅವರ ಆರ್ಥಿಕ ಜೀವನದಿಂದ ನಿರ್ಧರಿಸಲ್ಪಟ್ಟರೂ ಸಾಂಪ್ರದಾಯಿಕ ಜರೂರತ್ತಿನಿಂದ ನೋಡಿದಾಗ ದೈವ ಭಕ್ತಿಯು ಎದ್ದು ಕಾಣುತ್ತದೆ. ಸಮೂಹ ಜೀವನ ಮಾಡುತ್ತಿರುವ ಜಾಬುವಾ ಪ್ರದೇಶದ ಹಬ್ಬ ಉತ್ಸವಗಳ ಆಚರಣೆಯು ಬುಡಕಟ್ಟು ಜನರ ಸಾಂಸ್ಕೃತಿಕವಾದ ಬೇರಿನಿಂದ ಅರಳಲ್ಪಟ್ಟವು ಅನಿಸುತ್ತದೆ. ಆದರೆ ಕೆಲವು ಹಬ್ಬಗಳು ಹಿಂದೂ

ಸಾಂಪ್ರದಾಯಿಕ ಆಚರಣೆಯ ಭಾಗವಾಗಿರುವ ಹಬ್ಬಗಳನ್ನು ಅವರು ಸಹ ಆಚರಿಸುತ್ತಾರೆ. ಆಚರಣೆಯ ಕ್ರಮದಲ್ಲಿ ಬಹು ಭಿನ್ನತೆಗಳು ಕಡಿಮೆ. ಹಬ್ಬಗಳ ನಾಮಧೇಯಗಳು ಭಿನ್ನವಾಗಿವೆ. ಕೆಲವು ಒಂದೇ ರೀತಿಯಿವೆ. ಅವರು ಆಚರಿಸುವ ಹಬ್ಬಗಳು ಈ ರೀತಿಯಿವೆ :

೧. ವಾವ್ನಿ ೨. ದಿವಸ ೩. ನವಾಯಿ ೪. ದೇಸರಿಯಾ ೫. ದಯಾರಿ ೬. ಹೋಳಿ

**೧. ವಾವ್ನಿ:** ಬಿತ್ತನೆಯ ಕಾರ್ಯಕ್ಕೂ ಮೊದಲು ಭೂಮಿ ಪೂಜೆ ಮಾಡುತ್ತಾರೆ. ಇದನ್ನು ವಾವ್ನಿ ಹಬ್ಬವೆಂದು ಆಚರಿಸುತ್ತಾರೆ. ಕರ್ನಾಟಕದಲ್ಲಿ ಬಿತ್ತನೆಗೂ ಪೂರ್ವದಲ್ಲಿ ಹೊಲವನ್ನು ಪೂಜಿಸುವ ಆಚರಣೆಯು ಇದೆ. ಇದನ್ನು ಹೊನ್ನಾರವೆಂದು ಕರ್ನಾಟಕದ ಮಧ್ಯದ ಕೆಲವು ಜಿಲ್ಲೆಗಳಲ್ಲಿ ಕರೆಯುತ್ತಾರೆ. ಇದಕ್ಕೂ ವಿಭಿನ್ನವಾಗಿ ಬುಡಕಟ್ಟು ಸಮುದಾಯದ ಬಿಲ್‌ರು ವಾವ್ನಿಯನ್ನು ಆಚರಿಸುತ್ತಾರೆ. ಹೊಲದ ಮಧ್ಯದಲ್ಲಿ ಭೂಮಿಗೆ ನೇಗಿಲನ್ನು ಎತ್ತುಗಳ ಮೂಲಕ ಎಳೆಸಲು ಅಣಿ ಮಾಡುತ್ತಾರೆ. ನೇಗಿಲಿಗೆ ಕುಂಕುಮ ಹಚ್ಚುವುದು, ಎಡೆ, ಅನ್ನ ಹಾಕುವುದು, ಕಾಯಿ ಒಡೆಯುವುದು ಮಾಡುತ್ತಾರೆ. ಅಲ್ಲದೇ ಉಳುಮೆ ಮಾಡಿದ ಮೊದಲ ಗೆರೆಗೆ ಸರಾಯಿ ಸುರಿದು ಪೂಜೆ ಮಾಡುತ್ತಾರೆ. ಈ ರೀತಿ ಮಾಡುವುದರಿಂದ ದೇವರು ಸಂತೋಷಗೊಂಡು ಒಳ್ಳೆಯ ಬೆಳೆಯನ್ನು ನೀಡುತ್ತಾನೆಂದು ಅವರ ನಂಬಿಕೆಯಾಗಿದೆ.

ಕೃಷಿಯ ಕಾರ್ಯಕ್ಕೂ ಮುಂಚೆ ಇದು ನಡೆಯುವುದರಿಂದ ಕೃಷಿಯ ಆರಂಭದ ಚಿಹ್ನೆಯನ್ನು ಸೂಚಿಸುತ್ತದೆ. ಈ ಹಬ್ಬವು ಮಳೆಗಾಲವು ಶುರುವಾಗುವ ಕಾಲಕ್ಕೆ ಪೂರ್ವವಾಗಿ ನಡೆಯುತ್ತದೆ. ವಿಶೇಷವೇನೆಂದರೆ ಕೃಷಿ ಸಲಕರಣೆಗಳನ್ನು ಸಿದ್ಧಗೊಳಿಸುವ ನೆಪದಲ್ಲೂ ಈ ಹಬ್ಬವು ಜರಗುತ್ತದೆ. ಈ ಹಬ್ಬಕ್ಕಾಗಿ ನೇಗಿಲನ್ನು ಸಿದ್ಧಗೊಳಿಸಿಕೊಳ್ಳುತ್ತಾರೆ. ಹಿಂದಿನ ವರ್ಷ ಬಿತ್ತಿಯಾದ ಮೇಲೆ ಮತ್ತೇ ನೇಗಿಲನ್ನು ಅವರು ಹೆಚ್ಚು ಬಳಸಿರುವುದಿಲ್ಲ. ಹಾಗಾಗಿ ಕೃಷಿಗೆ ನೆರವಾಗುವ ಸಲಕರಣೆಗಳನ್ನು ಸರಿಪಡಿಸಿಕೊಂಡ ಮೇಲೆಯೇ ಪೂಜೆಯ ಕಾರ್ಯ. ಇದರಿಂದಾಗಿ ಮಳೆ ಬಂದ ತಕ್ಷಣವೇ ಬಿತ್ತನೆ ಕಾರ್ಯಕ್ಕೆ ಅಣಿಯಾಗಬಹುದು ಎಂಬ ವಿಚಾರವೂ ಅವರಲ್ಲಿದೆ. ಅಲ್ಲದೇ ಭೂಮಿತಾಯಿಯನ್ನು ಪೂಜಿಸುವುದು, ಅವಳನ್ನು ನೇಗಿಲಿನಿಂದ ಚುಚ್ಚುವುದನ್ನು ಆ ದೇವತೆ ಕ್ಷಮಿಸಿ, ಬೆಳೆಯನ್ನು ನೀಡುವ ಸಲುವಾಗಿ ಎಂಬುವುದು ಇದೆ.

ಈ ಹಬ್ಬವು ಬೇರೆ ಬೇರೆ ಭಾಗದಲ್ಲಿ ಬೇರೆ ಬೇರೆಯ ಹೆಸರು ಮತ್ತು ಸ್ವರೂಪದಲ್ಲಿ ಬದಲಾವಣೆ ಇರುತ್ತದೆ. ಈ ಹಬ್ಬವು ನಿಗದಿತವಾದ ದಿನದಂದು ಆಚರಿಸುವುದಿಲ್ಲ. ತಮಗೆ ಅನುಕೂಲವಾದ ದಿನದಂದು ಆಚರಿಸುತ್ತಾರೆ. ಕೃಷಿ ಕಾರ್ಯಕ್ಕೂ ಮುಂಚಿತವಾಗಿ ಆಚರಿಸಬೇಕಷ್ಟೆ ಈ ಹಬ್ಬದಲ್ಲಿ ಗಂಡು ಹೆಣ್ಣು ಎಂಬ ಭೇದ ಭಾವವಿಲ್ಲದೇ ಎಲ್ಲರೂ ಭಾಗವಹಿಸುತ್ತಾರೆ.

೨. ದಿವಸ: ಈ ಹಬ್ಬವನ್ನು ಆಷಾಡದ ಕೊನೆಯ ದಿನಗಳು ಅಥವಾ ಶ್ರಾವಣದ ಮೊದಲ ದಿನಗಳಲ್ಲಿ ಆಚರಿಸುತ್ತಾರೆ. ಈ ಹಬ್ಬದ ವಿಶೇಷವೇನೆಂದರೆ ಮೆಕ್ಕೆಜೋಳವು ಒಂದು ಅಡಿಯಷ್ಟು ಬೆಳೆದಾಗ ಆಚರಿಸುವುದು. ಈ ಹಬ್ಬದ ಪೂಜೆಗೆ ಬೇಕಾದ ಸಂಗ್ರಹವನ್ನು ಪೂಜಾರಿಯು ಮಾಡುತ್ತಾನೆ. ಪೂಜಾರಿಯು ಹಾಲು, ಅಕ್ಕಿ, ತೆಂಗಿನಕಾಯಿ, ಸರಾಯಿ, ಆಡು, ಕುಂಕುಮ, ದೀಪ, ಧೂಪ-ದ್ರವ್ಯ ಮುಂತಾದವುಗಳನ್ನು ಜನರಿಂದ ಶೇಖರಿಸುತ್ತಾನೆ ಅಥವಾ ಜನರಿಂದ ಹಣ ಸಂಗ್ರಹಿಸಿಕೊಂಡು ತರುತ್ತಾನೆ.

ಪೂಜಾರಿಯು ಮತ್ತು ಜನರು ಗ್ರಾಮ ದೇವತೆಯ ಸ್ಥಳದಲ್ಲಿ ಸೇರಿ ಈ ಹಬ್ಬವನ್ನು ಆಚರಿಸುತ್ತಾರೆ. ಪೂಜಾರಿಯು ಒಂದು ಒಲೆಯನ್ನು ಹೂಡಿ, ಬೆಂಕಿಯನ್ನು ಹಚ್ಚಿ ತಾನೇ ಪ್ರಸಾದವನ್ನು ತಯಾರಿಸುತ್ತಾನೆ. ಪೂಜಾರಿಯು ಸಿಹಿ ಕಡಬುಗಳನ್ನು ತಯಾರಿಸುತ್ತಾನೆ. ಅವನು ನಂತರ ದೇವರಿಗೆ ಪೂಜೆ ಮಾಡಿ ಪ್ರಸಾದವನ್ನಿಕ್ಕಿ ಆಡನ್ನು ಬಲಿದಾನ ಮಾಡುತ್ತಾನೆ. ಸರಾಯಿಯನ್ನು ದೇವರಿಗೆ ಸಿಂಪಡಿಸುತ್ತಾನೆ. ಪ್ರಸಾದವನ್ನು ಅಲ್ಲಿ ನೆರೆದ ಎಲ್ಲ ಜನರಿಗೂ ಹಂಚಲಾಗುತ್ತದೆ. ಈ ಹಬ್ಬದ ಆಚರಣೆಯಿಂದ ಗ್ರಾಮ ದೇವತೆ ಸಂತೋಷಗೊಂಡು, ವಿಪತ್ತುಗಳ ಕಳೆದು ಉತ್ತಮ ಬೆಳೆಯನ್ನು ನೀಡುತ್ತಾಳೆಂಬ ಭರವಸೆ ಆ ಜನರಲ್ಲಿದೆ.

ಇದನ್ನು ಕರ್ನಾಟಕದ ಕೆಲವು ಪ್ರದೇಶಗಳಲ್ಲಿನ ಕೃಷಿಕರು ಇನ್ನೂ ಬೇರೆ ರೀತಿಯಲ್ಲಿ ಆಚರಿಸುತ್ತಾರೆ. ಅದಕ್ಕೆ 'ಪರೆವು' ಎನ್ನುತ್ತಾರೆ. ಇದನ್ನು ಎರಡು ರೀತಿಯಲ್ಲಿ ಆಚರಿಸುತ್ತಾರೆ. ಒಂದು, ಊರಿನ ಮುಖ್ಯಸ್ಥರು ಗೊತ್ತುಪಡಿಸಿದ ದಿನದಂದು ಆಚರಿಸುತ್ತಾರೆ. ಊರಿನ ಪ್ರತಿಯೊಂದು ಮನೆಯು ಪರೆವಿಗೆ ಬೇಕಾದ ಅಡುಗೆಯ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗಿ ದೇವಸ್ಥಾನಕ್ಕೆ ಕೊಡಲಾಗುವುದು. ಅಲ್ಲಿ ಪೂಜಾರಿ ಮತ್ತು ಊರಿನವರು ಅಡುಗೆ ಮಾಡಿ ದೇವರಿಗೆ ಎಡೆ ಮಾಡಿ ನಂತರ ಅಲ್ಲಿ ನೆರೆದ ಜನರು ಊಟ ಮಾಡುವುದು. ಇದರಲ್ಲಿ ಮಹಿಳೆಯರಿಗೆ ಪ್ರವೇಶವಿಲ್ಲ. ಎರಡು, ಇದು ಸಾಮಾನ್ಯವಾಗಿ ૩, ೫, ೯ ದಿನಗಳು ಜರುಗುತ್ತದೆ. ಇಲ್ಲಿಯ ವಿಶೇಷವೇನೆಂದರೆ ಊರಿನ ಎಲ್ಲ ಮನೆಯವರು ಮನೆಯನ್ನು ಶುಭ್ರಗೊಳಿಸಿ ತಮಗೆ ಇಷ್ಟಬಂದಂತಹ ಅಡುಗೆ ಮಾಡುವುದು. ಆ ಅಡುಗೆಯನ್ನು ಊರಿನ ಜನರ ಒಂದು ಗುಂಪು ಸಂಗ್ರಹಿಸಿಕೊಂಡು ಹೋಗಿ ದೇವಾಲಯಕ್ಕೆ ಕೊಡುತ್ತದೆ. ಎಲ್ಲಾ ಗುಂಪುಗಳು ಬಂದು ಅರ್ಪಿಸಿದ ಎಡೆಯನ್ನು ದೇವರಿಗೆ ಪೂಜಾರಿಯು ಎಡೆ ಮಾಡುತ್ತಾನೆ. ನಂತರದಲ್ಲಿ ಊರಿನ ಜನರೆಲ್ಲ ದೇವಾಲಯದ ಮುಂದೆ ಕುಳಿತು ಪ್ರಸಾದ ಸ್ವೀಕರಿಸುತ್ತಾರೆ. ಇದು ಮಳೆಗಾಗಿ ನಡೆಯುವ ಪ್ರಾರ್ಥನೆಯು ಹೌದು. ಇಲ್ಲಿ ಗಮನಿಸಬೇಕಾದದ್ದು ಎರಡು ವಿಭಿನ್ನ ಸಮುದಾಯಗಳು ವಿಭಿನ್ನ ಪ್ರದೇಶದಲ್ಲಿ ವಿಭಿನ್ನವಾದ ಆಚರಣೆಗಳನ್ನು ಮಾಡುತ್ತಿರುವುದು ಸಂತುಷ್ಟಿ, ಸಮೃದ್ಧಿಗಾಗಿ ಎಂಬುವುದನ್ನು ಮರೆಯಲಾಗದು.

**೩. ನವಾಯಿ:** ಹೊಸ ಬೆಳೆಯು ಬಂದ ತಕ್ಷಣ ಈ ಹಬ್ಬವನ್ನು ಬಿಲ್‌ರು ಆಚರಿಸುವರು. ಹೊಸದಾಗಿ ಬಂದ ಬೆಳೆಯನ್ನು ಹಳೆಯ ಬೆಳೆಗಳ ಜೊತೆಗೆ ಮಿಶ್ರಣ ಮಾಡಿ, ಲಭ್ಯವಿರುವ ತರಕಾರಿಗಳನ್ನು ಮಿಶ್ರಣ ಮಾಡಿ ಅಡುಗೆ ಮಾಡುತ್ತಾರೆ. ಹೀಗೆ ಮಾಡಿದ ಅಡುಗೆಯನ್ನು ಮೊದಲು ಪೂರ್ವಜರ ಆತ್ಮಗಳಿಗೆ ಎರಡು ಎಲೆಗಳ ಮೇಲೆ ಬಡಿಸಿ ಎಡೆ ಮಾಡಲಾಗುತ್ತದೆ. ಈ ಕಾರ್ಯ ಮುಗಿಯುವವರೆಗೂ ಹೊಸ ಫಸಲಿನ ಬೆಳೆಯನ್ನು ಯಾರೂ ಬಳಸುವಂತಿಲ್ಲ. ಸರಾಯಿಯನ್ನು ಪೂರ್ವಜರ ಹೆಸರಿನಲ್ಲಿ ಅಲ್ಲಿ ನೆರೆದ ಎಲ್ಲರಿಗೂ ಕೊಡಲಾಗುತ್ತದೆ. ಮಣ್ಣಿನಿಂದ ಮಾಡಿದ ದೀಪದಲ್ಲಿ ತುಪ್ಪವನ್ನು ಹಾಕಿ ಬೆಳಗಿಸಲಾಗುತ್ತದೆ. ಒಟ್ಟಿನಲ್ಲಿ ಈ ಹಬ್ಬವನ್ನು ಹಿರಿಯರ ಅಥವಾ ಪೂರ್ವಜರ ಆರಾಧನೆಗೆ ಮೀಸಲಿಟ್ಟಿದ್ದಾರೆ.

**೪. ದಸರಾ:** ದಸರಾ ಹಬ್ಬವು ಬಿಲ್‌ರ ಸ್ವಂತ ಸಾಂಪ್ರದಾಯಿಕ ಹಬ್ಬ ಅಲ್ಲ. ಹಿಂದೂ ಪಂಚಾಂಗದ ಪ್ರಕಾರ ದಸರಾ ಜಾತ್ರೆಯನ್ನು ಅಶ್ವಿಜ ಮಾಸದಲ್ಲಿ ಆಚರಿಸುತ್ತಾರೆ. ಬಿಲ್‌ರು ಮಾತ್ರವಲ್ಲದೇ, ಇಡೀ ಮಧ್ಯಪ್ರದೇಶ ರಾಜ್ಯಾದ್ಯಂತ ಆಚರಿಸುವ ಜಾತ್ರೆಯಾಗಿದೆ. ಆ ಆಚರಣೆಯ ಸಂದರ್ಭದಲ್ಲಿ ಎಮ್ಮೆಯನ್ನು ಬಲಿಕೊಡಲಾಗುತ್ತದೆ. ಬಲಿಕೊಡುವ ಕಾರ್ಯಕ್ರಮವನ್ನು 'ಮೇಘರಾಜನ ಬಲಿ' ಎಂದು ಕರೆಯುತ್ತಾರೆ. ಮಳೆರಾಜನನ್ನು ಪೂಜಿಸುವ ಆಚರಣೆಯಾಗಿ ದಸರಾ ಅಲ್ಲಿ ನಡೆಯುತ್ತದೆ. ಇತ್ತೀಚೆಗೆ ಈ ಹಬ್ಬದಲ್ಲಿ ಪ್ರಾಣಿಗಳ ಬಲಿಯನ್ನು ನಿಲ್ಲಿಸಿದ್ದಾರೆ.

ಜಾತ್ರೆಯಲ್ಲಿ ಇಂದಿಗೂ ಕೂಡ 'ಮಂದರ' ಎನ್ನುವ ದೊಡ್ಡ ಡೊಳ್ಳು, ತಬಲ, ಕೊಳಲು ವಾದ್ಯಗಳನ್ನು ಬಾರಿಸುತ್ತ, ನುಡಿಸುತ್ತ, ಹಾಡುತ್ತ, ಕುಣಿಯುತ್ತ ನಡೆಯುತ್ತದೆ. ಸಂಗೀತ ನೃತ್ಯವು ಇಡೀ ದಿನ ಪೇಟೆಯ ಬೀದಿಗಳಲ್ಲಿ ನಡೆಯುತ್ತದೆ. ಸಾಯಂಕಾಲ ಜನರು ಮನೆಗೆ ಹೋಗುತ್ತಾರೆ ಮತ್ತೆ ಮರುದಿನ ಕೂಡ ನೃತ್ಯವನ್ನು ಮುಂದುವರೆಸಿರುತ್ತಾರೆ.

ಬಿಲ್ ಆದಿವಾಸಿಗಳಾದ 'ಮಾಲವಾ' ಜನರು ದಸರಾ ನವರಾತ್ರಿಯ ದಿನದಂದು ಏಳು ಬುಟ್ಟಿಗಳಲ್ಲಿ ಜೋಳವನ್ನು ತುಂಬಿರುತ್ತಾರೆ. ಆ ಪ್ರತಿಯೊಂದು ಬುಟ್ಟಿಗಳಿಗೂ ಒಂದೊಂದು ಹೆಸರಿನಿಂದ ಕರೆಯುತ್ತಾರೆ. ಅವುಗಳೆಂದರೆ: ಚಾಮುಂಡ ಮಾತಾ, ಧರ್ಮರಾಜ, ಶಾರದ, ಕಂಚುಮಾರ, ರಾಣಿ ಕಾಜಲ್, ಮನೋರಾ ಮತ್ತು ದೇವಿಮಾತಾ. ಇವುಗಳಲ್ಲಿ ಚಾಮುಂಡಾ ಮಾತಾ ಮತ್ತು ಕಂಚುಮಾರ ಎಂಬ ದೇವತೆಗಳಿಗೆ ಎರಡು ಬುಟ್ಟಿಗಳನ್ನು ಉತ್ತರದ ಕಡೆಗೆ, ರಾಣಿ ಕಾಜಲ್ ಎಂಬ ಬುಟ್ಟಿಯನ್ನು ದಕ್ಷಿಣದ ಕಡೆಗೆ ಹಾಗೂ ಮನೋರಾ ಮತ್ತು ದೇವಿಮಾತಾ ಎಂಬ ಎರಡು ಬುಟ್ಟಿಗಳನ್ನು ಪಶ್ಚಿಮದ ಕಡೆಗೆ ಮುಖ ಮಾಡಿ ಇಡುತ್ತಾರೆ. ಎಲ್ಲಾ ಬುಟ್ಟಿಗಳಿಗೆ ಪ್ರತಿದಿನವೂ ನೀರನ್ನು ಮೊಳಕೆ ಒಡೆಯುವ ತನಕ ಸಿಂಪಡಿಸುತ್ತಾರೆ.

ಜೋಳವು ಮೊಳಕೆ ಒಡೆದ ನಂತರ ಎಲ್ಲರೂ ಅದರ ಸುತ್ತಲೂ ಸುತ್ತುತ್ತಾ ಹಾಡನ್ನು ಹಾಡುತ್ತಾ, ಡೋಲನ್ನು ಬಾರಿಸುತ್ತಾ ಕುಣಿಯುತ್ತಾರೆ. ಆ ಬುಟ್ಟಿಗಳನ್ನು ಬರಿದಲೆಯಲ್ಲಿ ಕೆಲವು ವ್ಯಕ್ತಿಗಳು ಹೊತ್ತಿರುತ್ತಾರೆ, ಈ ವೇಳೆಯಲ್ಲಿ ಬಡವಾ ಅಥವಾ ಮಾಟ ಮಂತ್ರ ಮಾಡುವವರು ಇರುತ್ತಾರೆ. ದಸರಾ ದಿನದಂದು ಸಂಗೀತ ನೃತ್ಯಗಳೊಂದಿಗೆ ಎಲ್ಲಾ ಬುಟ್ಟಿಗಳನ್ನು ಮೆರವಣಿಗೆ ಮೂಲಕ ಹರಿಯುವ ಹಳ್ಳದಲ್ಲಿ ತೇಲಿ ಬಿಡುತ್ತಾರೆ. ನಂತರದಲ್ಲಿ ಸಂಬಂಧಿಕರು ಬರಿದಲೆಯಲ್ಲಿ ಹೊತ್ತಂತಹ ವ್ಯಕ್ತಿಗಳಿಗೆ ರುಮಾಲನ್ನು ಕಾಣಿಕೆಯಾಗಿ ನೀಡುತ್ತಾರೆ. ಕಾಣಿಕೆಯನ್ನು ಸ್ವೀಕರಿಸಿದ ಆ ವ್ಯಕ್ತಿಗಳು ರುಮಾಲನ್ನು ತಲೆಗೆ ಸುತ್ತಿಕೊಂಡ ನಂತರವೇ ಹಬ್ಬದ ಎಲ್ಲಾ ಕಾರ್ಯಕ್ರಮಗಳು ಮುಗಿದಿವೆ ಎಂಬ ಕುರುಹು ಆಗಿದೆ.

**೫. ದಿಯಾರಿ:** ಬಿಲ್‌ರು ಕಾರ್ತಿಕ ಮಾಸದಲ್ಲಿ ಈ ಹಬ್ಬವನ್ನು ಆಚರಿಸುತ್ತಾರೆ. ಈ ತಿಂಗಳಿನ ೧೪ ನೆಯ ದಿನ ಬಿಲ್ ಆದಿವಾಸಿಗಳು ಜೋಳವನ್ನು ಕಿವುಚಿದ ಮತ್ತು ದ್ವಿದಳ ಧಾನ್ಯಗಳಿಂದ ಅಡುಗೆ ಮಾಡುತ್ತಾರೆ. ಹದಿನೈದನೆಯ ದಿನದಂದು ಜೋಳದ ಹಿಟ್ಟಿನೊಂದಿಗೆ ಸಿಹಿಯನ್ನು ಸೇರಿಸಿ ರುಚಿಯಾದ ಅಡುಗೆ ತಯಾರಿಸುತ್ತಾರೆ. ಅಂದು ದೀಪಗಳಿಂದ ಮನೆ ಮತ್ತು ಗುಡಿಗಳನ್ನು ಅಲಂಕರಿಸುತ್ತಾರೆ.

ಆ ದಿನದಂದು ಎತ್ತುಗಳನ್ನು ಪೂಜಿಸುತ್ತಾರೆ. ಅಲ್ಲದೇ ಎತ್ತುಗಳಿಗೆ ಗುಣಮಟ್ಟದ ಮೇವು, ಹಿಂಡಿಯನ್ನು ತಿನ್ನಿಸಲಾಗುತ್ತದೆ. ಕೆಲವು ಬ್ರೆಡ್‌ನ ತರದ ಪದಾರ್ಥ ಮತ್ತು ಉಪ್ಪನ್ನು ಅವುಗಳಿಗೆ ನೀಡಲಾಗುತ್ತದೆ. ಅವುಗಳ ಕೋಡುಗಳಿಗೆ ಕೆಂಪು ಮತ್ತು ಹಸಿರು ಬಣ್ಣಗಳನ್ನು ಹಚ್ಚುತ್ತಾರೆ. ಆ ದಿನದಂದು ಎತ್ತುಗಳು ಎಲ್ಲಿ ಬೇಕಾದರೂ ಅಡ್ಡಾಡಬಹುದು. ಯಾರ ಹೊಲದಲ್ಲಾಗಲೀ ಹೋಗಿ ಬೆಳೆಯನ್ನು ತಿನ್ನಬಹುದು ಅಥವಾ ಹಾಳು ಮಾಡಬಹುದಾಗಿದೆ. ಯಾರಿಗೂ ಇದನ್ನು ತಡೆಯುವ ಅಧಿಕಾರವಿಲ್ಲ. ಆ ದಿನ ಮಾತ್ರ ಅದಕ್ಕೆ ಸಂಪೂರ್ಣ ಸ್ವಾತಂತ್ರ್ಯ ಇರುತ್ತದೆ. ಇಂತಹ ದಿನವನ್ನು ಬಿಲ್‌ರು 'ಬಡಿದಿಯಾರಿ' ಎನ್ನುತ್ತಾರೆ. ಇದರ ನಂತರ ಚೋಟಿದಿಯಾರಿ ಎನ್ನುವ ಹಬ್ಬವನ್ನು ಜನರು ನಿಗದಿಪಡಿಸಿ ಆಚರಿಸುತ್ತಾರೆ.

ಈ ರೀತಿಯಲ್ಲಿ ಎತ್ತುಗಳಿಗಾಗಿಯೇ ನಡೆಸುವ ವಿಶೇಷವಾದ ಹಬ್ಬವಾಗಿದೆ. ವರ್ಷಪೂರ್ತಿ ನೇಗಿಲು ಹೊತ್ತು, ದುಡಿದು, ಯಜಮಾನನ ಸೇವೆಯಲ್ಲಿರುತ್ತವೆ. ಅದಕ್ಕಾಗಿ ಅಲ್ಲಿನ ಜನರು ಕೃತಜ್ಞತೆಗಾಗಿ ದಿಯಾರಿ ಹಬ್ಬವನ್ನು ಆಚರಿಸುತ್ತಾರೆ.

**೬. ಹೋಳಿ:** ಹೋಳಿ ಹಬ್ಬವನ್ನು ಫಾಲ್ಗುಣ ಮಾಸದಲ್ಲಿ ಆಚರಿಸುವುದುಂಟು. ಬೆಂಕಿಯ ಕೆಂಡದಲ್ಲಿ ನಡೆಯುವುದು ಈ ಹಬ್ಬದಲ್ಲಿ ವಿಶೇಷ ಕ್ರಿಯೆ. ಜನರು ತಾವು ತೊಂದರೆಗಳಿದ್ದಾಗ ದೇವರಲ್ಲಿ ಬೇಡಿಕೊಂಡಿರುತ್ತಾರೆ. ಆ ಹರಕೆ ಪೂರೈಕೆಯಾದವರು ಅಗ್ನಿಯಲ್ಲಿ ನಡೆಯುತ್ತಾರೆ.

ಹೀಗೆ ನಡೆಯುವುದಕ್ಕೂ ಮೊದಲು ದೇವರಿಗೆ ಕೋಳಿ ಮತ್ತು ತೆಂಗಿನಕಾಯಿಯನ್ನು ಕೊಟ್ಟ ನಂತರ ಎರಡು ಸಲ ಅಗ್ನಿಯಲ್ಲಿ ನಡೆಯುತ್ತಾರೆ. ಆದರೆ ಯಾರಿಗೂ ಯಾವುದೇ ತರಹದಲ್ಲಿ ತೊಂದರೆ, ನೋವು ಆಗದಿರುವುದು ವಿಶೇಷ.[೭]

ಈ ಹಬ್ಬದಲ್ಲಿನ ಮತ್ತೊಂದು ವಿಶೇಷವೆಂದರೆ, ಒಬ್ಬ ಮನುಷ್ಯ ಕಪ್ಪಗಿರುವ ಬಟ್ಟೆ ಧರಿಸಿ ಮೈಗೆಲ್ಲಾ ಇದ್ದಿಲನ್ನು ಹಚ್ಚಿಕೊಂಡು ಚಾದರನ್ನು ಹೊದ್ದುಕೊಂಡಿರುತ್ತಾನೆ. ಅವನಿಗೆ ಬುಡೆಲ್ಯಾ ಎಂದು ಹೆಸರು. ಇನ್ನೊಬ್ಬನು ಹೆಣ್ಣು ಮಕ್ಕಳ ಬಟ್ಟೆ ಧರಿಸಿರುತ್ತಾನೆ, ಅವನಿಗೆ ರೇಯಿ ಎನ್ನುತ್ತಾರೆ. ಅವರಿಬ್ಬರು ಹಾಡು ಕೂಡ ಹಾಡುತ್ತಾರೆ. ಎಲ್ಲರೂ ಹೆಚ್ಚಾಗಿ ಸಾರಾಯಿಯನ್ನು ಕುಡಿಯುತ್ತಾ ಕಾಲ ಕಳೆಯುತ್ತಾರೆ. ಹೀಗೆ ಕಾಲ ಕಳೆದ ನಗೆಯಲ್ಲಿ ಅಜಾಗರೂಕರಂತೆ ವರ್ತಿಸುತ್ತಾರೆ.

ಬಿಲ್‌ನ ಮಾಳವಾ ಜನರು ಮಳೆಯ ಸಲುವಾಗಿ ಮಳೆಗಾಲ ಸಮೀಪಿಸಿದಾಗ ಗೊಂಬೆಗಳ ಜೊತೆಗೆ ಅಣುಕ ಮದುವೆಯನ್ನು ಮಾಡುತ್ತಾರೆ. ಮಳೆ ಆರಂಭವಾದಾಗ ಎರಡೂ ಗೊಂಬೆಗಳನ್ನು ಹರಿಯುವ ಹಳ್ಳದಲ್ಲಿ ವಿಸರ್ಜಿಸುತ್ತಾರೆ. ಈ ಎರಡೂ ಗೊಂಬೆಗಳನ್ನು ದೇವರೆಂದು ಹಾಗೂ ಅವುಗಳೇ ಮಳೆಯನ್ನು ತರುತ್ತಿವೆ ಎಂಬುವುದು ಅವರ ನಂಬಿಕೆಯಾಗಿದೆ.

**೭. ಪಿಥೋರಾ ಪೂಜೆ:** ಹೋಳಿ ಹಬ್ಬದ ಸಂದರ್ಭ, ರಕ್ಷಾ ಬಂಧನದ ಸಂದರ್ಭದಲ್ಲಿ ಪಿಥೋರಾ ಬಾಬಾನ ಪೂಜೆಯನ್ನು ಮಾಡುತ್ತಾರೆ. ಮೇಲೆ ಹೇಳಿದ ಹಬ್ಬಗಳನ್ನು ಎಲ್ಲರೂ ಒಟ್ಟಾಗಿ ಆಚರಿಸುತ್ತಾರೆ. ಈ ಹಬ್ಬವು ವೈಯಕ್ತಿಕವಾದುದು. ಯಾರ ಮನೆಯಲ್ಲಿ ಈ ಆಚರಣೆಯನ್ನು ನೆರವೇರಿಸಲಾಗುತ್ತದೆಯೋ ಅಲ್ಲಿಗೆ ಮನೆಯ ಯಜಮಾನನ ಆಮಂತ್ರಣದ ಮೇರೆಗೆ ಊರ ಜನರು ಬರುತ್ತಾರೆ. ಈ ಹಬ್ಬವನ್ನು ಕುರಿತು ದೀರ್ಘವಾಗಿ ಅಧ್ಯಾಯ ಐದರಲ್ಲಿ ವಿವರಿಸಲಾಗಿದೆ.

## ೪.೯ ಜಾತ್ರೆಗಳು

ಬಿಲ್‌ರ ಬಹುಮುಖ್ಯವಾದ ಜಾತ್ರೆಗಳು ಎರಡಿವೆ: ೧. ಸಿಂಹಾಸನ ಮಾತೆಯ ಜಾತ್ರೆ ೨. ಬಗೋರಿಯಾ ಜಾತ್ರೆ. ಈ ಎರಡೂ ಜಾತ್ರೆಗಳು ಬಿಲ್‌ರ ಸಾಂಸ್ಕೃತಿಕ ಅನನ್ಯತೆಯ ಭಾಗವಾಗಿವೆ.

**೧. ಸಿಂಹಾಸನ ಮಾತೆಯ ಜಾತ್ರೆ:** ಬಿಲ್‌ರು ಈ ಜಾತ್ರೆಯನ್ನು ಮಳೆಗಾಲದ ಸಂದರ್ಭದಲ್ಲಿ ಆಚರಿಸುತ್ತಾರೆ. ವಿಭಿನ್ನವಾದ ಹಳ್ಳಿಗಳಿಗೆ ಸೇರಿದ ಐವರು ಬಡುವಾಗಳು ಒಂದು ಕಡೆ ಸೇರಿ ಸಿಂಹಾಸನ ಮಾತೆಯನ್ನು ಪ್ರಾರ್ಥಿಸುತ್ತಾರೆ. ಮಳೆಗಾಗಿ ಅವರು ಕೆಲವು ದಿನಗಳಿಂದ ಉಪವಾಸ ವ್ರತ ಕೈಗೊಳ್ಳುತ್ತಾರೆ. ಅವರು ರಾತ್ರಿ ವೇಳೆಯಲ್ಲಿ ಮಾತ್ರ ಹಾಲು ಮತ್ತು ಕುಂಬಳಕಾಯಿಯನ್ನು ಸೇವಿಸುತ್ತಾರೆ. ಆ ರಾತ್ರಿಗಳಲ್ಲಿ ದೇವಿಯ ಪಕ್ಕದಲ್ಲಿಯೇ ಕುಳಿತು ರಾತ್ರಿಯೆಲ್ಲ ಹಾಡುತ್ತಾ ದೇವತೆಯನ್ನು ಪ್ರಾರ್ಥಿಸುತ್ತಾರೆ. ಭಾದ್ರಪದ ಮಾಸದ ಹದಿನೈದನೆಯ ದಿನದ ರಾತ್ರಿ ಐದು

ಹಳ್ಳಿಗಳ ಜನರು ಪಾಲ್ಗೊಳ್ಳುತ್ತಾರೆ. ಹಾಗೆ ಪಾಲ್ಗೊಳ್ಳುವಾಗ ದೇವರಿಗೆ ಬಲಿದಾನ ಮಾಡಲು ಆಡುಗಳನ್ನು ಜೊತೆಗೆ ತರುತ್ತಾರೆ. ದೇವಿಗೆ ಆಡುಗಳ ಬಲಿಯಾದ ಮೇಲೆ ಅದನ್ನು ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಈ ರೀತಿ ಪೂಜೆ ಮಾಡುವುದರಿಂದ ಮಳೆಗಾಲವು ಸಂತುಷ್ಟಿಯಿಂದ ಆಗುತ್ತದೆ ಎಂಬ ನಂಬಿಕೆ ಅವರದ್ದಾಗಿದೆ.

**೨. ಬಗೋರಿಯಾ:** ಬಗೋರಿಯಾ ಇದೊಂದು ಬಿಲ್‌ನ ಪದ. ಇದರರ್ಥ 'ಜೀವನ ಸಂಗಾತಿಯನ್ನು ಆಯ್ದುಕೊಳ್ಳಲು ಓಡುವುದು'. ಹೋಳಿ ಹಬ್ಬಕ್ಕೂ ಒಂದು ವಾರ ಮೊದಲು ಬಗೋರಿಯಾ ಶುರುವಾಗುತ್ತದೆ. ವ್ಯಾಪಾರ ನಡೆಯುವ ಸ್ಥಳವಾದ ಮಾರುಕಟ್ಟೆಯಲ್ಲಿ ಈ ಕಾರ್ಯಕ್ರಮವು ಸಂತೆಯ ದಿನದಂದೆ ಜರುಗುತ್ತದೆ. ಬಿಲ್‌ರ ಜೀವನದಲ್ಲಿ ಇದು ಬಹುಮುಖ್ಯವಾದ ಆಕರ್ಷಣೆಯಾಗಿದೆ. ಇದು ಒಂದು ರೀತಿಯಲ್ಲಿ ಮದುವೆಗಾಗಿ ನಡೆಸುವ ಸ್ವಯಂವರವಿದ್ದಂತೆ. ಅಲ್ಲಿ ಯುವಜನರು ತಮ್ಮ ಸಂಗಾತಿಗಳನ್ನು ತಾವೇ ಆಯ್ದುಕೊಳ್ಳಬಹುದು. ಬಗೋರಿಯಾವು ಓಡಿಹೋಗಿ ಮದುವೆಯಾಗುವುದಾಗಿದೆ. ಇನ್ನೂ ಮದುವೆಯಾಗದ ಯುವಕ ಯುವತಿಯರು ಅತೀ ಹೆಚ್ಚು ಆಕಾಂಕ್ಷೆಯನ್ನು ಇಟ್ಟುಕೊಂಡು ಸಂಗಾತಿಯನ್ನು ಹುಡುಕಲು ಈ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಪರಸ್ಪರ ಒಪ್ಪಿಗೆಯ ನಂತರವೇ ಮದುವೆಯ ಕಾರ್ಯವು ನಡೆಯುವುದು. ಬಗೋರಿಯಾದಲ್ಲಿ ಮದುವೆಗಾಗಿ ಓಡಿ ಹೋಗುವುದೊಂದೇ ಮುಖ್ಯ ಉದ್ದೇಶವಾಗಿರುತ್ತದೆ. ಒಂದು ವೇಳೆ ತಮಗೆ ಸರಿಯಾದ ಜೋಡಿ ಸಿಗದಿದ್ದರೆ, ಮುಂದಿನ ಬಗೋರಿಯಾದವರೆಗೂ ಕಾಯುತ್ತಾರೆ.

ಈ ಜಾತ್ರೆಯು ಜಾಬುವಾ ಪ್ರದೇಶದಲ್ಲಿ ಹೆಚ್ಚಾಗಿ ನಡೆಯುತ್ತದೆ. ಬಗೋರಿಯಾ ದಿನದಂದು ಗಂಡಸರು ಹೆಂಗಸರು ಶುಭ್ರವಾದ ಚೆನ್ನಾಗಿರುವ ಬಟ್ಟೆಗಳನ್ನು ಹಾಕಿಕೊಂಡಿರುತ್ತಾರೆ. ಗಂಡಸರು ತಮ್ಮ ಜೊತೆಗೆ ಬಿಲ್ಲು ಬಾಣಗಳನ್ನು ಹಿಡಿದುಕೊಂಡು ಮತ್ತು ತಲೆಗೆ ಟೋಪಿಯನ್ನು ಧರಿಸಿಕೊಂಡು ಮಾರುಕಟ್ಟೆಗೆ ಬರುತ್ತಾರೆ. ನಂತರ ಪ್ರತ್ಯೇಕವಾದ ಗುಂಪುಗಳಾಗಿ ಗಂಡಸರು ಹೆಂಗಸರು ನೃತ್ಯ ಮಾಡಲು ಆರಂಭಿಸುತ್ತಾರೆ. ಕಟ್ಟಿಗೆಯಿಂದ ತಯಾರಿಸಿದ ಕೋಲಿನಿಂದ ಕೋಲಾಟ ರೀತಿಯಲ್ಲಿ ನೃತ್ಯ ಮಾಡುತ್ತಾರೆ. ದಿನವಿಡಿ ಡೊಳ್ಳು, ಕೊಳಲಿನ ಶಬ್ದಗಳೊಂದಿಗೆ ನೃತ್ಯವನ್ನು ಮಾಡುತ್ತಾರೆ.

ಆ ನೃತ್ಯ ಗುಂಪಿನಲ್ಲಿ ಅಥವಾ ಅಲ್ಲಿ ಪಾಲ್ಗೊಂಡ ಹುಡುಗ ಹುಡುಗಿಯರಿಗೆ ಯಾರಾದರೂ ಆಕರ್ಷಿತರಾದರೆ ಮುಖಕ್ಕೆ ಕೆಂಪು ಬಣ್ಣದ ಪುಡಿಯನ್ನು ಎರಚಬೇಕು. ಹುಡುಗನು ಎರಚಿದ ಮೇಲೆ ಹುಡುಗಿಗೆ ಅವನ ಸಾಂಗತ್ಯವು ಇಷ್ಟವಾದರೆ ಪ್ರತಿಯಾಗಿ ಅವಳು ಗುಲಾಲ ಪುಡಿಯನ್ನು ಎರಚಬೇಕು. ಅವಳು ಮರಳಿ ಅವನಿಗೆ ಗುಲಾಲ ಹಾಕದಿದ್ದರೆ, ಅವಳಿಗೆ ಅವನು ಇಷ್ಟವಿಲ್ಲವೆಂದು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಅವನಿಗೆ ಅವಳು ಬೇಕೆ ಬೇಕು ಎಂದಾಗ

ಅವಳನ್ನು ಓಲೈಸಲು ಮರಳಿ ಮರಳಿ ಪ್ರಯತ್ನಿಸಬಹುದು. ಹೀಗೆ ನೃತ್ಯ ಮಾಡುತ್ತಾ ಬಣ್ಣವನ್ನು ಇಬ್ಬರೂ ಎರಚಿಕೊಂಡ ಮೇಲೆ ಸ್ವ ಇಚ್ಛೆಯಿಂದ ಮಾರುಕಟ್ಟೆಯಲ್ಲಿ ತಿರುಗಾಡಬಹುದು.

ಹೀಗೆ ಅಲ್ಲಿ ನೆರೆದ ಎಲ್ಲ ಹುಡುಗರು ಸುಂದರವಾದ ಹುಡುಗಿಗೆ ಬಣ್ಣ ಹಾಕುತ್ತಾ ಸಾಗುತ್ತಾರೆ. ಕೆಲವೊಮ್ಮೆ ಒಬ್ಬಳೇ ಹುಡುಗಿಗೆ ಅನೇಕ ಹುಡುಗರು ಒಪ್ಪಿಗೆ ಸೂಚಿಸಿದ್ದಲ್ಲಿ ಮಧ್ಯವರ್ತಿಯು ಬಂದು ಯಾರಾದರೂ ಒಬ್ಬ ಹುಡುಗನು ಅವಳನ್ನು ಓಲೈಸಿಕೊಳ್ಳಲು ಸಹಾಯ ಮಾಡಲಾಗುತ್ತದೆ. ಅವನಿಗೆ 'ಬಗೋರಿಯಸ್' ಎಂದು ಕರೆಯುತ್ತಾರೆ.

ಇತ್ತ ಒಪ್ಪಿಕೊಂಡ ಜೋಡಿಯು ಜಾತ್ರೆಯನ್ನೆಲ್ಲಾ ಸುತ್ತಾಡಿ, ಸಿಹಿ ತಿಂಡಿಗಳನ್ನು ತಿಂದು, ಸಂತೋಷದಿಂದ ಮಾತನಾಡುತ್ತಾ, ನಗುತ್ತಾ ಜಾತ್ರೆಯಿಂದ ದೂರದ ಪ್ರದೇಶಕ್ಕೆ ಹೋಗುತ್ತಾರೆ. ಅಡವಿಗೆ ಅಥವಾ ಅವರ ಸಂಬಂಧಿಕರ ಮನೆಗೆ ಹೋಗಿ ಇರುತ್ತಾರೆ. ಹುಡುಗಿಯ ತಂದೆಯು ಬಗೋರಿಯಾ ಜಾತ್ರೆಯಿಂದ ಓಡಿಹೋದ ಮಗಳ ಬಗ್ಗೆ ಚಿಂತಿಸುವುದಿಲ್ಲ. ಏಕೆಂದರೆ ತಂದೆಗೆ ತನ್ನ ಮಗಳಿಗೆ ಜೀವನ ಸಂಗಾತಿಯು ಸಿಕ್ಕಿರಬೇಕೆಂದು ಗೊತ್ತಿರುತ್ತದೆ. ನಂತರದಲ್ಲಿ ಆತನಿಗೆ ವಧು ದಕ್ಷಿಣೆಯ ಬಗ್ಗೆ ಮಾತಾಡಿ ಅವರನ್ನು ಮದುವೆ ಮಾಡಬಹುದೆಂಬ ನಂಬಿಕೆ ಇರುತ್ತದೆ.

ಬಗೋರಿಯಾ ಜಾತ್ರೆ ನಡೆದು ಎರಡು ಮೂರು ದಿನಗಳಾದ ಮೇಲೆ ಹುಡುಗನು ಹುಡುಗಿಯನ್ನು ಕರೆದುಕೊಂಡು ಹೋಗಿ ಎಲ್ಲವನ್ನು ಪಾಲಕರಿಗೆ ವಿವರಿಸುತ್ತಾನೆ. ನಂತರದಲ್ಲಿ ಹುಡುಗಿಯ ಮನೆಯವರಿಗೆ ಈ ವಿಷಯವನ್ನು ಮುಟ್ಟಿಸಲಾಗುತ್ತದೆ. ಇದು ಹುಡುಗನ ಪಾಲಕರ ಜವಾಬ್ದಾರಿಯಾಗಿರುತ್ತದೆ. ಕೆಲವು ಸಂದರ್ಭದಲ್ಲಿ ಹುಡುಗಿಯ ತಂದೆಯೇ ಹುಡುಗನ ಮನೆಗೆ ಮಗಳನ್ನು ಹುಡುಕಿಕೊಂಡು ಬರಬಹುದು. ಏನೇ ಆದರೂ ಹುಡುಗ ಹುಡುಗಿಗೆ ಯಾರೂ ಬಯ್ಯುವುದಿಲ್ಲ. ಹಿರಿಯರೆಲ್ಲರೂ ಸೇರಿ ಮಾತನಾಡಿ ವಧುದಕ್ಷಿಣೆಯನ್ನು ನಿರ್ಧರಿಸುತ್ತಾರೆ. ಹುಡುಗನ ಪಾಲಕರಿಂದ ಹುಡುಗಿಯ ಪಾಲಕರಿಗೆ ಹಣವನ್ನು ಕೊಡಿಸಲಾಗುತ್ತದೆ. ಇದರ ನಂತರ ಅವರಿಬ್ಬರೂ ಪತಿ ಪತ್ನಿಯರ ಹಾಗೆ ಜೀವನ ಮಾಡಬಹುದು.

ಮತ್ತೊಂದು ವಿಚಾರವೇನೆಂದರೆ ಇಬ್ಬರೂ ಜಾತ್ರೆಯಲ್ಲಿ ಪರಸ್ಪರ ಒಪ್ಪಿಕೊಂಡು ಓಡಿಹೋದ ನಂತರ, ಒಂದು ವೇಳೆ ಹುಡುಗಿಯ ಮನಸ್ಸು ಬದಲಾಗಿ ಆ ಹುಡುಗ ಬೇಡವೆಂದು ತನ್ನ ಮನೆಗೆ ಮರಳಿ ಹೋದರೆ, ಹುಡುಗನು ತನ್ನ ಮನೆಗೆ ಬಂದು ಪಾಲಕರ ಬಳಿಯಲ್ಲಿ ತನ್ನ ಆಸೆಯನ್ನು ವಿವರಿಸಿದಾಗ ಹುಡುಗನ ತಂದೆ ಅಥವಾ ಮಧ್ಯವರ್ತಿಯು ಹುಡುಗಿಯ ಮನೆಗೆ ಹೋಗಿ ಅವಳ ತಂದೆಗೆ ತಿಳಿಸಿ ಹೇಳುತ್ತಾರೆ. ಹಿರಿಯರೆಲ್ಲರೂ ಸೇರಿ ಮಾತುಕತೆಯ ಮೂಲಕ ವಧುದಕ್ಷಿಣೆ ಮಾತನಾಡಿ ಬಗೆಹರಿಸಬಹುದು. ಅಲ್ಲಿ ಭಾಗಶಃ ವಧುದಕ್ಷಿಣೆಯನ್ನು ಪಡೆದು ಅದನ್ನು ಅಲ್ಲಿಯೇ ಸರಾಯಿ ಕುಡಿಯಲು ಖರ್ಚು ಮಾಡುತ್ತಾರೆ. ಬಾಕಿ ಉಳಿದ ಹಣವನ್ನು

ಹುಡುಗನ ತಂದೆಯು ತಂದುಕೊಟ್ಟ ನಂತರ ಹುಡುಗಿಯನ್ನು ಹುಡುಗನ ಜೊತೆಗೆ ಜೀವನ ನಡೆಸಲು ಕಳುಹಿಸುತ್ತಾರೆ.

ಇನ್ನೊಂದು ಸಂದರ್ಭದಲ್ಲಿ ಹುಡುಗನು ಹುಡುಗಿಗೆ ಬಣ್ಣವನ್ನು ಹಾಕಿದ್ದಲ್ಲಿ, ಮರಳಿ ಹುಡುಗಿಯು ಒಪ್ಪದೇ ಇದ್ದಾಗ ಅವನು ಮರಳಿ ಮರಳಿ ಪ್ರಯತ್ನಿಸುತ್ತಾನೆ. ಅದಕ್ಕೂ ಒಪ್ಪದಿದ್ದಲ್ಲಿ ಬಲವಂತವಾಗಿ ಅವಳನ್ನು ಕರೆದೊಯ್ಯುತ್ತಾನೆ. ಹಾಗೆಯೇ ಹುಡುಗಿಯ ಕಡೆಯಿಂದ ಸಂಬಂಧಿಕರಾಗಲಿ, ಸ್ನೇಹಿತರಾಗಲಿ ಬಂದು ಹುಡುಗನ ಜೊತೆಗೆ ಜಗಳವನ್ನು ಮಾಡುತ್ತಾರೆ. ಹೀಗೆ ಶುರುವಾದ ಜಗಳಗಳು ಕೊಲೆಯಲ್ಲಿಯೂ ಅಂತ್ಯವಾಗಿವೆ. ಅಥವಾ ಹುಡುಗನ ಪಾಲಕರು ಹುಡುಗಿಯ ಪಾಲಕರ ಮನೆಗೆ ಹೋಗಿ ಹಿರಿಯರೊಂದಿಗೆ ಮಾತುಕತೆ ನಡೆಸಿ, ವಧುದಕ್ಷಿಣೆ ಕೊಟ್ಟು ಮಗನಿಗೆ ಅವಳನ್ನೇ ತಂದುಕೊಳ್ಳುತ್ತಾರೆ. ಮೊದಲು ಹೇಳಿದ ಸಂದರ್ಭಗಳಿಗಿಂತ ಇಲ್ಲಿ ವಧುದಕ್ಷಿಣೆಯ ಹಣದ ಮೊತ್ತ ಹೆಚ್ಚಾಗಿರುತ್ತದೆ.

ಬಗೋರಿಯಾ ಜಾತ್ರೆಯು ಕೇವಲ ಹೊಸದಾಗಿ ಮದುವೆಯಾಗುವವರಿಗೆ ಮಾತ್ರ ಎಂದೇನಿಲ್ಲ. ಮದುವೆಯಾದವರಿಗೂ ಹೊಸ ಸಂಗಾತಿಯ ಆಯ್ಕೆ ಬೇಕೆಂದರೆ ಹುಡುಕಿಕೊಳ್ಳಬಹುದು. ಸಾಮಾನ್ಯವಾಗಿ ಮದುವೆಯಾಗಿದ್ದ ಹೆಣ್ಣು ಮಕ್ಕಳಿಗೆ ಬಣ್ಣವನ್ನು ಹಾಕುವುದಿಲ್ಲ. ಹಾಗೆಯೇ ಇಬ್ಬರೂ ಒಪ್ಪಿಕೊಂಡು ಓಡಿಹೋಗುತ್ತಾರೆ. ಓಡಿಸಿಕೊಂಡು ಹೋದ ಹೊಸ ಪ್ರೇಮಿಯು ಆಕೆಯ ಹಳೆಯ ಗಂಡನಿಗೆ ಪರಿಹಾರ ಕೊಡಬೇಕಾಗುತ್ತದೆ.

ಈ ಬಗೋರಿಯಾ ಜಾತ್ರೆಯು ಎಲ್ಲಾ ಕೃಷಿ ಕಾರ್ಯಗಳು ಮುಗಿದ ನಂತರವೇ ಜರುಗುತ್ತದೆ. ಸುಗ್ಗಿಯ ಕಾಲದಲ್ಲಿ ಇದನ್ನು ಸಂಭ್ರಮಿಸುತ್ತಾರೆ. ಜಾತ್ರೆಯು ಆ ವರ್ಷದ ಫಸಲಿನ ಮೇಲೆ ನಿಗದಿಯಾಗುತ್ತದೆ.

ಹೀಗೆ ಬಿಲ್ ಬುಡಕಟ್ಟು ತನ್ನದೇ ಆದ ಆಚರಣೆಯ ಸಾಂಸ್ಕೃತಿಕ ಲೋಕವಾಗಿದೆ. ತನ್ನೊಳಗೆ ಜಾನಪದದ ಶ್ರೀಮಂತಿಕೆಯನ್ನು ಅಭಿವ್ಯಕ್ತಪಡಿಸುತ್ತದೆ. ನಂಬಿಕೆಗಳು ಅವರ ಜೀವನವನ್ನು ಸಾಂಪ್ರದಾಯಕವಾಗಿಸಿವೆ. ಕೃಷಿಯ ಆದಾಯದ ಮೇಲೆಯೇ ಜೀವನ ನಿರ್ವಹಣೆಯನ್ನು ಸಮರ್ಥವಾಗಿ ನಡೆಸಿಕೊಂಡು ಹೋಗುತ್ತಿರುವ ಒಂದು ಜನಾಂಗವಾಗಿದೆ. ಬಿಲ್‌ರು ತಮಗೆ ಬೇಕೆನಿಸಿದ್ದ ಆಹಾರ ಪದಾರ್ಥಗಳನ್ನು ಬೆಳೆದುಕೊಳ್ಳುವ, ಹೆಚ್ಚಾದ್ದನ್ನು ಮಾರಾಟ ಮಾಡುವ ಮತ್ತು ಅದರಿಂದ ಬಂದ ಹಣದಿಂದ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡು ಹೋಗುತ್ತಿರುವ ಎಲ್ಲಾ ಲಕ್ಷಣಗಳು ಕಂಡುಬರುತ್ತವೆ.

**ಕೊನೆಯ ಟಿಪ್ಪಣಿ**

೧. ವಸಂತ ನಿರಗಿಣೆ ಮತ್ತು ಭಾನುಶಂಕರ ಗೆಹಲೋತ. 'ಪಿಥೋರಾ', ಪು. ೧೦

೨. ಬಚ್ಚನ್ ಕುಮಾರ, 'ದ ಬಿಲ್ಸ ಆ್ಯನ್ ಎಥ್ನೋ - ಹಿಸ್ಟಾರಿಕ್ ಅನಾಲಿಸಿಸ್', ಪು. ೧೬

೩. ಕಮಲಾದೇವಿ ಚಟ್ಟೋಪಾಧ್ಯಾಯ, 'ದ ಬಿಲ್ಸ ಆಫ್ ಗುಜರಾತ ಆ್ಯಂಡ ರಾಜಸ್ಥಾನ', ಪು. ೫೬

೪. ಡಬ್ಲ್ಯೂ. ಕ್ರುಕ್, 'ದ ಟ್ರೈಬ್ಸ ಆ್ಯಂಡ್ ಕಾಸ್ಟ ಆಫ ದ ನಾರ್ಥ ವೆಸ್ಟರ್ನ ಇಂಡಿಯಾ' ಸಂ-೧೧, ಪು. ೪೭

೫. ಕಮಲಾದೇವಿ ಚಟ್ಟೋಪಾಧ್ಯಾಯ, 'ದ ಬಿಲ್ಸ ಆಫ್ ಗುಜರಾತ ಆ್ಯಂಡ ರಾಜಸ್ಥಾನ', ಪು. ೫೬

೬. S. Verma, Bhil Dialects and Khandeshi:A Linguistic Analysis, P. 13

೭. ಗಂಗೂಬಾಯಿ ಬಿಲ್, ೫೦ ವಯಸ್ಸು, ತಾ. ೩೦-೮-೨೦೧೬, ಊರು: ಮೇಘನಗರದ, ಜಾಬುವಾ, ಮಧ್ಯಪ್ರದೇಶ

## ಅಧ್ಯಾಯ ಐದು

## ಪಿಥೋರಾ ಚಿತ್ರಕಲೆಯ ಪರಂಪರೆ

೫.೧ ಪಿಥೋರಾ ಚಿತ್ರಕಲೆ: ಪೌರಾಣಿಕ ಹಿನ್ನೆಲೆ

೫.೨ ಪಿಥೋರಾ ಚಿತ್ರಶೈಲಿ: ಪೂಜೆ ಮತ್ತು ಆಚರಣೆಯ ವಿವಿಧ ಹಂತಗಳು

೫.೩ ಪಿಥೋರಾ ಚಿತ್ರಕಲೆ: ಸಾಂಪ್ರದಾಯಿಕ ನಂಬಿಕೆ

೫.೪ ಪಿಥೋರಾ ಚಿತ್ರಕಲೆ: ತಂತ್ರ, ರಚನಾ ವಿಧಾನ ಮತ್ತು ಸಾಮಗ್ರಿಗಳು

೫.೫ ಪಿಥೋರಾ: ಚಿತ್ರಗಳ ವಿಶ್ಲೇಷಣೆ

# ಅಧ್ಯಾಯ ೫

# ಪಿಥೋರಾ ಚಿತ್ರಕಲೆಯ ಪರಂಪರೆ

## ಪಿಥೋರಾ ಚಿತ್ರಕಲೆಯ ಪರಂಪರೆ

ಭಾರತವು ಸಂಸ್ಕೃತಿ ಮತ್ತು ಸಂಪ್ರದಾಯಗಳಿಂದ ಕೂಡಿದ ದೇಶ. ಇಲ್ಲಿ ಏಕಮುಖಿಯಾದ ಸಂಪ್ರದಾಯ ಮತ್ತು ಸಂಸ್ಕೃತಿಯು ಕಂಡುಬರುವುದಿಲ್ಲ. ಇಲ್ಲಿ ಅನೇಕ ಕಿರುಪರಂಪರೆಯ ಮತ್ತು ಬಹುಸಂಸ್ಕೃತಿಯ ವಿಭಿನ್ನವಾದ ನೆಲೆಗಳು ಕಾಣಬರುತ್ತವೆ. ಅಂತಹ ವಿಭಿನ್ನತೆಯ ಸಂಪ್ರದಾಯ, ಸಂಸ್ಕೃತಿ ಮತ್ತು ಜೀವನಶೈಲಿ ಮಧ್ಯಪ್ರದೇಶದ ಜಾಬುವಾದ ಬಿಲ್ ಆದಿವಾಸಿಗಳಲ್ಲಿ ಕಂಡುಬರುತ್ತದೆ. ಈ ಹಿಂದೆ ಬಿಲ್‌ರ ಸಮಾಜ, ಸಂಸ್ಕೃತಿಯನ್ನು ವಿಶ್ಲೇಷಿಸಲಾಗಿದೆ. ಬಿಲ್‌ರ ಸಾಂಸ್ಕೃತಿಕ ಭಾಗವಾಗಿಯೇ ಇರುವ ಅವರ ಚಿತ್ರಕಲೆ, ಭಾರತೀಯ ಚಿತ್ರಕಲೆಯ ಪರಂಪರೆಯಲ್ಲಿ ವಿಭಿನ್ನವಾಗಿ ಮೂಡಿಬಂದಿದೆ. ಅವರು ಚಿತ್ರಕಲೆಯನ್ನು ತಮ್ಮ ಬದುಕಿನ ಅವಿಭಾಜ್ಯವಾದ ಧಾರ್ಮಿಕ ಆಚರಣೆಯ ಭಾಗವಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಅಂತಹ ಚಿತ್ರಕಲೆಯನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವ ಅಗತ್ಯವಿದೆ.

ಬಿಲ್ ಬುಡಕಟ್ಟು ಜನಸಮುದಾಯದ ಚಿತ್ರಕಲೆಯು ಆಧುನಿಕ ಕಾಲಘಟ್ಟದಲ್ಲೂ ಬೆಳವಣಿಗೆ ಮತ್ತು ರೂಪಾಂತರವನ್ನು ಹೊಂದುತ್ತಿದೆ. ಇದಕ್ಕೆ ಕಾರಣ ಆ ಜನರ ಕುಲಶ್ರದ್ಧೆ ಮತ್ತು ಧಾರ್ಮಿಕ ಶ್ರದ್ಧೆ ಪ್ರಮುಖವಾಗಿದೆ. ಅನೇಕ ಜನಪದ ಆಚರಣೆಗಳು ಮತ್ತು ಕಸುಬುಗಳು ನಾಶವಾಗುತ್ತಿವೆ ಮತ್ತು ವಾಣಿಜ್ಯೀಕರಣಗೊಂಡಿವೆ. ಬಿಲ್ ಬುಡಕಟ್ಟು ಜನರ ಚಿತ್ರಕಲೆಯು ನಾಶವಾಗದೇ ಸಂಪ್ರದಾಯವನ್ನೂ ಉಳಿಸಿಕೊಂಡು, ವಾಣಿಜ್ಯೀಕರಣದ ಆಧುನಿಕತೆಗೂ ತೆರೆದುಕೊಳ್ಳುತ್ತಿದೆ. ಈ ರೀತಿಯಾಗಲು ಭಾರತ ಸರ್ಕಾರ ಅವರ ಕಲೆಯನ್ನು ಸಂರಕ್ಷಿಸುವ ಜವಾಬ್ದಾರಿಯನ್ನು ಹೊತ್ತಿರುವುದು ಒಂದು. ಅಲ್ಲದೇ ಆ ಜನರ ಚಿತ್ರಕಲೆಯನ್ನು ಆಧುನಿಕವಾಗಿ ಅಂತರಾಷ್ಟ್ರೀಯ ಮಟ್ಟದಲ್ಲಿ ಸಹ ಪ್ರಚಾರಗೊಳಿಸಿದೆ. ಇದರಿಂದಾಗಿ ಬಿಲ್ ಬುಡಕಟ್ಟು ಚಿತ್ರಕಲೆಯು ಹೆಚ್ಚು ಜನಪ್ರಿಯತೆಯನ್ನು ಗಳಿಸುತ್ತಿದೆ. ಈ ಜನಪ್ರಿಯತೆಗೆ ಕಾರಣ ಸಂಪ್ರದಾಯವನ್ನು ಉಳಿಸಿಕೊಂಡಿರುವುದು ಮತ್ತು ಹೊಸ ಪರಂಪರೆಯನ್ನು ಹುಟ್ಟುಹಾಕುತ್ತಿರುವುದು.

ಪಿಥೋರಾ ಚಿತ್ರಕಲೆಯು ಮೂಲತಃ ಬಿಲ್, ಬಿಲಾಲ್, ಬಾರೆಲಾ, ಪಟಲಿಯಾ ಮತ್ತು ರಾಥವಾ ಬುಡಕಟ್ಟುಗಳ ಪರಂಪರೆಯಾಗಿದೆ. ಇದು ಪಿಥೋರಾ ಪೂಜೆಯ ಭಾಗವಾಗಿದೆ. ಬಿಲ್ ಜನಾಂಗದ ಸಾಂಪ್ರದಾಯಿಕ ಚಿತ್ರಕಲೆಯು ಅವರು ವಾಸಿಸುವ ಸ್ಥಳದ ಮನೆಯಲ್ಲಿ ಆರಂಭಗೊಳ್ಳುತ್ತದೆ. ಪ್ರತಿ ವರ್ಷವೂ ತಮ್ಮ ಧಾರ್ಮಿಕ ಸಂಪ್ರದಾಯದ ಭಾಗವಾಗಿ ಚಿತ್ರ ಬರೆಯುತ್ತಾರೆ. ಅವರು ಗೋಡೆಯ ಮೇಲೆ ಚಿತ್ರಗಳನ್ನು ಬರೆಯುವುದು ಅವರಿಗೊಂದು ಸಂಪ್ರದಾಯಬದ್ಧ ವಾಡಿಕೆಯಾಗಿ ಬಂದಿದೆ.

ಬಿಲ್‌ರು ಮತ್ತು ರಾಥವಾ ಬುಡಕಟ್ಟು ಜನಾಂಗದವರು ಪ್ರಮುಖ ಪಿಥೋರಾ ಚಿತ್ರಕಲಾವಿದರು. ಈ ಕಲಾವಿದರು ಪಿಥೋರಾ ಚಿತ್ರಕಲೆಯನ್ನು ಪಿಥೋರಾ ಪೂಜೆಯ ಭಾಗವಾಗಿ ಬಿಡಿಸುತ್ತಾರೆ. ಈ ಪೂಜೆಯ ಸಂದರ್ಭದಲ್ಲಿ 'ಪಿಥೋರಾ ಬಾಬಾ'ನನ್ನು ಗೋಡೆಯ ಮೇಲೆ ದೈವಭಕ್ತಿಯಿಂದ ಚಿತ್ರಬಿಡಿಸಿ ಪೂಜಿಸುವ ಒಂದು ವಿಧಾನವಾಗಿದೆ. ಈ ಫಿಥೋರಾ ಬಾಬಾನನ್ನು ಬಿಲ್ ಮತ್ತು ರಾಥವಾ ಜನರು ಮಾತ್ರವೇ ಬಿಡಿಸುತ್ತಾರೆಂದು ಏನಿಲ್ಲಾ. ಬಡವಾ ಸಹಾಯದಿಂದ ಮತ್ತು ಈ ಬುಡಕಟ್ಟುಗಳ ಸಾನಿಧ್ಯದಲ್ಲಿ ಝುಮರಾಲ್, ಹರಿಜನ ಮತ್ತಿತರ ಜಾತಿಗಳಲ್ಲೂ ಪಿಥೋರಾ ಪೂಜೆಯಲ್ಲಿ ಭಾಗಿಯಾಗುವುದಿದೆ. ಅವರ ಮನೆಗಳಲ್ಲಿ ಹಿಂದೂ ದೇವ-ದೇವತೆಗಳ ಜೊತೆಗೆ ಪಿಥೋರಾ ಬಾಪಜಿಯನ್ನು ಗೋಡೆಗಳ ಮೇಲೆ ಚಿತ್ರಿಸಿದ್ದು ಕಂಡುಬರುತ್ತದೆ. ಅವರ ನಂಬಿಕೆಯ ಪ್ರಕಾರ ಪಿಥೋರಾ ಬಾಬಾ ಎಲ್ಲಾ ಮನೆಯ ರಕ್ಷಕನಾಗಿದ್ದಾನೆ. ಪಿಥೋರಾ ಬಾಬಾನನ್ನು ಪೂಜಿಸುವವರಿಗೆ ಭಾವ, ಭಕ್ತಿ, ವಿಶ್ವಾಸ, ನಂಬಿಕೆ, ಧೈರ್ಯ, ಶ್ರದ್ಧೆ, ಆರಾಧನೆಯ ಭಾಗವಾಗಿ ಕಾಣುತ್ತಾನೆ. ಈ ಜನಾಂಗದವರಲ್ಲಿ ಪುರುಷನು ಮಾತ್ರವೇ ಪಿಥೋರಾ ಬಾಬಾನ ಚಿತ್ರವನ್ನು ರಚಿಸಬೇಕಾಗುತ್ತದೆಂಬುದು ಗಮನಿಸಬೇಕಾದ ಸಂಗತಿಯಾಗಿದೆ.

ಇನ್ನೊಂದು ಬುಡಕಟ್ಟಾದ 'ಕಲೌತಾ' ಜನರಲ್ಲಿಯೂ ಪಿಥೋರಾ ಪೂಜೆಯ ವಿಧಾನವಿದೆ. ಕಲೌತಾ ಜನರು ಅದಕ್ಕೆ 'ಪಿಥೋರಾ-ಪಿಥೋರಿ' ಎಂದು ಕರೆದುಕೊಳ್ಳುತ್ತಾರೆ. ಅವರ ಪಿಥೋರಾ ಚಿತ್ರ ಮತ್ತು ಪೂಜೆಯ ವಿಧಾನಗಳೆರಡೂ ಬಿಲ್‌ರ ಪಿಥೋರಾಗಿಂತ ಭಿನ್ನವಾಗಿದೆ. ಕಲೌತಾ ಜನರು 'ಪಿಥೋರಾ-ಪಿಥೋರಿ'ಯನ್ನು ಪಿತೃ-ಪುರುಷನೆಂದು ನಂಬಿದ್ದಾರೆ. ಈ ಚಿತ್ರವನ್ನು ಬಿಲ್‌ರ ಹಾಗೆ ಪುರುಷ ಬಿಡಿಸುವುದಿಲ್ಲ, ಮನೆಯ ಹೆಣ್ಣುಮಕ್ಕಳು ಬಿಡಿಸುತ್ತಾರೆ. ಅವರು ಈ ಚಿತ್ರವನ್ನು ಶ್ರಾವಣ ಮಾಸದ ಅಮವಾಸ್ಯೆ ದಿನದಂದು ಬಿಡಿಸುತ್ತಾರೆ. ಅದನ್ನು ಹಾಲುಗಲ್ಲು, ಕೆಮ್ಮಣ್ಣು ಮತ್ತು ಗುಲಾಬಿಯ ಮಣ್ಣಿನ ಬಣ್ಣಗಳಿಂದ ರಚಿಸುತ್ತಾರೆ. ಆದರೆ ಬಿಲ್‌ರು ಪಿಥೋರಾ ಚಿತ್ರವನ್ನು ಹಲವಾರು ಬಣ್ಣಗಳಿಂದ ಬಿಡಿಸುತ್ತಾರೆ. ತೊಗರಿಕಟ್ಟಿಗೆಯ ಕಡ್ಡಿಗೆ ಹತ್ತಿಯನ್ನು ಸುತ್ತಿಕೊಂಡು ಪಿಥೋರಾ ಚಿತ್ರವನ್ನು ರಚಿಸುತ್ತಾರೆ. ಕಲೌತಾ ಪಿಥೋರಾದಲ್ಲಿ ಆಕೃತಿಗಳನ್ನು ಸರಳ

ಮತ್ತು ಅಡ್ಡವಾದ ಗೆರೆಗಳ ಬದಲು ಗುಣಾಕಾರ ಚಿಹ್ನೆಯಿಂದ ಬಿಡಿಸುತ್ತಾರೆ. ಪ್ರಾಗೈತಿಹಾಸಿಕ ಕಾಲದ ಮಾನವನು ಸಹ ಇದೇ ತರಹ ಗುಣಾಕಾರ ಚಿಹ್ನೆಗಳನ್ನು ಬಳಸಿ ಮನುಷ್ಯಾಕೃತಿಯ ಚಿತ್ರಗಳನ್ನು ಬಿಡಿಸಿರುವುದನ್ನು ಕಾಣಬಹುದು. 'ಪಿಥೋರಾ-ಪಿಥೋರಿ' ಕುದುರೆಗಳ ಮೇಲೆ ಸವಾರನ ರೂಪದ ಚಿತ್ರಗಳನ್ನು ರಾಠವಾದವರು ರಚಿಸಿದ್ದಾರೆ. ಬಿಲ್‌ರು ಮುಖವನ್ನು ಮೂರು ತ್ರಿಕೋನಗಳನ್ನು ಕೂಡಿಸಿ ಬರೆಯುತ್ತಾರೆ. ರೇಖೆಗಳು ಸರಳ ಮತ್ತು ಏಕವರ್ಣ ರೂಪದಲ್ಲಿರುತ್ತವೆ. ಸೂರ್ಯ-ಚಂದ್ರರ ಜೊತೆಗೆ ಆಕಳು, ಆಡು, ಚೇಳು, ಡಮರುಗ, ನವಿಲು, ಗಿಡ, ತುಳಸಿ ಹೂವು, ಮಜ್ಜಿಗೆ ಕಡಿಯುತ್ತಿರುವ ಮಹಿಳೆ ಮುಂತಾದ ಅನೇಕ ಚಿತ್ರಗಳನ್ನು ಬಿಡಿಸುತ್ತಾರೆ. ಹಾಗೆಯೇ 'ಪಿಥೋರಾ-ಪಿಥೋರಿ' ಚಿತ್ರದ ಮಧ್ಯೆ ಜೋಕಾಲಿ ಆಡುತ್ತಿರುವ ಬಾಲಕನ ಚಿತ್ರವನ್ನು ಅವಶ್ಯವಾಗಿ ಬರೆಯಲಾಗುತ್ತದೆ. ಈ ದೃಷ್ಟಿಯಿಂದ ಗಮನಿಸಿದಾಗ ಬಿಲ್‌ರ ಪಿಥೋರಾ ಕಲೌತಾ ಜಾತಿಯ ಪಿಥೋರಾಗಿಂತ ಹೆಚ್ಚು ವ್ಯಾಪಕ ಮತ್ತು ಪುರಾತನವಾದದ್ದಾಗಿದೆ.

ಹೀಗೆ ವಿಭಿನ್ನವಾದ ಒಂದು ಚಿತ್ರಕಲಾ ಪರಂಪರೆಯೊಂದು ಭಾರತದ ಪಶ್ಚಿಮ ಕೇಂದ್ರ ಭಾಗದಲ್ಲಿ ಬೆಳೆದು ಬಂದಿದೆ. ಗುಜರಾತ, ರಾಜಸ್ತಾನ, ಮಧ್ಯಪ್ರದೇಶ, ಮಹಾರಾಷ್ಟ್ರ ಮತ್ತು ಛತ್ತಿಸಗಢನಲ್ಲಿ ವಿಪುಲವಾಗಿ ಬಿಲ್ ಜನಾಂಗ ಕಂಡುಬರುತ್ತದೆ. ಈ ಜನಾಂಗವು ಪೂಜೆ ಮತ್ತು ಆಚರಣೆಯ ಹಿನ್ನೆಲೆಯಲ್ಲಿ ರಚಿಸುವ ಕಲಾಭಿವ್ಯಕ್ತಿಯೇ ಪಿಥೋರಾ ಚಿತ್ರಕಲೆ. ಇದು ಪ್ರಕೃತಿಯಲ್ಲಿ ಆ ಜನರಿಗೆ ಕಂಡುಬರುವ ವಸ್ತುಗಳನ್ನು ತಮ್ಮ ಕಲೆಯಲ್ಲಿ ಅಭಿವ್ಯಕ್ತಿಸುತ್ತಾರೆ. ಪ್ರಕೃತಿಯಲ್ಲಿನ ಜೀವ-ನಿರ್ಜೀವ ವಸ್ತುಗಳ ಜೊತೆಯ ಸಂಬಂಧದ ಮತ್ತು ಪ್ರೀತಿ ಸಂಕೇತವಾಗಿ ಚಿತ್ರಗಳನ್ನು ತಮ್ಮ ಮನೆಯ ಗೋಡೆಯ ಮೇಲೆ ಬಿಡಿಸಲಾಗುತ್ತದೆ. ಇವೆಲ್ಲವುಗಳ ಜತೆಗೆ 'ಪಿಥೋರಾ ಬಾಬಾ'ನ ಚಿತ್ರ ಬಹುಮುಖ್ಯವಾದದ್ದು. ಈ ಪಿಥೋರಾ ಬಾಬಾ ಎನ್ನುವ ದೈವಾಭಿವ್ಯಕ್ತಿಯಲ್ಲಿಯೇ ಈ ಚಿತ್ರಕಲೆ ಹುಟ್ಟಿತು ಮತ್ತು ಅದರ ಹೆಸರಿನಿಂದಲೇ ಕರೆಯಲ್ಪಟ್ಟಿತು. ಈ ಹಿನ್ನೆಲೆಯಿಂದ ಗಮನಿಸಿದಾಗ ಪಿಥೋರಾ ಚಿತ್ರಕಲೆಯ ಉಗಮಕ್ಕೆ ಕಾರಣವೇನಿರಬಹುದೆಂಬ ಕುತೂಹಲ ಕಾಡದೆ ಇರಲಾರದು. ಪಿಥೋರಾ ಚಿತ್ರಕಲೆಯ ಬಗ್ಗೆಯೂ ಕೆಲವು ಪುರಾಣ(ಮಿತ್)ಗಳಿವೆ. ಅವುಗಳನ್ನು ಇಲ್ಲಿ ಗಮನಿಸಬಹುದಾಗಿದೆ.

### ೫.೧ ಪಿಥೋರಾ ಚಿತ್ರಕಲೆ : ಪೌರಾಣಿಕ (Myth) ಹಿನ್ನೆಲೆ

ಬಿಲ್‌ರ ಅಭಿಪ್ರಾಯದ ಹಿನ್ನೆಲೆಯಲ್ಲಿ ಒಂದು ಮಿತ್ ಪಿಥೋರಾದ ಬಗ್ಗೆ ಈ ರೀತಿ ಇದೆ. ಇದನ್ನು ಪಿಥೋರಾ ಚಿತ್ರ ಕಲಾವಿದರಾದ ಮಧ್ಯಪ್ರದೇಶದ ಜಾಬುವಾದವರಾದ ಸುಭಾಷ ಬಿಲ್ ಮತ್ತು ದಿಲೀಪ ಬಿಲ್ ಎಂಬ ಸಹೋದರರು ಹೇಳಿದ ಒಂದು ಪುರಾಣ ಮುಖ್ಯವೆನಿಸುತ್ತದೆ. ಪಿಥೋರಾ ಕಲೆಯ ಉಗಮಕ್ಕೆ ಒಂದು ಪೌರಾಣಿಕ ಕಥೆಯನ್ನು ಅವರು ಹೇಳುತ್ತಾರೆ. ಅದು ಹೀಗಿದೆ.

"ಪೂರ್ವಜರ ಕಾಲದಲ್ಲಿ ಒಮ್ಮೆ ಭೀಕರವಾದ ಬರಗಾಲವು ಬಿಲ್ ಜನಾಂಗಕ್ಕೆ ತಟ್ಟಿತು. ಆ ಬರಗಾಲದಿಂದಾಗಿ ಜನರಿಗೆ ನೀರು, ಆಹಾರವಿಲ್ಲದೇ ಬಳಲಿದ್ದಲ್ಲದೇ ವಿವಿಧ ರೋಗಗಳಿಗೆ ತುತ್ತಾಗಬೇಕಾಯಿತು. ಇದರ ಪರಿಣಾಮದಿಂದಾಗಿ ಅನೇಕ ಸಾವು-ನೋವುಗಳು ಸಂಭವಿಸಿದವು. ಬರೀ ಜನರಷ್ಟೇ ಅಲ್ಲ ಜಾನುವಾರುಗಳು ಕೂಡ ಸಾಯಲಾರಂಭಿಸಿದವು. ಆಗ ಭೀಕರವಾದ ಬರಗಾಲದಿಂದ ಮುಕ್ತಿ ಹೊಂದುವುದು ಹೇಗೆಂದು ಬಿಲ್ ಜನಾಂಗವು ಚಿಂತೆಗೆ ಒಳಗಾಯಿತು. ಈ ಪರಿಸ್ಥಿತಿಯಿಂದ ಹೊರಬರಲಾರದೇ ಆ ಆತಂಕವನ್ನು ಅನುಭವಿಸಲು ಶುರುವಾಯಿತು. ಆಗ ಬಿಲ್ ಬುಡಕಟ್ಟಿನ ಕೆಲವು ಹಿರಿಯರು ಇದು ದೇವರ ಶಾಪವೆಂದು, ಅವನು ನಮ್ಮ ಮೇಲೆ ಕೋಪಗೊಂಡಿದ್ದಾನೆಂದು ಮಾತನಾಡಿಕೊಂಡರು. ದೇವರನ್ನು ಶಾಂತವಾಗಿಸಿದರೆ ಈ ಬರ ತಪ್ಪುವುದೆಂದು ಬಿಲ್‌ರು ತೀರ್ಮಾನಕ್ಕೆ ಬಂದರು. ಆಗ ಬಿಲ್‌ರೆಲ್ಲಾ ಸೇರಿ 'ಬಡವಾ' ಎಂಬ ಸಾಧುವಿನ ಹತ್ತಿರ ಪರಿಹಾರಕ್ಕಾಗಿ ಹೋದರು. ಈ 'ಬಡವಾ' ಸಾಧುವೇ ಪ್ರಸ್ತುತದಲ್ಲಿ 'ಬಾಡ್ವಾ' ಎಂಬ ಹೆಸರಿನಿಂದ ಕರೆಯಲ್ಪಡುವ ಪಿಥೋರಾದ ಪೂಜಾರಿಯಾಗಿದ್ದಾನೆ.

'ಬಡವಾ' ಸಾಧುವಿನ ಬಳಿ ತಮಗೆ ಆದ ತೊಂದರೆ, ನೋವುಗಳನ್ನು ಹೇಳಿದರು. ಆಗ ಸಾಧುವು 'ಬಾಬಾದೇವ ಪಿಥೋರಾ' ಮುನಿಸಿಕೊಂಡಿದ್ದಾನೆಂದು ತಿಳಿಸಿದರು. ಆ ದೇವನಿಂದಾಗಿಯೇ ನಿಮಗೆ ಈ ರೀತಿಯ ನೋವುಗಳು ಉದ್ಭವಿಸಿವೆಯೆಂದು ನುಡಿದನು. ನೀವು ಅವನನ್ನು ಒಲಿಸಿಕೊಂಡರೆ ಮಾತ್ರ ಬರ ಪರಿಹಾರವಾಗುವುದೆಂದು ತಿಳಿಸಿದನು. ಆಗ ಬಿಲ್‌ರು 'ಬಾಬಾದೇವ'ನ ಕೋಪ ಶಮನಕ್ಕೆ ಏನು ಮಾಡಬೇಕೆಂದು ಆ ಸಾಧುವಿನ ಬಳಿ ಪ್ರಾರ್ಥಿಸಿದರು. ಆಗ 'ಬಡವಾ ಸಾಧು' ನೀವೆಲ್ಲರೂ, ನಿಮ್ಮ ನಿಮ್ಮ ಮನೆಗಳ ಗೋಡೆಯ ಮೇಲೆ 'ಬಾಬಾದೇವ ಪಿಥೋರಾ'ನ ಹೆಸರಿನಲ್ಲಿ ಜೀವ-ಜಂತುಗಳ ಚಿತ್ರಗಳನ್ನು ಬಿಡಿಸಬೇಕು. ಆ ಚಿತ್ರಗಳಲ್ಲಿ ಮೊದಲು ಕುದುರೆಗೆ ಪ್ರಾಶಸ್ತ್ಯವನ್ನು ಕೊಡಬೇಕು. ಆನೆ, ಒಂಟೆ, ಪಕ್ಷಿ, ಗಿಡ, ಮರ, ನವಿಲು, ಕೋತಿ ಇತ್ಯಾದಿ ಚಿತ್ರಗಳನ್ನು ಚಿತ್ರಿಸಿ ಅವುಗಳನ್ನು ಪೂಜಿಸಬೇಕೆಂದು ಹೇಳುತ್ತಾನೆ. ಅದರಲ್ಲಿ ಮೊದಲ ಕುದುರೆಯೇ 'ಬಾಬಾದೇವ ಪಿಥೋರಾ' ಆಗಿರುತ್ತದೆ. ಅದನ್ನು ವಿಶೇಷವಾಗಿ ಪೂಜಿಸಬೇಕು. ಆಗ 'ಬಾಬಾದೇವ ಪಿಥೊರಾ' ನಿಮ್ಮ ಮೇಲೆ ಶಾಂತನಾಗಿ ಸುಖವನ್ನು ದಯಪಾಲಿಸಿ ಬರವನ್ನು ಹೋಗಲಾಡಿಸುತ್ತಾನೆಂದು ಹೇಳುತ್ತಾನೆ. ಆಗ ಬಿಲ್‌ರೆಲ್ಲರೂ ಚಿತ್ರಗಳ ರಚನೆಗೆ ಮುಂದಾಗುತ್ತಾರೆ. ಇದರಿಂದಾಗಿ ಮತ್ತೇ ಅವರ ಜೀವನದಲ್ಲಿ ಸುಖ-ಶಾಂತಿ ಸಮೃದ್ಧವಾಯಿತು." ಅಂದಿನಿಂದ ಇಂದಿನವರೆಗೂ ಬಿಲ್‌ರು ಈ ಭಿತ್ತಿ ಚಿತ್ರಗಳನ್ನು ತಮ್ಮ ಮನೆಯ ಮುಖ್ಯ ಗೋಡೆಯ ಮೇಲೆ ಹಬ್ಬ-ಉತ್ಸವಗಳ ದಿನಗಳಲ್ಲಿ ಚಿತ್ರಿಸಿ ಸಂಭ್ರಮಿಸುವುದು ವಾಡಿಕೆಯಾಗಿದೆ ಎಂದು ಈ ಸಹೋದರರು ಹೇಳುತ್ತಾರೆ.

ಹೀಗೆ ಪಿಥೋರಾ ಬಾಬಾನನ್ನು ಒಲಿಸಿಕೊಳ್ಳಲು ಆರಂಭಿಸಿದ ಚಿತ್ರಕಲೆಯು ಬಿಲ್‌ರಿಗೆ ಒಂದು ಸಾಂಸ್ಕೃತಿಕ ಮತ್ತು ಧಾರ್ಮಿಕ ಭಾಗವಾಗಿ ಹೋಯಿತು. ಅಲ್ಲದೇ ಪ್ರಸ್ತುತದಲ್ಲಿ ಬಿಲ್‌ರು ಅದನ್ನೊಂದು ಕಲೆಯಾಗಿ ಮಾರ್ಪಡಿಸಿಕೊಂಡು, ಆರ್ಥಿಕವಾಗಿ ಸಬಲತೆಯನ್ನು ಸಾಧಿಸುತ್ತಲಿದ್ದಾರೆ. ಹೀಗೆ ಪಿಥೋರಾ ಬಾಬಾದೇವನ ಧಾರ್ಮಿಕ ಭಕ್ತಿಯಿಂದ ಶುರುವಾದ ಈ ಕಲೆಯು ಪಿಥೋರಾ ಚಿತ್ರಕಲೆಯಾಗಿ ಬಿಲ್‌ರು ಕರೆದುಕೊಂಡರು. ಇಂದಿಗೂ ಬಿಲ್ ಜನಾಂಗವು ಈ ಚಿತ್ರಕಲೆಯನ್ನು ರಚಿಸುತ್ತಾ ಪಿಥೋರಾ ಪರಂಪರೆಯೊಂದನ್ನು ಮುಂದುವರೆಸಿಕೊಂಡು ಬರುತ್ತಲಿದೆ. ಅಲ್ಲದೇ ಈ ಜನಾಂಗದಲ್ಲಿನ ಕೆಲವು ಕಲಾವಿದರು ತಮ್ಮದೇ ಆದ ಗುಂಪನ್ನು ರಚಿಸಿಕೊಂಡು ಈ ಪಿಥೋರಾ ಚಿತ್ರಕಲೆಯ ಬೆಳವಣಿಗೆಗೆ ಶ್ರಮಿಸುತ್ತಿದ್ದಾರೆ. ಅಲ್ಲದೇ ಗಂಗೂಬಾಯಿ, ಬೂರಿಬಾಯಿ, ಹರ್ಷಸಿಂಗ್, ಸುಭಾಷ, ಲಾಡುಬಾಯಿ, ಪೇಮಾಪತ್ಯಾ, ರಮೇಶ ಕತಾರಿಯಾ ಅಂತಹ ಹೊಸ ತಲೆಮಾರಿನವರು ಪಿಥೋರಾ ಚಿತ್ರಕಲೆಯಲ್ಲಿ ಹೊಸ ಪರಂಪರೆಯನ್ನು ಹುಟ್ಟುಹಾಕಿದ್ದಾರೆ.

ಪಿಥೋರಾ ಚಿತ್ರಕಲೆಯ ಬಗೆಗಿನ ಎರಡನೆಯ ಮಿತ್ ಕಥೆ ಹೀಗಿದೆ. ಅದರ ಹೆಸರು ಪಿಥೋರಾ, ಪಾಟಲ ಮತ್ತು ಇಂದ್ರಬಾಬಾನ ಕಥೆ. ಬಿಲ್‌ರ ಪೂರ್ವಿಕರ ಕಾಲದಲ್ಲಿ ಗೋಲಾಗಿರಿ ಪರ್ವತದ ಮೇಲೊಂದು ಸತನಪುರವೆಂಬ ಹಳ್ಳಿ ಇತ್ತು. ಅಲ್ಲಿ ಹೀರಾಬಾಯಿಯೆಂಬ ರೈತನಿದ್ದನು. ಅವನ ಪರಿವಾರವೆಲ್ಲ ಕೃಷಿಯ ಮೇಲೆ ಅವಲಂಬಿತವಾಗಿತ್ತು. ಇದರಿಂದಾಗಿ ಅವನು ಕಾಲಕಾಲಕ್ಕೆ ಜೋಳ, ಸಜ್ಜೆ, ಗೋವಿನಜೋಳ, ಹೆಸರು, ಉದ್ದು, ತೊಗರಿಯನ್ನು ಬೆಳೆಯುತ್ತಿದ್ದನು.

ಆಷಾಡ ಮಾಸದ ಸಂದರ್ಭದಲ್ಲಿ ಆಕಾಶದಲ್ಲಿ ಮೋಡಕವಿದು ಉತ್ತಮ ಮಳೆಯಾಯಿತು. ಆಗ ಅಲ್ಲಿನ ಎಲ್ಲಾ ರೈತರು ಹರ್ಷದಿಂದ ತಮ್ಮ ತಮ್ಮ ಹೊಲದಲ್ಲಿ ಬಿತ್ತನೆ ಮಾಡಲು ಸಜ್ಜು ಮಾಡಿಕೊಂಡರು. ಹೀರಾಬಾಯಿ ಕೂಡ ತನ್ನ ಹೊಲದಲ್ಲಿ ಬಿತ್ತನೆ ಮಾಡಲು ಸಜ್ಜಾದನು. ಅಲ್ಲಿನ ವಿಶೇಷವೇನೆಂದರೆ ಬಿತ್ತನೆಗೆ ಮೊದಲು 'ಜುವಾರ' ಮಾತೆಯ ಕಾಳುಗಳಿಂದ ಮಾಡಬೇಕೆಂಬುದು ಪ್ರತೀತಿ. ಅದರಂತೆ ಹೀರಾಬಾಯಿ 'ಜುವಾರಾ ಮಾತಾ' ಕಾಳುಗಳಿಂದ ಬಿತ್ತನೆ ಶುರುಮಾಡಿದನು. ಒಳ್ಳೆಯ ಮಳೆಯಿಂದಾಗಿ ಜುವಾರಾ ಮಾತೆಯ ಅನುಗ್ರಹದಿಂದಾಗಿ ತೆನೆ ಒಡೆದು ತೆನೆ ತುಂಬಾ ಕಾಳು ಮೂಡಿದವು. ಆ ಕಾಳುಗಳನ್ನು ತಿನ್ನಲು ಪಕ್ಷಿಗಳು ಹೊಲಕ್ಕೆ ಬರತೊಡಗಿದವು. ಇದನ್ನು ತಪ್ಪಿಸಲು ಅವನು ಎರಡು ಬೆದರುಗೊಂಬೆಗಳನ್ನು ಮಾಡಿ ಹೊಲದಲ್ಲಿ ನಿಲ್ಲಿಸಿದನು. ಹೀಗೆ ಮಾಡಿದುದರಿಂದ ಪಕ್ಷಿಗಳ ಬರುವಿಕೆಯ ಕಾಟದಿಂದ ಪಾರಾದನು. ನಂತರದ ದಿನಗಳಲ್ಲಿ ಬೆಳೆಯ ಕೊಯ್ಲು ಮಾಡಿಕೊಂಡು ಕಾಳುಗಳನ್ನು ಮನೆಗೆ ತಂದನು. ಹೊಲದಲ್ಲಿ ಆ ಬೆದುರು ಗೊಂಬೆಗಳು ಮಾತ್ರ ಉಳಿದವು. ಲೋಕ ಸಂಚಾರದಲ್ಲಿದ್ದ ಶಿವ-ಪಾರ್ವತಿ ಆ ಹೊಲದ ಮೇಲೆ

ಹಾಯ್ದು ಹೋಗುತ್ತಿದ್ದಾಗ ಆ ಬೆದರುಗೊಂಬೆಗಳನ್ನು ನೋಡಿದರು. ಆಗ ಪಾರ್ವತಿಯು 'ಹೀರಾ ಕಾಳುಗಳನ್ನು ಮನೆಗೆ ತೆಗೆದುಕೊಂಡು ಹೋಗಿ ಇವುಗಳನ್ನು ಮಾತ್ರ ಇಲ್ಲಿಯೇ ಏಕೆ ಬಿಟ್ಟು ಹೋದನು' ಎಂದು ಕೇಳಿದಳು. ಆಗ ಶಿವನು ಹಾಸ್ಯಕ್ಕಾಗಿ 'ಅವರಿಗೆ ಕೂಲಿಯನ್ನೇ ಕೊಟ್ಟಿಲ್ಲ, ಅದಕ್ಕಾಗಿ ಅವರು ಇಲ್ಲಿಯೇ ಇದ್ದಾರೆ' ಎಂದನು. ಆಗ ಪಾರ್ವತಿಯು ಆ ಗೊಂಬೆಗಳಿಗೆ ಜೀವ ತುಂಬಲು ಶಿವನಿಗೆ ಹೇಳಿದಳು. ಅದಕ್ಕೆ ಶಿವನು ಒಪ್ಪುವುದಿಲ್ಲ. 'ಅವುಗಳ ಮೇಲೆ ನಿನಗೆ ಕನಿಕರವಿದ್ದರೆ ನೀನೆ ಜೀವ ತುಂಬು' ಎಂದನು. ಆಗ ಪಾರ್ವತಿಯು ತನ್ನ ಶಕ್ತಿಯಿಂದ ಆ ಗೊಂಬೆಗಳಿಗೆ ಜೀವ ತುಂಬಿದಳು.

ಮಾರನೆಯ ದಿನ ಹೀರಾ ತನ್ನ ಹೆಂಡತಿಯ ಜೊತೆಗೆ ಹೊಲಕ್ಕೆ ಬಂದಾಗ ಅವರಿಗೆ ಆಶ್ಚರ್ಯವೊಂದು ಕಂಡುಬಂದಿತು. ಅದೇನೆಂದರೆ ಅಲ್ಲಿದ್ದ ಬೆದರುಗೊಂಬೆಗಳಿಗೆ ಜೀವ ಬಂದಿತ್ತು. ಅವುಗಳನ್ನು ನೋಡಿ ದೇವರ ವರಪ್ರಸಾದವೆಂದು ಮನೆಗೆ ಕರೆದುಕೊಂಡು ಹೋದರು. ತಮಗೆ ಇದ್ದ ಒಬ್ಬನೇ ಮಗನ ಜೊತೆಗೆ ಇವರಿಬ್ಬರೂ ಸೇರಿ ಮೂವರು ನಮ್ಮ ಮಕ್ಕಳೆಂದೇ ಲಾಲನೆ-ಪಾಲನೆ ಮಾಡಿದರು.

ಕಾರ್ತೀಕ ಮಾಸದ ದೀಪಾವಳಿಯನ್ನು ಬಿಲ್‌ರು ಅದ್ದೂರಿಯಾಗಿ ಆಚರಿಸುತ್ತಿದ್ದರು. ಅವರು ಅಂದು ದನ-ಕರುಗಳನ್ನು ಸಿಂಗರಿಸಿ ಊರಿನ ಹೊರಗೆ ಅಗಸಿ ಬಾಗಿಲ ಬಳಿಯಲ್ಲಿ ಸೇರಿಸಲಾಗುತ್ತಿತ್ತು. ಹೀರಾ ಕೂಡ ತನ್ನ ದನ-ಕರುಗಳನ್ನು ಸಿಂಗರಿಸಿಕೊಂಡು ಕರೆದೊಯ್ದನು. ಆ ಸಂದರ್ಭದಲ್ಲಿ ಅಲ್ಲಿ ಪಟಾಕಿ ಹಾರಿಸಿದ್ದರಿಂದ ದನ-ಕರುಗಳು ಹೆದರಿ ದಿಕ್ಕಾಪಾಲಾಗಿ ಓಡಲಾರಂಭಿಸಿದವು. ಹೀರಾನ ದನ-ಕರುಗಳು ಸಹ ರಭಸದಿಂದ ಗೀಳಿಡುತ್ತ ಅವನ ಮನೆಯ ಕಡೆ ಓಡಿದವು. ಆಗ ಮನೆಯ ಅಂಗಳದಲ್ಲಿ ಆಡುತ್ತಿದ್ದ ಅವನ ಮೂವರು ಮಕ್ಕಳನ್ನು ಒದ್ದುಕೊಂಡು ಹೋದವು. ಆಗ ಒಬ್ಬೊಬ್ಬ ಮಗನೂ ಒಂದೊಂದು ದಿಕ್ಕಿಗೆ ಗಾಯಗಳಿಂದ ನರಳುತ್ತಾ ಬಿದ್ದರು. ಒಬ್ಬನು ಮನೆಯ ಛಾವಣಿಯ ಮೇಲೆ ಹಾರಿ ಹೋಗಿ ಬಿದ್ದನು. ಎರಡನೆಯವನು ದನಗಳ ತುಳಿತಕ್ಕೆ ಸಿಕ್ಕು ಅದೇ ಜಾಗದಲ್ಲಿಯೇ ನರಳುತ್ತ ಮನೆಯ ಅಂಗಳದ ಒಂದು ದಿಕ್ಕಿನಲ್ಲಿ ಬಿದ್ದನು. ಮೂರನೆಯವನು ಮನೆಯ ಸಮೀಪದಲ್ಲಿದ್ದ ಅಶ್ವತ್ಥ ಮರದ ಬಳಿ ಬಿದ್ದನು.

ಅದೇ ಸಮಯದಲ್ಲಿ ಆಕಾಶ ಮಾರ್ಗವಾಗಿ 'ಡೊಂಗರಿಯಾ' ದೇವನು ಎಲ್ಲಿಗೋ ಹೊರಟಿದ್ದನು. ದನಕರುಗಳ ಕಾಲ್ತುಳಿತಕ್ಕೆ ಒಳಗಾದ ಮಕ್ಕಳನ್ನು ಕಂಡನು. ಆಗ ಕೂಡಲೇ ಧರೆಗಿಳಿದು ಆ ಮಕ್ಕಳನ್ನು ಎತ್ತಿಕೊಂಡು ಹೋಗಿ, ಆಯುರ್ವೇದ ಚಿಕಿತ್ಸೆ ಕೊಟ್ಟು ಗುಣಪಡಿಸಿದನು. ಆಗ ಎಲ್ಲಾ ದೇವತೆಗಳು ವಿಚಾರ ವಿಮರ್ಶೆ ಮಾಡಿ ಆ ಮೂವರನ್ನು ದೇವತೆಗಳನ್ನಾಗಿ ಮಾಡಿದರು. ಎಲ್ಲಾ ದೇವತೆಗಳು ತಮ್ಮ ತಮ್ಮ ಅಲ್ಪ ಶಕ್ತಿಯನ್ನು ಅವರಿಗೆ ದಯಪಾಲಿಸಿದರು. ಆ

ಮೂವರನ್ನು ಬೇರೆ ಬೇರೆ ದೇವತೆಗಳ ಹೆಸರಿನಿಂದ ಕರೆದುಕೊಂಡರು. ಮನೆಯ ಛಾವಣಿಯ ಮೇಲೆ ಬಿದ್ದವನನ್ನು 'ಪಾಟಲಾಬಾಬಾ' ಎಂದು ಪೂಜಿಸಿದರು. ಅಂಗಳದಲ್ಲಿ ಬಿದ್ದವನನ್ನು 'ಪಿಥೋರಾಬಾಬಾ' ಎಂದು ಪೂಜಿಸಿದರು. ಅಶ್ವತ್ಥ ಮರದ ಕೆಳಗೆ ಬಿದ್ದವನನ್ನು 'ಇಂದ್ರಬಾಬಾ' ಯೆಂದು ಪೂಜಿಸಿದರು. ಅಂದಿನಿಂದ ಕಾರ್ತಿಕ ಮಾಸದಲ್ಲಿ 'ಡೊಂಗರಿಯಾ ದೇವ' ಎಲ್ಲಾ ಕುಟುಂಬಗಳ ಜೊತೆ ಸೇರಿ ಈ ಮೂವರ ಪೂಜೆಯನ್ನು ಅದ್ದೂರಿಯಿಂದ ಮಾಡುತ್ತಾನೆ.

'ಪಾಟಲಾಬಾಬಾ'ನ ಪೂಜೆಯನ್ನು ಮಾಡುವ ಪೂರ್ವದಲ್ಲಿ ಮನೆಯನ್ನು ಸಾರಿಸಿ, ಶುಚಿಗೊಳಿಸಲಾಗುತ್ತದೆ. ನಂತರದಲ್ಲಿ ಕಳಶವನ್ನಿಟ್ಟು, ಅಗರಬತ್ತಿ, ಅಕ್ಕಿ, ತೆಂಗಿನಕಾಯಿಯಿಂದ ಪೂಜೆ ಮಾಡಲಾಗುತ್ತದೆ. ಅಕ್ಕಿ ಮತ್ತು ಉದ್ದಿನಕಾಳಿನಿಂದ ನವಗ್ರಹಗಳನ್ನು ಮಾಡಲಾಗುತ್ತದೆ. ಮೇವಾ ಮಿಠಾಯಿಯನ್ನು ನೈವೇದ್ಯಕ್ಕೆ ಇಡಲಾಗುತ್ತದೆ. ಜೊತೆಗೆ ಸಾರಾಯಿ ನೈವೇದ್ಯ ಮಾಡಲಾಗುತ್ತದೆ. ಇಡೀ ರಾತ್ರಿ ಅನೇಕ ವೇಷ-ಭೂಷಣಗಳನ್ನು ಹಾಕಿಕೊಂಡು ಸ್ತ್ರೀ ಪುರುಷರು ಉಲ್ಲಾಸದಿಂದ ಕುಣಿಯುತ್ತಾರೆ.

ಪಿಥೋರಾ ಬಾಬಾನ ಪೂಜೆಯು ಚಿತ್ರಕಲೆಗೆ ಸಂಬಂಧಿಸಿದ್ದಾಗಿದೆ. ಈ ಪೂಜೆಯನ್ನು ಡೊಂಗರಿಯಾ ದೇವನ ಮನೆಯ ಗೋಡೆಯ ಮೇಲೆ ಅನೇಕ ಪ್ರಕಾರದ ಬಣ್ಣಗಳಿಂದ ಚಿತ್ರಿಸಲಾಗುತ್ತದೆ. ರಾತ್ರಿ ಇಡೀ ಸಾಧು ಪಿಥೋರಾ ಬಾಬಾನ ಕಥೆ ಮತ್ತು ಗಾಯನವನ್ನು ಹೇಳುತ್ತಾನೆ. ಆಗ ಪಿಥೋರಾ ಚಿತ್ರವನ್ನು ಬರೆಯಲಾಗುತ್ತದೆ. ಇಲ್ಲಿಯೂ ಸಾರಾಯಿ ಮತ್ತು ಕೋಳಿಯ ಬಲಿ ನಡೆಯುತ್ತದೆ. ಇಡೀ ದಿನ ನೃತ್ಯ ಗಾಯನ ಏರ್ಪಡಿಸಿರುತ್ತಾರೆ. ಪಿಥೋರಾ ಬಾಬಾನ ಚಿತ್ರವನ್ನು ಗೋಡೆಯ ಮೇಲೆ ಬರೆದು ಪೂಜಿಸುವುದರಿಂದ ಮನೆಯು ಸುಖ ಸಮೃದ್ಧಿಯಿಂದ ತುಂಬಿರುತ್ತದೆ. ಯಾವ ರೋಗ-ರುಜಿನೆಗಳು ಬರುವುದಿಲ್ಲ. ಈ ಪಿಥೋರಾ ಬಾಬಾ ದೈವವಾಗಿರುವುದರಿಂದ ಅವರ ರಕ್ಷಣೆ ಮಾಡುತ್ತಾನೆಂಬ ನಂಬಿಕೆ ಬಿಲ್ ಬುಡಕಟ್ಟಿನಲ್ಲಿದೆ. ಮಾರ್ಗಶಿರ ಮಾಸದಲ್ಲಿ ಇಂದ್ರಬಾಬಾನ ಪೂಜೆಯು ನಡೆಯುತ್ತದೆ. ಆ ದಿನ ಸಂಬಂಧಿಕರೆಲ್ಲ ಸೇರಿ ಅಶ್ವತ್ಥ ಮರಕ್ಕೆ ಪೂಜೆ ಸಲ್ಲಿಸುತ್ತಾರೆ.

ಪಿಥೋರಾ ಚಿತ್ರಕಲೆಯ ಮೂರನೆಯ ಮಿತ್ ರಾಥವಾ ಬುಡಕಟ್ಟಿನದ್ದಾಗಿದೆ. ಅದು ಹೀಗಿದೆ, ದೇವರುಗಳ ರಾಜನಾದ ಇಂದ್ರನಿಗೆ ಏಳು ಜನ ಸಹೋದರಿಯರಿದ್ದರು. ಒಂದು ದಿನ ಆ ಸಹೋದರಿಯರಲ್ಲಿ ಒಬ್ಬಳು ತಂಗಿಯಾದ ರಾಣಿ 'ಕಾಲಿ ಕೋಯಲ್' ಎಂಬುವಳು ಅರಣ್ಯಕ್ಕೆ ಹೋದಳು. ಅಲ್ಲಿ ಅವಳು ರಾಜ 'ಕಂಜೂರಾಣ' ಎಂಬುವನನ್ನು ಭೇಟಿಯಾದಳು. ಇವರಿಬ್ಬರಿಗೆ ಪ್ರೇಮ ಸಂಬಂಧ ಉಂಟಾಯಿತು. ಈ ಸಂಬಂಧವಾದ ಒಂಬತ್ತು ತಿಂಗಳು, ಒಂಬತ್ತು ದಿನಗಳಿಗೆ ಇವರಿಗೆ ಒಂದು ಗಂಡು ಮಗುವಾಯಿತು. ಅವರಿಬ್ಬರು ವಿವಾಹ ಪೂರ್ವದಲ್ಲಿ ಸಂತಾನವನ್ನು ಪಡೆದರು. ಅವಳು ಇನ್ನೂ ಕನ್ಯೆಯಾಗಿದ್ದುದರಿಂದ ಅವಳ ಅಣ್ಣನಿಗೆ ಹೆದರಿದಳು. ಇದರಿಂದಾಗಿ ಹರಿಯುವ ನೀರಿನಲ್ಲಿ ಆ ಮಗುವನ್ನು ತೇಲಿಬಿಟ್ಟಳು.

ಆ ದಿನ 'ರಾಣಿ ಕಾಜಲ್' ಮತ್ತು 'ರಾಣಿ ಮಾಕರ್' ಎನ್ನುವ ಇಂದ್ರನ ಇನ್ನಿತರ ತಂಗಿಯರು ವಿಹಾರಾರ್ಥವಾಗಿ ಅರಣ್ಯಕ್ಕೆ ಬಂದರು. ಹಾಗೆ ಕಾಡಿನಲ್ಲಿ ಸಂಚರಿಸುತ್ತಾ ಅವರು ಹರಿಯುತ್ತಿರುವ ನೀರಿನ ಸಮೀಪ ಬಂದರು. ಆಗ ಅವರಿಗೆ ಮಗುವೊಂದು ಅಳುತ್ತಿರುವ ಧ್ವನಿಯು ಕೇಳಿಸಿತು. ಅವರು ಮಗುವಿನ ಸಮೀಪ ಬಂದು, ಮಗುವನ್ನು ಎತ್ತಿಕೊಂಡು ಆ ಮಗುವಿಗೆ ಆಲದ ಮರದ ಹಾಲನ್ನು ಕುಡಿಸಿದರು. ಕಾಡಿನಲ್ಲಿನ ಹೂವಿನ ರಾಶಿಯಿಂದ ಆ ಮಗುವಿಗೆ ಸ್ನಾನ ಮಾಡಿಸಿದರು. ಜೊತೆಗೆ ಏಳು ರೀತಿಯ ಮಂಗಳಕರವಾದ ವಸ್ತುಗಳಿಂದ ಆ ಮಗುವಿಗೆ 'ಪಿಥೋರಾ' ಎಂಬ ಹೆಸರನಿಟ್ಟು ನಾಮಕರಣವನ್ನು ಮಾಡಿದರು. ಆ ಮಗುವನ್ನು ಎತ್ತಿಕೊಂಡು ರಾಣಿ ಕಾಜಲ್ ಅರಮನೆಗೆ ಬಂದಳು.

ಹೀಗೆ ದಿನಗಳು ಉರುಳಿದ ಮೇಲೆ ಪಿಥೋರಾ ಒಳ್ಳೆಯ ಬಾಲಕನಾಗಿ ಬೆಳೆದನು. ಒಂದು ದಿನ ಆ ಬಾಲಕನು ಆಟವಾಡುತ್ತಿದ್ದನು. ಆಗ ಅವನು ರಾಣಿ ಕಾಜಲ್‌ಳು ಮಣ್ಣಿನಿಂದ ಮಾಡಿದ ಕುಂಡವನ್ನು ಒಡೆದು ಹಾಕಿದನು. ಇದನ್ನು ಕಂಡು ಅವಳು ಕೋಪಗೊಂಡು ಗದರಿಸುತ್ತಾಳೆ. ಅಲ್ಲದೇ 'ನಿನ್ನ ಸೋದರ ಮಾವನು ಸಾಮ್ರಾಜ್ಯವನ್ನೆಲ್ಲಾ ತನ್ನಲ್ಲೇ ಹಿಡಿದುಕೊಂಡ' ಎಂದು ಇದ್ದದ್ದನ್ನು ಇದ್ದ ಹಾಗೆ ಪಿಥೋರನಿಗೆ ಹೇಳಿದಳು. ಅವಳು ಪರೋಕ್ಷವಾಗಿ ಬಾಲಕನಿಗೆ ನಿನ್ನ ಸೋದರ ಮಾವ ರಾಜ ಇಂದ್ರನೆಂದು ನೆನಪಿಸಿದಂತಿತ್ತು. ಇದನ್ನು ಕೇಳಿಸಿಕೊಂಡ ಪಿಥೋರನು ಹಾಗಾದರೆ ನನ್ನ ತಂದೆ ತಾಯಿಗಳು ಯಾರೆಂದು ತಿಳಿದುಕೊಳ್ಳಲು ತವಕಿಸಿದನು. ಆಗ ಅವನು ಇಂದ್ರನಿರುವ ರಾಜಾಸ್ಥಾನಕ್ಕೆ ಬಂದು ತನ್ನನ್ನು ತಾನೇ ಪರಿಚಯಿಸಿಕೊಂಡನು. ಇಂದ್ರನು ಅವನ ಕಥೆಯನ್ನೆಲ್ಲಾ ಕೇಳಿ ಅವನನ್ನು ತನ್ನ ಕುಟುಂಬದ ಸದಸ್ಯನಾಗಿ ಮಾಡಿಕೊಂಡನು. ಬಾಲಕನು ಅವರ ಜೊತೆ ತುಂಬಾ ಸಂತೋಷದಿಂದ ಇದ್ದರೂ ತನ್ನ ತಂದೆಯ ಚಿಂತೆ ಬಿಡಲಿಲ್ಲ. ನಂತರದಲ್ಲಿ ಇಂದ್ರನು ಅವನಿಗೆ ಒಳ್ಳೆಯ ವಧುವನ್ನು ತಂದು ಮದುವೆ ಮಾಡಲು ಇಚ್ಚಿಸಿದನು. ಆದರೆ ಪಿಥೋರನಿಗೆ ಮದುವೆಗಿಂತ ಮುಖ್ಯವಾಗಿ ತನ್ನ ತಂದೆ ಯಾರೆಂದು ಗೊತ್ತುಮಾಡಿಕೊಳ್ಳಲು ಪದೇ ಪದೇ ಬಯಸುತ್ತಿದ್ದನು. ಇಂದ್ರನ ರಾಜ್ಯದಲ್ಲಿ ಮದುವೆಯ ಕಾರ್ಯಗಳು ಜರುಗಿದವು. ಆ ಮದುವೆಗೆ ಬರುವವರಿಗೆ ರಾಜ ಇಂದ್ರನು ಬೃಹತ್ತಾದ ರಾಜಗೃಹವನ್ನು ಸಿದ್ಧಪಡಿಸಿದನು. ಅವನು ಪ್ರತಿಯೊಬ್ಬರನ್ನು ಆಹ್ವಾನಿಸಲು ಬಯಸಿದನು. ದೇವ ದೇವತೆಗಳು, ರಾಜ ರಾಣಿಯರು, ಶ್ರೀಮಂತರು, ಗೌರವಾನ್ವಿತ ಪ್ರಜೆಗಳು ಅಲ್ಲಿ ಆಹ್ವಾನಿತರಾಗಿದ್ದರು. ವಿವಾಹ ಮಹೋತ್ಸವಕ್ಕೆ ಬಂದಂತಹ ಅತಿಥಿಗಳನ್ನು ಭೇಟಿಮಾಡಿ ಮಾತಾಡಿಸಲು ಪಿಥೋರನು ಬಂದನು. ಅಲ್ಲಿಯೇ ಇದ್ದ ರಾಜ 'ಕುಂಜುರಾಣ'ನನ್ನು ತೀಕ್ಷ್ಣವಾಗಿ ನೋಡಿ, ಅವನೇ ನನ್ನ ತಂದೆಯೆಂದು ಗುರುತಿಸಿದನು.

ನಂತರದಲ್ಲಿ ತುಂಬ ಸಂಭ್ರಮ ಮತ್ತು ಅದ್ಧೂರಿಯಾಗಿ 'ಪಿಥೋರಾ-ಪಿಥೋರಿ'ಯರ ವಿವಾಹ ಮಹೋತ್ಸವವು ಏರ್ಪಟ್ಟಿತು. ಈ ವಿವಾಹ ಕಾರ್ಯಕ್ಕೆ ದೇವಾನುದೇವತೆಗಳು

ಪಾಲ್ಗೊಂಡಿದ್ದರು. ಅವರೆಲ್ಲರು ಮದುವೆಗೆ ಕುದುರೆ, ಆನೆಗಳ ಮೇಲೆ ದಿಬ್ಬಣ ಅಥವಾ ಮೆರವಣಿಗೆ ಬಂದಿದ್ದರು. ಈ ಸಂದರ್ಭವನ್ನೇ ಪಿಥೋರಾ ಚಿತ್ರಕಲೆಯಲ್ಲಿ ಬಿಡಿಸಲಾಗುತ್ತದೆ. ಈ ಚಿತ್ರಕಲೆಯಲ್ಲಿ ದೇವತೆಗಳು ಪಿಥೋರಾ–ಪಿಥೋರಿ ಮದುವೆಗೆ ಕುದುರೆಗಳ ಮೇಲೆ ಬರುವ ಚಿತ್ರಗಳನ್ನು ತೆಗೆಯುತ್ತಾರೆ. ಪಿಥೋರಾನನ್ನು ದೇವರೆಂದು ರಾಥವಾ ಬುಡಕಟ್ಟು ನಂಬಿದೆ. ಏಕೆಂದರೆ ಹುಟ್ಟಿನಿಂದಲೂ ತನ್ನ ತಂದೆಯನ್ನು ನೋಡಿರದ ಪಿಥೋರಾ ಮೊದಲ ಭೇಟಿಯಲ್ಲಿಯೇ ಅವನೇ ನನ್ನ ತಂದೆಯೆಂದು ಗುರುತಿಸಿದ್ದು, ಅವನನ್ನು ಈ ಬುಡಕಟ್ಟು ದೈವವೆಂದು ನಂಬಿದೆ.

ಈ ಮೂರು ಮಿತ್‌ಗಳಲ್ಲದೇ ಈ ಬುಡಕಟ್ಟುಗಳಲ್ಲಿ ಇನ್ನೂ ಸಾಕಷ್ಟು ಇಂತಹ ಮಿತ್‌ಗಳಿವೆ. ಒಂದಿಲ್ಲೊಂದು ಕಾರಣದಿಂದ ಮಿತ್‌ಗಳ ಮೂಲಕ 'ಪಿಥೋರಾಬಾಬಾ' ನನ್ನು ಹೇಳುವ ಕಾಲಕ್ಕೆ ಚಿತ್ರಕಲೆಯು ಪ್ರಮುಖವಾಗಿರುವಂತೆಯೇ ಅದರ ಪೂಜೆಯು ಪ್ರಮುಖವಾಗಿದೆ. ಒಂದಕ್ಕೊಂದು ಆಂತರಿಕ ಸಂಬಂಧ ಹೊಂದಿವೆ. ಮಿತ್ ಒಂದರಲ್ಲಿ ಬರಗಾಲದಿಂದ ಜನರನ್ನು ಉಳಿಸಿದ ಬಾಬಾ ಪಿಥೋರಾ ಪೂಜೆಗೆ ಅರ್ಹನಾದರೆ, ಮಿತ್ ಎರಡರಲ್ಲಿ ಡೊಂಗರಿ ದೇವನಿಂದಾಗಿ ಪಿಥೋರಾ ದೈವತ್ವಕ್ಕೇರಿದವನು. ಪಿಥೋರಾನು ಮೂರನೇಯ ಮಿತ್‌ನಲ್ಲಿ ತನ್ನ ತಂದೆ ಯಾರೆಂದು ಮೊದಲ ಭೇಟಿಯಲ್ಲಿಯೇ ಕಂಡು ಹಿಡಿದದ್ದಕ್ಕೆ ಪಿಥೋರಾ ದೈವತ್ವಕ್ಕೇರಿದವನು. ಮೂರೂ ಮಿತ್‌ಗಳಲ್ಲಿಯೂ ಪಿಥೋರಾ ಬಾಬಾ ಪೂಜೆಗೆ ಅರ್ಹನಾದರೂ, ಅರ್ಹತೆಗೆ ಭಿನ್ನತೆಗಳಿವೆ. ಪಿಥೋರಾ ಚಿತ್ರಕಲೆಯ ಉದ್ದೇಶವೇ ಸಮೃದ್ಧಿ, ಸಹಬಾಳ್ವೆ, ಶಾಂತಿ, ನೆಮ್ಮದಿಗಾಗಿ ನಡೆಸುವಂತಹದ್ದು.

### ೫.೨ ಪಿಥೋರಾ ಚಿತ್ರಶೈಲಿ: ಪೂಜೆ ಮತ್ತು ಆಚರಣೆಯ ವಿವಿಧ ಹಂತಗಳು

ಪಿಥೋರಾ ಪೂಜೆ ಮತ್ತು ಚಿತ್ರಕಲೆಯು ಬಿಲ್‌ರಲ್ಲಿ ಮತ್ತು ಅದರ ಒಳಪಂಗಡಗಳಲ್ಲಿ ಹೆಚ್ಚು ಕಂಡುಬರುತ್ತದೆ. ಕೆಲವೊಂದು ಪರಿವಾರಗಳಲ್ಲಿ ಈ ಪೂಜೆಯನ್ನು ಮಾಡಿದ್ದಾರೋ ಇಲ್ಲವೋ ಎಂಬ ಅನುಮಾನ ಸುಳಿಯುತ್ತದೆ. ಏಕೆಂದರೆ ರಕ್ಷಾ ಬಂಧನ ಹಬ್ಬದ ದಿನದಂದು ಚಿತ್ರ ರಚಿಸಿ ಎರಡರಿಂದ ನಾಲ್ಕು ದಿನಗಳವರೆಗೆ ಇಟ್ಟುಕೊಂಡು ನಂತರ ಅಳಿಸಿಹಾಕಿಬಿಡುತ್ತಾರೆ. ಕೆಲವು ಬುಡಕಟ್ಟುಗಳಲ್ಲಿ ವರ್ಷಪೂರ್ತಿ ಪಿಥೋರಾವನ್ನು ಸಂರಕ್ಷಿಸುವುದಿಲ್ಲ. ಮತ್ತೇ ಮುಂದಿನ ವರ್ಷದ ಹಬ್ಬದ ದಿನದಲ್ಲಿ ಪುನರ್ ನಿರ್ಮಾಣ ಮಾಡುವುದು. ಈ ಹಿನ್ನೆಲೆಯಲ್ಲಿ ಮನೆಯ ಗೋಡೆಯ ಮೇಲೆ ಸಂರಕ್ಷಿಸದ ಪದ್ಧತಿಯೂ ಪರಂಪರೆಯಿಂದ ಹರಿದುಬಂದಿದೆ. ಈ ಪದ್ಧತಿಗೆ ವ್ಯತಿರಿಕ್ತವಾಗಿ ಭಾವರಾ, ಅಲಿರಾಜಪುರ, ಸೊಂಡವಾ, ಕಟ್ಟಿವಾಡಾ, ಗುಜರಾತ ಪ್ರದೇಶಗಳಲ್ಲಿನ ಮನೆಯೊಳಗೆ ವರ್ಷಗಳವರೆಗೂ ನೋಡಲು ಸಿಗುತ್ತವೆ. ಹೀಗಾಗಿಯೇ ಬುಡಕಟ್ಟು ಜನರ ಚಿತ್ರಕಲೆಯ ವೈಶಿಷ್ಟ್ಯ ಮತ್ತು ಭಿನ್ನತೆ ಇರುವುದೇ ಅವರ ಚಿತ್ರಕಲೆಯಲ್ಲಿ.

ಪಿಥೋರಾ ಪೂಜೆಯ ಪದ್ಧತಿಯು ಬಿಲ್-ಬಿಲಾಲ್, ಬಾರೆಲಾ, ಪಟಲಿಯಾ ಮತ್ತು ರಾಥವಾ ಜನಾಂಗದಲ್ಲಿ ಚಾಲ್ತಿಯಲ್ಲಿದೆ. ಈ ಪೂಜಾ ಪದ್ಧತಿಯನ್ನು ಪರಂಪರೆಯಿಂದಲೂ ಆಚರಿಸಿಕೊಂಡು ಈ ಜನರು ಬರುತ್ತಿದ್ದಾರೆ. ಈ ಬುಡಕಟ್ಟುಗಳು ತಮ್ಮ ಹೊಸ ಮನೆಯ ಗೃಹ ಪ್ರವೇಶದ ಸಮಯ, ಹರಕೆಯನ್ನು ತೀರಿಸುವ ಸಮಯ, ಹಬ್ಬ-ಉತ್ಸವಗಳ ಸಂದರ್ಭ, ವರ್ಷ ಇಲ್ಲವೇ ಎರಡು ವರ್ಷಕ್ಕೊಮ್ಮೆ ಪಿಥೋರಾ ಚಿತ್ರವನ್ನು ಚಿತ್ರಿಸಿ ಪೂಜಿಸುವ ಕಾರ್ಯವನ್ನು ಮಾಡಲಾಗುತ್ತದೆ. ವಿಶೇಷವೇನೆಂದರೆ ಪಿಥೋರಾ ಚಿತ್ರಕಲೆಯಲ್ಲಿ ವಿಭಿನ್ನವಾದ ವಿನ್ಯಾಸಗಳಿವೆ.

೧. ಭಾಬರಾ, ಅಲಿರಾಜಪುರ, ಸೊಂಡವಾದ ಪಿಥೋರಾ ಚಿತ್ರಶೈಲಿ

೨. ಜಾಬುವಾ, ಭಾವ್ರಾ ಚಿತ್ರಶೈಲಿ

೩. ಕಟ್ಟಿವಾಡ ಚಿತ್ರಶೈಲಿ

ಈ ಎಲ್ಲಾ ಚಿತ್ರಶೈಲಿಗಳಲ್ಲಿ ಬಣ್ಣ ಮತ್ತು ರೇಖೆಗಳಲ್ಲಿ ಬೇರೆ ಬೇರೆ ಭಿನ್ನತೆಗಳಿವೆ. ಆಕೃತಿ ಮತ್ತು ರಚನೆಯ ವಿನ್ಯಾಸಗಳಲ್ಲಿಯೂ ವ್ಯತ್ಯಾಸಗಳು ಕಾಣುತ್ತವೆ. ಚಿತ್ರಣದ ವಿಧಾನ ಮತ್ತು ಚಿತ್ರಗಳ ಸಂಖ್ಯೆ ಒಂದು ಊರಿಂದ ಮತ್ತೊಂದು ಊರಿಗೆ ಬದಲಾಗುತ್ತವೆ. ಚಿತ್ರಣಗಳಲ್ಲಿ ವಿವರಣಾತ್ಮಕತೆ, ಬಣ್ಣದ ಹೊಳಪು ಮತ್ತು ಅಲಂಕಾರಿಕತೆ ಒಂದು ಜಾಗದಿಂದ ಮತ್ತೊಂದು ಜಾಗದಲ್ಲಿ ಭಿನ್ನವಾಗಿದೆ. ಬಿಲ್, ಬಿಲಾಲ್ ಮತ್ತು ರಾಥವಾ ಜನಾಂಗದವರು ರಚಿಸುವ ಪಿಥೋರಾದಲ್ಲಿ ಈ ಭಿನ್ನತೆಗಳನ್ನು ಕಾಣಲು ಸಾಧ್ಯವಿದೆ.

ಬಿಲ್ ಪಿಥೋರಾವೇ ತನ್ನ ಚಿತ್ರಕಲೆಯ ಸಂರಚನೆಯ ದೃಷ್ಟಿಯಿಂದ ಅತೀ ಪ್ರಾಚೀನವಾದುದೆಂದು ಜಾಬುವಾ ಜನರು ಹೇಳುತ್ತಾರೆ. ಬಿಲಾಲ್ ಮತ್ತು ರಾಥವಾದ ಪಿಥೋರಾ ಚಿತ್ರಗಳು ಹೆಚ್ಚು ವಿವರಣಾತ್ಮಕ ಮತ್ತು ಯಥಾವತ್ತತೆಯಿಂದ ಕೂಡಿರುತ್ತವೆ. ಜಾಬುವಾದ ಭಾವ್ರಾ ಊರಿನಿಂದ ಕಟ್ಟಿವಾಡ ಪ್ರದೇಶಕ್ಕೆ ಹೋದರೆ ಅಲ್ಲಿನ ಚಿತ್ರಗಳು ಭಿನ್ನವಾಗಿವೆ. ಆ ಚಿತ್ರಗಳಲ್ಲಿನ ಕುದುರೆಗಳ ಸ್ವರೂಪ ಮತ್ತು ಅವುಗಳ ಚಾರಿತ್ರಿಕ ವಿಶೇಷತೆಗಳು ಬದಲಾಗುತ್ತವೆ. ಚಿತ್ರಕಲೆಯ ಬೇರೊಂದು ಸಂರಚನೆಯ ಸ್ವರೂಪ ಅಲ್ಲಿ ಕಂಡುಬರುತ್ತದೆ. ಬಿಲ್‌ರ ಪ್ರದೇಶವಾದ ಬಗೋರಾ ಸ್ಥಳದಲ್ಲಿನ ಪಿಥೋರಾದಲ್ಲಿ ಎದುರು ಬದುರು ನಿಂತಿರುವ ಹಾಗೆ ಚಿತ್ರವನ್ನು ರಚಿಸಲಾಗುತ್ತದೆ. ರಾಥವಾ ಜನಾಂಗದಲ್ಲಿ ಈ ಶೈಲಿ ಇಲ್ಲ. ಅವರು ಕುದುರೆಗಳನ್ನು ಒಂದರ ಹಿಂದೆ ಒಂದು ಚಲಿಸುತ್ತಿರುವ ಹಾಗೆ ಚಿತ್ರಿಸಲಾಗುತ್ತದೆ. ಕುದುರೆಗಳ ಸಂಖ್ಯೆಯೂ ಚಿತ್ರ ಬಿಡಿಸುವ ಸಂದರ್ಭಕ್ಕೆ ಅನುಗುಣವಾಗಿ ಬದಲಾಗುತ್ತದೆ. ಅವರ ಚಿತ್ರಕಲೆಯ ಶೈಲಿಯಲ್ಲಿ ಹೊಸ ಕಾಲಘಟ್ಟದ ಆಧುನಿಕ ಪರಿಕರಗಳು ಪಿಥೋರಾ ಫಲಕದಲ್ಲಿ ಸ್ಥಾನ ಪಡೆಯುತ್ತವೆ. ಪಿಥೋರಾವನ್ನು ಈಗ ಕಲೆಯ ದೃಷ್ಟಿಯಿಂದ ಕಾಗದ ಮತ್ತು ಕ್ಯಾನವಸ್‌ಗಳ ಮೇಲೆಯೂ ರಚಿಸಲಾಗುತ್ತದೆ. ಪ್ರಸ್ತುತದಲ್ಲಿ ಚಿತ್ರಕಲಾ

ಸಂಗ್ರಹಾಲಯಗಳಲ್ಲಿ, ಕೆಲವು ಕಛೇರಿಗಳಲ್ಲಿ ಪಿಥೋರಾ ಜಾಗ ಪಡೆದಿದೆ. ಈ ಚಿತ್ರ ಕಲೆಯು ತನ್ನದೇ ಆದ ಸ್ವತಂತ್ರ ಅಭಿವ್ಯಕ್ತಿಯ ಶೈಲಿಯಿಂದಾಗಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಳ್ಳುತ್ತಿದೆ.

ಪಿಥೋರಾ ಚಿತ್ರಕಲೆಯ 'ಪಿಥೋರಾ ಬಾಬಾ' ಪೂಜೆಯನ್ನು ಬಾವರಾ, ಅಲಿರಾಜಪುರ, ಸೊಂಡವಾ ಪ್ರದೇಶದಲ್ಲಿ ರಕ್ಷಾ ಬಂಧನ ದಿನದಂದು ಆಚರಿಸುತ್ತಾರೆ. ಜಾಬುವಾ, ಮೇಘನಗರ ಪ್ರದೇಶಗಳಲ್ಲಿ ಹೋಳಿ ಹಬ್ಬದ ಸಂದರ್ಭದಲ್ಲಿ ಆಚರಿಸಿದರೆ, ಕಟ್ಟಿವಾಡ ಪ್ರದೇಶದಲ್ಲಿ ಹೋಳಿಹಬ್ಬ ಆದ ನಂತರದ ಮಾಸದಲ್ಲಿ ನಡೆಸುತ್ತಾರೆ. ಭಾಗ್, ಧಾರ್ ಪ್ರದೇಶದಲ್ಲಿ ರಕ್ಷಾ ಬಂಧನದ ಆಸುಪಾಸಿನಲ್ಲಿ ಮಾಡುತ್ತಾರೆ.

ಪಿಥೋರಾ ಪೂಜೆಯನ್ನು ಅವರು ತಮ್ಮ ಆರ್ಥಿಕ ಸ್ಥಿತಿಗತಿ ಉತ್ತಮವಾಗಿರುವುದನ್ನು ಖಚಿತ ಪಡಿಸಿಕೊಂಡ ನಂತರ ಮಾಡುತ್ತಾರೆ. ಹೀಗಾಗಿ ಅದರ ಪೂಜೆಯು ಸಾಮಾನ್ಯವಾಗಿ ಆರ್ಥಿಕ ಪರಿಸ್ಥಿತಿಯ ಮೇಲೆ ಅವಲಂಬಿತವಾಗಿರುತ್ತದೆ. ಧಾರ್, ಜಾಬುವಾ, ಅಲಿರಾಜಪುರ ಪ್ರದೇಶಗಳಲ್ಲಿ ಪಿಥೋರಾ ಆಯೋಜನೆಗೆ ೧೦-೧೨ ಸಾವಿರ ರೂಪಾಯಿ ಸಾಮಾನ್ಯವಾಗಿ ಅಲ್ಲಿನ ಜನರದ್ದು ಖರ್ಚಾಗುತ್ತದೆ. ಇದೇ ಪೂಜೆಗೆ ಕಟ್ಟಿವಾಡ ಪ್ರದೇಶದಲ್ಲಿ ೪೦-೫೦ ಸಾವಿರ ರೂಪಾಯಿಯಾದರೂ ಖರ್ಚಾಗುತ್ತದೆ. ಮನೆಯಲ್ಲಿ ಪಿಥೋರಾ ಪೂಜೆಯು ಹೆಚ್ಚು ಖರ್ಚಿನಿಂದ ಕೂಡಿರುತ್ತದೆ. ಈ ಕಾರಣಕ್ಕಾಗಿಯೇ ಬಿಲ್ ಜನಾಂಗ ಒಳ್ಳೆಯ ಬೆಳೆಯ ನಿರೀಕ್ಷೆಯಲ್ಲಿರುತ್ತದೆ. ಹಣ ಕೈಗೆ ಬಂದ ಮೇಲೆಯೇ ಪಿಥೋರಾ ಪೂಜೆಯ ತಯಾರಿ ನಡೆಸುತ್ತಾರೆ.

**೫.೨.೧ ಭಾವರಾ-ಅಲಿರಾಜಪುರದ ಪಿಥೋರಾ ಚಿತ್ರಶೈಲಿ**

**ಮೊದಲ ಹಂತ: ಆಮಂತ್ರಣ**

ಪಿಥೋರಾ ಪೂಜೆಯ ಆಯೋಜನೆ ಸಿದ್ಧತೆಗಾಗಿ ಮೊದಲು ಚಿತ್ರಕಾರನಿಗೆ ತಿಳಿಸಬೇಕು, ಏಕೆಂದರೆ ಅಲ್ಲಿನ ಪ್ರತಿಯೊಬ್ಬ ವ್ಯಕ್ತಿಯು ಪಿಥೋರಾ ಚಿತ್ರಕಲಾಕಾರನಾಗಿರುವುದಿಲ್ಲ. ಆದ್ದರಿಂದ ಚಿತ್ರಕಾರನೇ ಮುಖ್ಯವಾಗಿ ಪಿಥೋರಾ ಚಿತ್ರರಚಿಸಬೇಕು. ಇದು ಅವನಿಗೆ ವಂಶಪಾರಂಪರಿಕವಾಗಿ ಹರಿದು ಬಂದ ಕಾರ್ಯವಾಗಿರುತ್ತದೆ. ಇದರಿಂದಾಗಿಯೇ ಅವನನ್ನು ಗೌರವದಿಂದ ಆಮಂತ್ರಣ ಕೊಟ್ಟು ಕರೆಯಬೇಕಾಗುತ್ತದೆ. ಆ ಚಿತ್ರಕಾರನೇ ಗೊತ್ತು ಮಾಡಿದ ತಿಥಿಯಂದು ಪಿಥೋರಾ ಪೂಜೆಯನ್ನು ಇಟ್ಟುಕೊಳ್ಳಬೇಕಾಗುತ್ತದೆ. ಇಲ್ಲವೇ ಅವರ ಅನುಕೂಲ ಮತ್ತು ಸಲಹೆಯ ಮೇರೆಗೆ ಸಾಧುವಿನೊಂದಿಗೆ ಚರ್ಚಿಸಿ ದಿನ ಗೊತ್ತು ಮಾಡಲಾಗುತ್ತದೆ. ಪಿಥೋರಾ ಚಿತ್ರಿಸುವಾಗ ಗಾಯನ ಮತ್ತು ನೃತ್ಯವನ್ನು ಆಗ ನಿರ್ಧರಿಸುತ್ತಾರೆ.

ಚಿತ್ರಕಾರನನ್ನು ಮನೆಗೆ ಆಮಂತ್ರಣ ಕೊಡುವಾಗ ಕಾಲು ಕಿಲೋ ಧಾನ್ಯ, ತುಪ್ಪ, ಬೆಲ್ಲ, ಉಪ್ಪು, ಖಾರದ ಜೊತೆಗೆ ಹಣವನ್ನು ಕೊಡಲಾಗುತ್ತದೆ. ಈ ಉಡುಗೊರೆಯನ್ನು ಅವನಿಗೆ ಅರ್ಪಿಸಿದ ಮೇಲೆಯೇ ತಿಥಿ ನಿರ್ಧಾರವಾಗುತ್ತದೆ. ಇದಾದ ನಂತರದಲ್ಲಿ ಪೂಜಾರಿ ಮತ್ತು ಸಾಧುವನ್ನು ಪೂಜೆ ಮತ್ತು ಗಾಯನಕ್ಕಾಗಿ ಆಮಂತ್ರಣ ಕೊಡಲಾಗುತ್ತದೆ. ಕೆಲವೊಂದು ಕಡೆ ಪೂಜಾರಿ ಮತ್ತು ಸಾಧು ಒಬ್ಬರೇ ಆಗಿರುತ್ತಾರೆ. ಕೆಲವೊಂದು ಕಡೆಯಲ್ಲಿ ಬೇರೆ ಬೇರೆಯೂ ಆಗಿರುತ್ತಾರೆ. ಈ ಆಮಂತ್ರಣದ ಚಿತ್ರವನ್ನು ಪಿಥೋರಾ ಚಿತ್ರಚೌಕಟ್ಟಿನ ಹೊರಗೆ ಬಿಡಿಸಿರುವುದನ್ನು ಕಾಣಬಹುದು.

ಪಿಥೋರಾ ತಿಥಿ ನಿರ್ಧಾರವಾದ ಮೇಲೆ ಮನೆಯವರಿಗೆ, ಓಣಿಯವರಿಗೆ, ಊರಿನವರಿಗೆ, ಸಂಬಂಧಿಗಳಿಗೆ, ಪರಿಚಯಸ್ಥರಿಗೆ ಮತ್ತು ವಿಶಿಷ್ಟವಾದ ವ್ಯಕ್ತಿಗಳಿಗೆ ಪಿಥೋರಾ ಪೂಜೆ ಮತ್ತು ಆಯೋಜನದ ಬಗ್ಗೆ ಸೂಚನೆ ಕೊಡಲಾಗುತ್ತದೆ. ಮನೆಯ ಅಳಿಯನಿಗೆ ಮೊದಲು ತಿಳಿಸುವ ಪದ್ಧತಿಯಿದೆ. ಪಿಥೋರಾ ಪೂಜೆಗಾಗಿ ವಸ್ತ್ರ, ಕೋಳಿ, ಕುರಿ, ಧಾನ್ಯ ಮುಂತಾದವುಗಳನ್ನು ತರುತ್ತಾರೆ. ಊಟೋಪಚಾರವನ್ನು ಈ ಸಂದರ್ಭದಲ್ಲಿ ಬಂದವರಿಗೆ ಮಾಡಲಾಗುತ್ತದೆ. ಹೀಗಾಗಿಯೇ ಪಿಥೋರಾ ಆಯೋಜನೆಯು ತುಂಬಾ ಖರ್ಚಿನದಾಗಿರುತ್ತದೆ. ಮನೆಯ ಮಾಲೀಕನೇ ಮನೆ ಮನೆಗೆ ತೆರಳಿ ಆಮಂತ್ರಣವನ್ನು ನೀಡುತ್ತಾನೆ.

**ಎರಡನೆಯ ಹಂತ: ಉಪವಾಸ ವ್ರತ**

ಪಿಥೋರಾ ಮಾಡುವ ಆ ದಿನ ರಾತ್ರಿ ಮತ್ತು ಮಾರನೆಯ ದಿನ ಎಲ್ಲಕ್ಕಿಂತ ಮುಖ್ಯವಾಗಿರುತ್ತದೆ. ಮನೆಯ ಯಜಮಾನ ಒಂದು ದಿನ ಮೊದಲು ಸಂಜೆಯ ಸಮಯದಲ್ಲಿ ಚಿತ್ರಕಾರನಿಗೆ ನೆನಪಿಸುವುದು ಅಗತ್ಯವಾದ ಮಾಹಿತಿಯಾಗಿದೆ. ಆ ಮಾಹಿತಿಯು ಏನೆಂದರೆ ಬೆಳಿಗ್ಗೆ ನಿಶ್ಚಿತ ಸಮಯಕ್ಕೆ ಸರಿಯಾಗಿ ಸಕಲ ಸಾಮಗ್ರಿಗಳನ್ನು ತೆಗೆದುಕೊಂಡು ಬರುವಂತೆ ಹೇಳುವುದು. ಮಾರನೆಯ ದಿನ ಬೆಳಿಗ್ಗೆ ೯ ರಿಂದ ೧೦ ಗಂಟೆಯ ಒಳಗೆ ಚಿತ್ರಕಾರನು ಇಬ್ಬರು ಮೂವರು ಸಹಾಯಕರೊಂದಿಗೆ ಮನೆಯ ಯಜಮಾನ ಹತ್ತಿರ ಬರುತ್ತಾನೆ. ಆ ದಿನವೇ ಮನೆಯ ಯಜಮಾನ ಮತ್ತು ಅವನ ಪರಿವಾರ ಉಪವಾಸ ವ್ರತ ಮಾಡುತ್ತಾರೆ. ಅಲ್ಲದೇ ಆ ದಿನ ಚಿತ್ರಕಾರನು ಮತ್ತು ಸಹಾಯಕರು ಸಹ ಉಪವಾಸವಿರುತ್ತಾರೆ. ಪಿಥೋರಾ ಮಾಡಿಸುವ ವ್ಯಕ್ತಿಯ ಪತ್ನಿ, ಮಗ, ಮಗಳು ಒಂದು ಹಗಲು ಮತ್ತು ಒಂದು ರಾತ್ರಿ ಉಪವಾಸ ವ್ರತವನ್ನು ಮಾಡುತ್ತಾರೆ. ಅಲ್ಲದೇ ಪಿಥೋರಾ ಪೂಜೆಗೆ ಬೇಕಾದ ಸಹಾಯವನ್ನು ಮಾಡುತ್ತಾರೆ. ಚಿತ್ರಕಾರನು ಸಂಜೆಯ ವೇಳೆಯಲ್ಲಿ ಉಪವಾಸವನ್ನು ಬಿಟ್ಟು ಊಟವನ್ನು ಮಾಡುತ್ತಾನೆ.

**ಮೂರನೆಯ ಹಂತ: ಪ್ರಾರ್ಥನೆ**

ಚಿತ್ರಕಾರನು ಊಟವಾದ ನಂತರ ಸ್ನಾನ ಮಾಡಿ ಬರುತ್ತಾನೆ. ಅವನಿಗೆ ಗೌರವ ಪೂರ್ವಕವಾಗಿ ಆಸನವನ್ನು ಕೊಡಲಾಗುತ್ತದೆ. ಆ ಆಸನದ ಮೇಲೆ ಚಿತ್ರಕಾರ ಬಂದು ಕುಳಿತುಕೊಳ್ಳುತ್ತಾನೆ. ಅವನಿಗೆ ಒಂದು ಲೋಟ ನೀರನ್ನು ಕೊಡಲಾಗುವುದು. ಚಿತ್ರ ರಚಿಸುವ ಮೊದಲು ಚಿತ್ರಕಾರನು ಒಂದು ಬಾಟಲಿ ದೇಸಿ ಮದ್ಯವನ್ನು ತರಿಸಿಕೊಳ್ಳುತ್ತಾನೆ. ಆ ಮದ್ಯವನ್ನು ಪಿಥೋರಾ ರಚಿಸುವ ಗೋಡೆಗೆ ಮತ್ತು ಅದರ ಎದುರಿಗಿರುವ ನೆಲದ ಮೇಲೆ ಪಿಥೋರಾ ದೇವರ ಹೆಸರಿನಲ್ಲಿ ಮದ್ಯವನ್ನು ಸಿಂಪಡಿಸುತ್ತಾನೆ. ತಟ್ಟೆಯಲ್ಲಿ ತುಪ್ಪದ ದೀಪವನ್ನು ಹಚ್ಚಿ ಪಿಥೋರಾ ದೇವನನ್ನು ಧ್ಯಾನ ಮಾಡುತ್ತಾನೆ. ಅಲ್ಲಿ ನೆರೆದ ಎಲ್ಲರ ಸಮ್ಮುಖದಲ್ಲಿ ಪಿಥೋರಾ ಬಾಬಾನ ಪ್ರಾರ್ಥನೆ ಮಾಡುತ್ತಾನೆ. ಅದು ಈ ರೀತಿಯಾಗಿರುತ್ತದೆ: "ಹೇ ಪಿಥೋರಾ ದೇವನೆ, ನಾವು ನಿನ್ನನ್ನು ಎಂದಿಗೂ ಮರೆಯುವುದಿಲ್ಲ. ನಿನ್ನನ್ನು ಪ್ರತಿವರ್ಷ ಪೂಜಿಸುತ್ತೇವೆ, ಮೂರನೆಯ ವರ್ಷವೂ ನಿನಗಾಗಿ ನಾವು ಉಪವಾಸ ಮಾಡುತ್ತೇವೆ. ನೀನು ನಮ್ಮನ್ನು ಮತ್ತು ಮನೆಯನ್ನು ಹೀಗೆ ರಕ್ಷಿಸು. ಹಿಂದಿನ ವರ್ಷದಂತೆ ನಮ್ಮನ್ನು ರಕ್ಷಿಸಿ, ಉದ್ಧರಿಸು" ಎಂದು ಹೇಳಿ ಬಾಟಲಿಯಲ್ಲಿನ ಮದ್ಯವನ್ನು ಎಲ್ಲರಿಗೂ ಕುಡಿಸುತ್ತಾನೆ.

**ನಾಲ್ಕನೆಯ ಹಂತ: ಬಣ್ಣಗಳ ಸಂಯೋಜನೆ**

ಪಿಥೋರಾ ಚಿತ್ರಕಲೆಯ ಬಣ್ಣ ಸಂಯೋಜನೆ ದೇಶಿಯವಾಗಿದೆ. ಚಿತ್ರಕಾರನ ಸಹಾಯಕರು ಬಣ್ಣವನ್ನು ಕಲೆಸುವ ಮತ್ತು ಲೇಪಿಸುವ ಕೆಲಸವನ್ನು ಮಾಡುತ್ತಾರೆ. ಪಿಥೋರಾದಲ್ಲಿ ಬಳಸುವ ಮೂಲ ವರ್ಣಗಳು ಕೆಂಪು, ಬಿಳಿ, ಕೇಸರಿ, ಕಪ್ಪು, ಹಸಿರು, ಹಳದಿ ಮತ್ತು ನೀಲಿ ಆಗಿರುತ್ತವೆ. ಚಿತ್ರಕಾರನು ಮತ್ತು ಅವನ ಸಂಗಡಿಗರು ಬಣ್ಣಗಳನ್ನು ತಯಾರಿಸಿಕೊಳ್ಳುತ್ತಾರೆ. ಬಿದುರಿನ ಎಲೆಗಳು, ಮುತ್ತುಗದ ತಾಜಾ ಹಸಿರು ಎಲೆಗಳು ಮತ್ತು ಬಣ್ಣ ಬಣ್ಣದ ಹೂವುಗಳಿಂದ ಬಣ್ಣದ ಪುಡಿಯನ್ನು ತಯಾರಿಸಿಕೊಳ್ಳುತ್ತಾರೆ. ಈ ಪುಡಿಗಳಿಗೆ ನೀರು ಮತ್ತು ಎಣ್ಣೆ ಅಥವಾ ತುಪ್ಪವನ್ನು ಮಿಶ್ರಣ ಮಾಡುತ್ತಾರೆ. ಒಣಗಿದ ಬಣ್ಣದ ಪುಡಿಗಳನ್ನು ದೊನ್ನೆಗಳಲ್ಲಿ ಸಂಗ್ರಹಿಸಿಕೊಳ್ಳುತ್ತಾರೆ. ಬಣ್ಣದ ಪುಡಿಗೆ ಮದ್ಯವನ್ನು ಮಿಶ್ರಣ ಮಾಡಿಕೊಳ್ಳುವ ವಾಡಿಕೆಯಿದೆ.

ಬಿಳುಪು ಕಲ್ಲು ಅಥವಾ ಸುಣ್ಣದಿಂದ ಬಿಳಿ ಬಣ್ಣವನ್ನು ತಯಾರಿಸುತ್ತಾರೆ. ಕೆಮ್ಮಣ್ಣುವಿನಿಂದ ಕೆಂಪು ಬಣ್ಣ, ಕಾಜಲ್‌ದಿಂದ ಕಪ್ಪು ಬಣ್ಣ, ಎಲೆಗಳಿಂದ ಹಸಿರು ಬಣ್ಣ, ಮಟ್ಟಿಯಿಂದ ಹಳದಿ ಬಣ್ಣ, ನೀಲದಿಂದ ನೀಲಿ ಬಣ್ಣಗಳನ್ನು ಮಾಡಲಾಗುತ್ತದೆ. ಊಟದ ಎಲೆ ಅಥವಾ ಮುತ್ತುಗದ ಎಲೆಯ ಗಿಡದಿಂದ ಕಡ್ಡಿಗಳನ್ನು ತೆಗೆದುಕೊಂಡು ಅದರ ಒಂದು ತುದಿಯನ್ನು ನಯವಾದ ಕಲ್ಲಿನಿಂದ ಜಜ್ಜಿ ಕುಂಚವನ್ನು ತಯಾರಿಸಿಕೊಳ್ಳುತ್ತಾರೆ. ಅತಿಹೆಚ್ಚಾಗಿ ಬಿದಿರಿನಿಂದ ಕುಂಚವನ್ನು

ತಯಾರಿಸುತ್ತಾರೆ. ಇದು ಸುಮಾರು ಐದಾರು ಇಂಚು ಉದ್ದವಾಗಿರುತ್ತದೆ. ಈ ರೀತಿ ಪ್ರಕೃತಿದತ್ತವಾಗಿ ಸಿಗುವ ಸಂಪನ್ಮೂಲದಿಂದ ಬಣ್ಣ ಮತ್ತು ಕುಂಚವನ್ನು ತಯಾರಿಸಿಕೊಂಡು ಪಿಥೋರಾ ಚಿತ್ರಕಲೆಯಲ್ಲಿ ಬಳಸುತ್ತಾರೆ.

**ಐದನೆಯ ಹಂತ: ಅಳತೆ–ಪ್ರಮಾಣ**

ಬಣ್ಣ ಮತ್ತು ಬ್ರಶ್‌ಗಳನ್ನು ಸಿದ್ಧಪಡಿಸಿಕೊಂಡ ಮೇಲೆ ಪಿಥೋರಾ ಚಿತ್ರರಚನೆಗೆ ತಯಾರಿ ನಡೆಸುತ್ತಾರೆ. ಪಿಥೋರಾ ಚಿತ್ರರಚನೆಗಾಗಿ ಗೋಡೆಯ ಸಿದ್ಧತೆ ಹೇಗಾಗಿದೆಯೆಂದು ವೀಕ್ಷಣೆ ಮಾಡಲಾಗುತ್ತದೆ. ಗೋಡೆಯ ಸಿದ್ಧತೆಯನ್ನು ಗಮನಿಸಿಕೊಂಡು ಗೋಡೆಗೆ ಚೌಕಟ್ಟು ರಚಿಸಲು ಅಳತೆಯನ್ನು ಮಾಡಿಕೊಳ್ಳಲಾಗುತ್ತದೆ. ಗೋಡೆಯ ಮೇಲೆ ಬಿದುರಿನ ಎಳೆಯ(ದಾರ)ದ ಸಹಾಯದಿಂದ ಚೌಕಟ್ಟನ್ನು ಕ್ರಮಬದ್ಧವಾಗಿ ಅಳತೆ ಮಾಡಿ ಹಾಕಿಕೊಳ್ಳುತ್ತಾರೆ. ಪಿಥೋರಾದ ಮನೆಯಲ್ಲಿ ಗೋಡೆಯ ಸಿದ್ಧತೆ ಮುಖ್ಯವಾಗಿರುತ್ತದೆ. ಚಿತ್ರಕಾರನು ಅದನ್ನು ವಕ್ರ ಮತ್ತು ಡೊಂಕಿಲ್ಲದೇ, ಚಿತ್ರಬಿಡಿಸಲು ತೊಂದರೆಯಾಗದಂತೆ ಸಿದ್ಧತೆ ಆಗಿದೆಯೇ ಇಲ್ಲವೆ ಎಂಬುದನ್ನು ಖಚಿತ ಮಾಡಿಕೊಳ್ಳುತ್ತಾನೆ. ಅದರ ಅಳತೆಯನ್ನು ಲೋಹದಿಂದ ಮಾಡಿದ ಬಾಣದ ಸಹಾಯದಿಂದ ಗುರುತು ಮಾಡಿಕೊಳ್ಳುತ್ತಾರೆ. ಪ್ರಾರಂಭಿಕ ಹಂತದ ರೇಖಾ ಚಿತ್ರಗಳನ್ನು ಈ ಬಾಣದ ತುದಿಯಿಂದಲೇ ಮಾಡುತ್ತಾರೆ. ಅಳತೆಯ ನಂತರ ಸುಣ್ಣ ಅಥವಾ ಕೆಮ್ಮಣ್ಣಿನ ಸಹಾಯದಿಂದ ನಾಲ್ಕೂ ಕಡೆಗೆ ಗೆರೆಗಳನ್ನು ಹಾಕಿ ಚೌಕಟ್ಟನ್ನು ಹಾಕಲಾಗುತ್ತದೆ. ಇದನ್ನೇ ಪಿಥೋರಾ ಚೌಕಟ್ಟು (ಬಾರ್ಡರ್) ಎಂದು ಕರೆಯಬಹುದು. ಚೌಕಟ್ಟಿನ ಕೆಳಗಿನ ಸಾಲಿನಲ್ಲಿ ಒಂದು ಸಣ್ಣ ದ್ವಾರವನ್ನು ಕಡ್ಡಾಯವಾಗಿ ಬಿಡಲಾಗುತ್ತದೆ. ಅದು ಪಿಥೋರಾ ಮನೆಯ ಮುಖ್ಯ ದ್ವಾರವಾಗಿರುತ್ತದೆ. ಪಿಥೋರಾ ಮನೆ ಅಥವಾ ಚೌಕಟ್ಟು ಹತ್ತರಿಂದ ಹದಿನೈದು ಅಡಿ ಅಥವಾ ಅದಕ್ಕಿಂತಲೂ ದೊಡ್ಡದು, ಸಣ್ಣದು ಆಗಿಯೂ ರಚಿಸಬಹುದು.

ಚೌಕಟ್ಟಿನ ಹೊರಗೆ ಕೆಲವು ಅನ್ಯ ಚಿತ್ರಗಳಿಗೆ ಅಥವಾ ಕುದುರೆಗಳ ರಚನೆಗಾಗಿ ಗೋಡೆಯ ಮೇಲೆ ಜಾಗವನ್ನು ಬಿಡುತ್ತಾರೆ. ಚೌಕಟ್ಟಿನ ಸುತ್ತಲೂ ಕೆಂಪು, ನೀಲಿ, ಬಿಳಿ ಮುಂತಾದ ಬಣ್ಣಗಳಿಂದ ತ್ರಿಭುಜಾಕಾರ ಅಥವಾ ಎಲೆಗಳ ಆಕಾರದಲ್ಲಿ ಅಲಂಕರಿಸುತ್ತಾರೆ. ಚೌಕಟ್ಟಿನ ಗೆರೆಗಳು ಕೆಂಪು, ಕಪ್ಪು, ನೀಲಿ ಅಥವಾ ಬಿಳಿ ಬಣ್ಣಗಳಲ್ಲಿ ಯಾವುದಾದರೂ ಆಗಿರಬಹುದು. ಚೌಕಟ್ಟಿನ ಮಧ್ಯದ ಗೆರೆಯಲ್ಲಿ ಹೂವು, ಮುಳ್ಳು ಮುಂತಾದ ಚಿತ್ರಗಳಿಂದ ಅಲಂಕರಿಸುತ್ತಾರೆ. ಚೌಕಟ್ಟು ಇದರಿಂದಾಗಿ ಬಣ್ಣಗಳಿಂದ ಆಕರ್ಷಿತವಾಗಿ ಕಾಣುತ್ತದೆ. ಧಾರ್, ಜಾಬುವಾದ ಪಿಥೋರಾ ಚಿತ್ರಗಳಲ್ಲಿ ಚೌಕಟ್ಟು ಅಗಲ ಮತ್ತು ದಪ್ಪವಾಗಿರುತ್ತದೆ. ಕಟ್ಟಿವಾಡ ಮತ್ತು ಸೊಂಡವಾದ ಚಿತ್ರಗಳಲ್ಲಿ ಚೌಕಟ್ಟು ತೆಳುವಾಗಿರುತ್ತದೆ. ಪಿಥೋರಾದ ಹೊರಗೆ ಆಸುಪಾಸಿನ ಕುದುರೆಗಳು ಮತ್ತು ಅವುಗಳ ಅಸ್ತಿತ್ವ ಸ್ವತಂತ್ರವಾಗಿ ರಚನೆಯಾಗಿರುತ್ತವೆ. ಕಟ್ಟಿವಾಡ ಪ್ರದೇಶದ

ಆಸುಪಾಸಿನ ಚಿತ್ರಕಲೆಯಲ್ಲಿ ಕುದುರೆಗಳು ಮತ್ತು ಇತರ ಅನ್ಯ ಆಕೃತಿಗಳು ಒಂದನ್ನೊಂದು ಆಕ್ರಮಿಸಿಲ್ಲವಾದರೂ ಮೇಲ್ಭಾವಣಿಯ ಆಶ್ರಯ ಸಲುವಾಗಿ ಮನೆಯ ಮೇಲೆ ಚೌಕಟ್ಟು ಮಾಡಿಬಿಡುತ್ತಾರೆ. ಇದರಿಂದ ಅವುಗಳ ಸ್ವತಂತ್ರತೆಗೆ ಧಕ್ಕೆ ಬರುವುದಿಲ್ಲ.

**ಆರನೆಯ ಹಂತ: ಭೂಮಿ ಪೂಜೆ**

ಚೌಕಟ್ಟು ರಚನೆಯಾದ ಮೇಲೆ ಪಿಥೋರಾ ಮನೆಯ ದ್ವಾರದ ಕೆಳಗೆ ನೆಲದ ಮೇಲೆ ಚಿತ್ರಕಾರನು ಬಿಳಿಯ ಬಣ್ಣದಿಂದ ಐದು ಇಲ್ಲವೇ ಏಳು ಚುಕ್ಕಿಗಳನ್ನು ತನ್ನ ಬೆರಳಿನಿಂದ ಇಡುತ್ತಾನೆ. ಬಿಳಿ ಚುಕ್ಕೆಗಳ ಮಧ್ಯೆ ಕಪ್ಪು, ಕೆಂಪು, ಹಳದಿ ಚುಕ್ಕಿಗಳನ್ನು ಇಡಲಾಗುತ್ತದೆ. ಇದನ್ನು ಭೂಮಿತಾಯಿಯ ಪ್ರಥಮ ಪೂಜೆಯೆಂದು ಅವರು ಮಾಡುತ್ತಾರೆ. ಈ ಚುಕ್ಕಿಗಳ ಮೇಲೆ ಚಿತ್ರಕಾರನು ಮದ್ಯದ ಹನಿಗಳನ್ನು ಹಾಕುತ್ತಾನಲ್ಲದೇ ತನ್ನ ಸಹಯೋಗಿ ಚಿತ್ರಕಾರರಿಗೆ ಸ್ವಲ್ಪ ಮದ್ಯವನ್ನು ಕುಡಿಸುತ್ತಾನೆ. ಈ ಮದ್ಯವನ್ನು ಭೂಮಿತಾಯಿಗೆ ನೈವೇದ್ಯದಂತೆ ಅರ್ಪಿಸುತ್ತಾರೆ. ನಂತರ ಚಿತ್ರಕಾರನು ಮನಸ್ಸಿನಲ್ಲಿಯೇ ಭೂಮಿತಾಯಿ ಕುರಿತು ಹೀಗೆ ಪ್ರಾರ್ಥಿಸುತ್ತಾನೆ. 'ಹೇ ಭೂಮಿತಾಯಿ ನೀನು ನಮ್ಮನ್ನು ಕಾಪಾಡು ಎಂದು ಹೇಳುತ್ತಲೇ, ಮದ್ಯದ ಹನಿಗಳನ್ನು ಚೌಕಟ್ಟಿಗೆ ಮತ್ತು ಆಕಾಶಕ್ಕೆ ಪ್ರೋಕ್ಷಣೆ ಮಾಡುತ್ತಾನೆ. ಇದು ಆಕಾಶ ಮತ್ತು ಅದರ ದೇವತೆಗಳ ಪೂಜೆಯಾಗುತ್ತದೆ. ನಂತರ ಚಿತ್ರಕಾರನು ಕುಂಚ ಮತ್ತು ಬಣ್ಣದ ದೊನ್ನೆಗಳನ್ನು ಎತ್ತಿಕೊಂಡು ಚಿತ್ರವನ್ನು ರಚಿಸಲು ಆರಂಭಿಸುತ್ತಾನೆ.

**ಏಳನೆಯ ಹಂತ: ಹುಕ್ಕಾ ಗಣೇಶ ಮೊದಲ ಚಿತ್ರ**

ಪಿಥೋರಾ ಚಿತ್ರದ ಆರಂಭವು ಹುಕ್ಕಾ ಗಣೇಶನ ಚಿತ್ರದಿಂದ ಶುರುವಾಗುತ್ತದೆ. ಹುಕ್ಕಾ ಗಣೇಶನನ್ನು ಚೌಕಟ್ಟಿನ ಎಡಬದಿಗೆ ಸ್ವಲ್ಪ ಅಂತರದಲ್ಲಿ ರಚಿಸುತ್ತಾರೆ. ಭಾವ್ರಾ, ಅಲಿರಾಜಪುರದಲ್ಲಿ ಹುಕ್ಕಾ ಗಣೇಶನಿಗೆ ಕಪ್ಪು ಬಣ್ಣ ಲೇಪನ ಮಾಡುತ್ತಾರೆ. ಈ ಹುಕ್ಕಾಗಣೇಶ ವಿಶಿಷ್ಟವಾದ ಚಿತ್ರವಾಗಿದೆ. ಅವನ ಚಿತ್ರವನ್ನು ಕೈಯಲ್ಲಿ ಸೇದುವ ರೀತಿಯಲ್ಲಿ ಕಮಾನಿನ ಆಕಾರದ ಕಾಲುಗಳನ್ನು ಮಾಡಿ ನಿಂತಿರುವ ಭಂಗಿಯಲ್ಲಿ ಚಿತ್ರಿಸುತ್ತಾರೆ. ಕಟ್ಟಿವಾಡದಲ್ಲಿ ಗಣೇಶನನ್ನು ಬಲಭಾಗದಲ್ಲಿ ನೀಲಿ ಕುದುರೆಯ ಮೇಲೆ ನೀಲಿ ಬಣ್ಣದ ಬಟ್ಟೆ ಧರಿಸಿ ಸವಾರಿ ಮಾಡುತ್ತಿರುವ ಭಂಗಿಯಲ್ಲಿ ಚಿತ್ರಿಸುತ್ತಾರೆ. ಅಲ್ಲಿಯೂ ಹುಕ್ಕಾ ಗಣೇಶನ ಕೈಯಲ್ಲಿರುತ್ತದೆ.

ಹಿಂದೂ ಪುರಾಣದಲ್ಲಿ ಗಣೇಶನಿಗೆ ಪ್ರಥಮ ಪೂಜೆ. ಅದನ್ನು ಬುಡಕಟ್ಟು ಜನಾಂಗಗಳು ಈ ರೀತಿಯಾಗಿ ತಮ್ಮ ಪೂಜೆಗಳಲ್ಲೂ ಗಣೇಶನಿಗೆ ಪ್ರಥಮ ಪೂಜೆ ಸಲ್ಲಿಸುತ್ತಿವೆ. ಹುಕ್ಕಾ ಗಣೇಶ ಸಾಮಾನ್ಯ ವ್ಯಕ್ತಿಯಂತೆ ಪ್ರತಿಮಾತ್ಮಕವಾಗಿದೆ. ಬಿಲ್‌ರ ಮನಸ್ಸಿನಲ್ಲಿ ಶಿವ, ಗೌರಿ ಮತ್ತು ಗಣೇಶ ಇವರು ಶುಭ ದೇವತೆಗಳಾಗಿದ್ದಾರೆ. ಆದಿವಾಸಿಯರಲ್ಲಿ ಭೋಲಾ ಶಿವ ಮತ್ತು ಗೌರಿಯರ

ಪ್ರತಿಷ್ಠೆ ಆ ದೇವತೆಗಳ ರೂಪದಲ್ಲಿ ಪ್ರಚಲಿತವಾಗಿತ್ತು. ಅನ್ಯ ಆದಿವಾಸಿಗಳಲ್ಲಿ ಬಡಾದೇವ (ದೊಡ್ಡ ದೇವ), ಬುಡದೇವ (ವೃದ್ಧದೇವ) ಮುಂತಾದ ಕಲ್ಪನೆಗಳು ಶಿವನ ವಿಭಿನ್ನವಾಗಿ ಕರೆಯುವ ಸ್ವರೂಪಗಳು ಕಾಣುತ್ತೇವೆ.

ಈ ಹಂತದಲ್ಲಿಯೇ ಪಿಥೋರಾ ಚಿತ್ರಕಲೆಯ ಬೆಳವಣಿಗೆಯು ಆಗುವುದು. ಹಾಗಾಗಿ ಭಾಬ್ರಾ ಮತ್ತು ಅಲಿರಾಜಪುರ ಭಾಗದಲ್ಲಿ ಪಿಥೋರಾ ಕಲೆಯನ್ನು ಹೇಗೆ ಚಿತ್ರಸಿದ್ದಾರೆಂಬುವುದನ್ನು ಇಲ್ಲಿ ವಿಶ್ಲೇಷಿಸುವುದು ಅವಶ್ಯಕವಾಗಿದೆ.

ಕಾಟಿಯಾ ಗೋಡಾ(ಕುದುರೆ) ಎಂದರೆ ಕಾಟಿಯಾ ಕುವರದೇವನನ್ನು ಮೊದಲು ಬಿಡಿಸುತ್ತಾರೆ. ಇದನ್ನು ಬಿಡಿಸುವ ಉದ್ದೇಶ ಆಮಂತ್ರಣವಾಗಿರುತ್ತದೆ. ಕುದುರೆಯ ಬೆನ್ನಿನ ಮೇಲೆ ಜೀನು ಕಟ್ಟಿ ಅದರ ಮೇಲೆ ಸವಾರನನ್ನು ಕೂರಿಸಲಾಗುತ್ತದೆ. ಇದನ್ನು ಕಾಟಿಯಾ ಗೋಡಾ ಎನ್ನುವರು. ಈ ಸವಾರನ ಒಂದು ಕೈಯಲ್ಲಿ ಲಗಾಮು ಮತ್ತೊಂದು ಕೈಯಲ್ಲಿ ಕೋಲು ಹಿಡಿದಿರುತ್ತಾನೆ. ಕುದುರೆಯ ಮುಖವು ಬಲಗಡೆಗೆ ತಿರುಗಿರುತ್ತದೆ. ಆ ಕುದುರೆಯ ಮುಂದೆ ಮೂರು ನಾಲ್ಕು ಜನ ಬಂದೂಕುದಾರಿಗಳು ಹೋಗುವ ದೃಶ್ಯವಿರುತ್ತದೆ. ಈ ಕುದುರೆಯು ಆಮಂತ್ರಣ ನೀಡಲು ಹೊರಟಿರುವ ಕುದುರೆಯಾಗಿದೆ. ಪಿಥೋರಾ ಪೂಜೆಗೆ ಚಿತ್ರಕಾರನನ್ನು ಆಮಂತ್ರಿಸುವ ಯಜಮಾನನು ಹೋಗುವುದನ್ನು ಈ ಚಿತ್ರ ಜ್ಞಾಪಿಸುತ್ತದೆ. ಅದನ್ನು ಚಿತ್ರಕಾರ ಅಲ್ಲಿ ವಿಭಿನ್ನವಾಗಿ ರಚಿಸಲು ಈ ಮಾದರಿಯನ್ನು ಆಯ್ದುಕೊಂಡಿದ್ದಾನೆಂದು ಕಾಣುತ್ತದೆ. ಪಿಥೋರಾ ಪೂಜೆಯಲ್ಲಿ ಸೇರಲು ಸೃಷ್ಟಿಯ ಸಮಸ್ತ ದೇವಾನು ದೇವತೆಗಳಿಗೆ ಹಳದಿಯ ಅಕ್ಷತೆ ಕೊಟ್ಟು ಆಮಂತ್ರಿಸುವ ವಿಧಾನವಾಗಿದೆ. ಇದನ್ನು ಕಪ್ಪು ಬಣ್ಣದಿಂದ ರಚಿಸಲಾಗುತ್ತದೆ. ಚೌಕಟ್ಟಿನ ಎಡಗಡೆಯ ಭಾಗದ ಮೂಲೆಯ ಹೊರಗೆ ಅಥವಾ ಒಳಗೆ ಇದನ್ನು ಬಿಡಿಸುತ್ತಾರೆ. ಇದರಲ್ಲಿಯೇ ಊರಿನ ಸಂಬಂಧಿಗಳು, ಪರಿಚಿತರು, ಸಣ್ಣ-ದೊಡ್ಡ ರೈತರು ಸೇರಿರುತ್ತಾರೆ. ಊರಿನ ಪ್ರಮುಖನ ಮನೆಯಲ್ಲಿ ಪಿಥೋರಾ ರಚಿಸುತ್ತಿದ್ದಾರೆ ಎನ್ನುವಂತೆ ಚಿತ್ರವನ್ನು ಬಿಡಿಸುತ್ತಾರೆ. ಎಲ್ಲರೂ ಬರಬೇಕೆಂದು ಘೋಷಣೆ ಮಾಡುವ ಚಿತ್ರವೂ ಕಾಣುತ್ತದೆ.

**೫.೨.೨ ಕಟ್ಟಿವಾಡ ಪ್ರದೇಶದ ಚಿತ್ರಶೈಲಿ**

ಕಟ್ಟಿವಾಡದಲ್ಲಿ ಪಿಥೋರಾ ಮನೆಯ ಹೊರಗೆ ಬಹಳಷ್ಟು ಕಾಟಿಯಾ ಗೋಡಾ ಮತ್ತು ಸವಾರನನ್ನು ಚಿತ್ರಿಸಲಾಗುತ್ತದೆ. ಸವಾರನಿಲ್ಲದ ಕುಮರೆಯನ್ನು ಒಂದು ದಿಕ್ಕಿನಲ್ಲಿ ಹೊರಟಿರುವಂತೆ ಚಿತ್ರಿಸುತ್ತಾರೆ. ಇದು ಸೇನಾ ಪಡೆಯು ಯುದ್ಧಕ್ಕೆ ಹೊರಟಂತೆ ಕುದುರೆಗಳ ಹಿಂಡು ಕಾಣುತ್ತದೆ. ಚಿತ್ರಕಾರನು ಕಾಟಿಯಾ ಗೋಡಾ (ಆಮಂತ್ರಣ ಕುದುರೆ)ಯನ್ನು ರಚಿಸಿದ ನಂತರ ನಿರಾಳನಾಗುತ್ತಾನೆ. ಏಕೆಂದರೆ ಪ್ರಮುಖ ಕುದುರೆ ಆಮಂತ್ರಣಕ್ಕೆ ಹೊರಟಿತೆಂಬ

ನೆಲೆಯಿಂದಾಗಿ ಆ ನಿರಾಳತೆ ಬರುತ್ತದೆ. ಆಗ ಎಲ್ಲಾ ದೇವ-ದೇವತೆಗಳು, ಎಲ್ಲಾ ಜನರು ಪಿಥೋರಾದೊಳಗೆ ಪ್ರವೇಶಿಸುತ್ತಾರೆಂಬ ಭಾವನೆಯು ಅಲ್ಲಿ ಮೂಡುತ್ತದೆ.

ಜಾಬುವಾದ ಕಟ್ಟಿವಾಡಾ ಪ್ರದೇಶವು ಗುಜರಾತಿನ ಸೀಮೆಗೆ ಹೊಂದಿಕೊಂಡಿದೆ. ಆದ್ದರಿಂದ ಇಲ್ಲಿ ಗುಜರಾತಿನ ಸಂಸ್ಕೃತಿಯ ಪ್ರಭಾವವು ಅತಿ ಹೆಚ್ಚು ಕಾಣಸಿಗುತ್ತದೆ. ಇಲ್ಲಿ ಊಟ, ತಿಂಡಿ, ಬಟ್ಟೆ ಧರಿಸುವಿಕೆ, ಭಾಷೆ, ಹಬ್ಬ, ಉತ್ಸವ ಮುಂತಾದವು ಗುಜರಾತಿ ಸಂಸ್ಕೃತಿಯ ಭಾಗವಾಗಿವೆ. ಪಿಥೋರಾ ಚಿತ್ರಶೈಲಿಯಲ್ಲಿಯೂ ಗುಜರಾತಿ ಸಂಸ್ಕೃತಿ ಪ್ರಭಾವವು ಎದ್ದು ಕಾಣುತ್ತದೆ. ಈ ಪ್ರದೇಶದಲ್ಲಿ ರಾಥವಾ ಜನರ ಪಿಥೋರಾವು ಪ್ರಸಿದ್ಧಿಯಾಗಿದೆ. ಗುಜರಾತಿನ ರಾಥವಾ ಪಿಥೋರಾ ಚಿತ್ರಣ ಶೈಲಿ ಮತ್ತು ಚರಿತ್ರೆಯು ಕಟ್ಟಿವಾಡಾ ಪಿಥೋರಾ ಚಿತ್ರಕ್ಕೆ ಹೊಂದಿಕೆಯಾಗುತ್ತದೆ. ಏಕೆಂದರೆ ಪಿಥೋರಾ ಚಿತ್ರಕಾರರು ಪ್ರಾಯಶಃ ಗುಜರಾತ ಕಡೆಯಿಂದಲೇ ಬರುತ್ತಾರೆ. ಕೆಲವು ಜನರು ಮಾತ್ರ ಕಟ್ಟಿವಾಡಾದಲ್ಲೇ ಇದ್ದಾರೆ. ಅವರು ಮಧ್ಯಪ್ರದೇಶದ ಜಾಬುವಾ ಜಿಲ್ಲೆಯ ನಿವಾಸಿಗಳಾಗಿರುತ್ತಾರೆ.

ಕಟ್ಟಿವಾಡಾ ಪಿಥೋರಾದಲ್ಲಿ ಕುದುರೆಗಳನ್ನು ವಿಭಿನ್ನವಾದ ವರ್ಣಗಳಿಂದ ಅಲಂಕರಿಸುತ್ತಾರೆ. ಕುದುರೆಗಳ ಸಂಖ್ಯೆಯೂ ಹೆಚ್ಚಾಗಿರುತ್ತದೆ. ಪಿಥೋರಾ ಮನೆಗೆ ನಮ್ಮ ಮೊದಲ ಪ್ರವೇಶವಾದರೆ ಅಶ್ವಗಳ ಜಗತ್ತೊಂದು ನಮಗೆ ಗೋಚರಿಸುತ್ತದೆ. ಭಾವರಾ ಮತ್ತು ಜಾಬುವಾ ಪ್ರದೇಶದ ಚಿತ್ರಗಳಲ್ಲಿ ಕುದುರೆಗಳು ಈಗಲೂ ಪ್ರಾಗೈತಿಹಾಸಿಕ ಚಿತ್ರಗಳ ರೇಖೆಗಳಿಗೆ ಹೊಂದುತ್ತವೆ. ಆದರೆ ಕಟ್ಟಿವಾಡಾದ ಚಿತ್ರಗಳ ಕುದುರೆಗಳಲ್ಲಿ ಬಣ್ಣಗಳ ಆಕರ್ಷಣೆ ಹೆಚ್ಚಾಗಿ ಕಾಣುತ್ತದೆ.

ಭಾವರಾ, ಜಾಬುವಾ ಮತ್ತು ಕಟ್ಟಿವಾಡಾ ಪಿಥೋರಾದ ಚಿತ್ರಗಳಲ್ಲಿ ಅಷ್ಟು ಭಿನ್ನತೆಯಿಲ್ಲ. ಆದರೂ ಅವುಗಳ ಸ್ಥಾನ, ಆಕೃತಿ, ವರ್ಣ ಮತ್ತು ನಿರೂಪಣೆಗಳಲ್ಲಿ ಬದಲಾಣೆಯಾಗಿದೆ. ಭಾವರಾದಲ್ಲಿ ಕುದುರೆಗಳು ಎದುರು-ಬದುರಾಗಿದ್ದು, ಅವುಗಳ ಲಗಾಮನ್ನು ಹಿಡಿದುಕೊಂಡಿರುವ ಪಿಥೋರಾನನ್ನು ಮಧ್ಯದಲ್ಲಿ ರಚಿಸಲಾಗುತ್ತದೆ. ಆದರೆ ಕಟ್ಟಿವಾಡ ಕುದುರೆಗಳು ಒಂದೇ ದಿಕ್ಕಿನಲ್ಲಿ ಮುಖ ಮಾಡಿರುವಂತೆ ಮೇಲಿನ ಕಡೆಗೆ ಹೊರಟಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ಗುಜರಾತ ಕ್ಷೇತ್ರದಲ್ಲಿ ಹೆಚ್ಚಿನ ಭಾಗ ಮರಭೂಮಿಯಾಗಿರುವುದರಿಂದ ಒಂಟೆಗಳನ್ನು ಹೆಚ್ಚಾಗಿ ಸಾಕುತ್ತಾರೆ. ಅದರ ಪ್ರತೀಕವಾಗಿಯೂ ಪಿಥೋರಾದಲ್ಲಿ ಒಂಟೆಗಳ ಚಿತ್ರಗಳನ್ನು ಬಿಡಿಸುತ್ತಾರೆ.

### ೫.೨.೩ ಭಾಗ್-ಧಾರ ಪ್ರದೇಶದ ಪಿಥೋರಾ ಶೈಲಿ

ಭಾಗ್, ಧಾರ ಪ್ರದೇಶದಲ್ಲಿ ಪಿಥೋರಾವನ್ನು 'ಪಿಟವರೋ' ಎಂದು ಕರೆಯುತ್ತಾರೆ. ಇದರ ನಿಜವಾದ ಹೆಸರು ಅಲ್ಲಿ 'ಪಿಠೋರಾಣ ದೇವ' ಎಂದಾಗಿರುತ್ತದೆ. ಶ್ರೀ ಬಿಲ್ಲಾಲಸಿಂಗ್ ಮತ್ತು ಪ್ರತಾಪಸಿಂಗ್ ಎನ್ನುವ ಬಿಲಾಲ ಗ್ರಾಮದ ಸಾಧು ಹೇಳುವ ಹಾಗೆ ಪೀಥೋರಾದ ರಚನೆ ರಕ್ಷಾ ಬಂಧನದ ಸಮಯದಲ್ಲಿ ಮಾಡಲಾಗುತ್ತದೆ. ಅಂದರೆ ರಾಖಿ ಹಬ್ಬಕ್ಕೂ ಒಂದು ದಿನ ಮೊದಲು.

**ಎಂಟನೆಯ ಹಂತ: ಪಿಥೋರಾ ಪೂಜೆಯ ಆರಂಭ**

ಪಿಥೋರಾದ ಚಿತ್ರರಚನೆಯಾದ ಮೇಲೆ ಅನ್ಯ ಪ್ರದೇಶಗಳಲ್ಲಿ ಚಿತ್ರವು ಒಂದು ವರ್ಷದವರೆಗೆ ಕಾಣಸಿಗುತ್ತದೆ. ಭಾಗ, ಧಾರ ಪ್ರದೇಶದಲ್ಲಿ ಅದರ ಉಳಿಯುವಿಕೆಯು ರಚನೆಯಾದ ಮೇಲೆ ಒಂದೆರಡು ದಿನ ಮಾತ್ರ ಇರುತ್ತದೆ. ಪಿಥೋರಾದ ಸಂಪೂರ್ಣ ಚಿತ್ರವಾದ ಬಳಿಕ ಸಾಧು, ಪೂಜಾರಿ ಮತ್ತು ಗಾಯಕರು ಬರುತ್ತಾರೆ. ಚಿತ್ರಕಾರನಿಗೆ ಚಿತ್ರ ರಚಿಸಲು ಬೆಳಿಗ್ಗೆ ೯ ಅಥವಾ ೧೦ ಗಂಟೆಗೆ ಶುರುವಾಗಿ ಸಂಜೆ ೪ ಅಥವಾ ೫ ಗಂಟೆಯ ಒಳಗೆ ಮುಗಿಸುತ್ತಾನೆ. ಇದರ ನಂತರ ಪೂಜೆಯ ತಯಾರಿ ಶುರುವಾಗುತ್ತದೆ. ರಾತ್ರಿ ೧೦ ಗಂಟೆಯ ನಂತರ ಸಾಧು ಪೂಜೆಯನ್ನು ಆರಂಭಿಸುತ್ತಾನೆ. ಮೊದಲು ಒಂದು ಬಾಟಲಿ ಸಾರಾಯಿ/ಮದ್ಯವನ್ನು ತರಿಸುತ್ತಾನೆ. ಅದನ್ನು ಪಿಥೋರಾ ಬಾಬಾನ ಎದುರಿನಲ್ಲಿ ಇಡುತ್ತಾನೆ. ಪಿಥೋರಾ ದೇವನ ಹೆಸರಿನಲ್ಲಿ ಮದ್ಯವನ್ನು ನೆಲದ ಮೇಲೆ ಸುರಿಯುತ್ತಾನೆ. ನಂತರ ಅಗರಬತ್ತಿಯನ್ನು ಹಚ್ಚುತ್ತಾನೆ. ಲೋಬಾನದ ಹೊಗೆಯನ್ನು ಹಾಕುತ್ತಾನೆ. ಇದನ್ನು ಮನೆಯ ಕೋಣೆಗಳಿಗೆ ಮತ್ತು ದನದ ಕೊಟ್ಟಿಗೆಗೆ ತೆಗೆದುಕೊಂಡು ಹೋಗಿ ಪ್ರೋಕ್ಷಣೆ ಮಾಡುತ್ತಾನೆ. ಒಂದು ನಿಂಬೆಹಣ್ಣನ್ನು ಹೊಸ್ತಿಲ ಮೇಲೆ ಹೋಳು ಮಾಡಿ ಇಡುತ್ತಾನೆ. ಈ ನಿಂಬೆಯು ಕೂಡ ಅಭಿಮಂತ್ರಿಸಿದ್ದಾಗಿರುತ್ತದೆ. ಉದ್ದಿನಕಾಳನ್ನು ಮಣ್ಣಿನ ಮಡಿಕೆಯಲ್ಲಿ ಹಾಕುತ್ತಾರೆ. ಒಬ್ಬ ಪೂಜಾರಿ ಪಿಥೋರಾದ ಪೂಜೆಯನ್ನು ಮಾಡುವ ಗೋಡೆಗೆ ಕುಳಿತಿರುತ್ತಾನೆ. ಅವನು ಅಲ್ಲಿ ಅಗರಬತ್ತಿ, ಲೋಬಾನ ಮತ್ತು ದೀಪಗಳನ್ನು ಬೆಳಗುತ್ತಾನೆ.

ಪಿಥೋರಾ ಪೂಜೆಯು ಮುಗಿದ ಮೇಲೆ ಢಮರುಗವನ್ನು ಬಾರಿಸಲಾಗುತ್ತದೆ. ಆಗ ಸಾಧುವಿನ ದೇಹದಲ್ಲಿ ದೇವತೆಯ ಪ್ರವೇಶವಾಗುತ್ತದೆಯೆಂಬ ನಂಬಿಕೆಯು ಅವರಲ್ಲಿದೆ. ಸಾಧುವಿನ ಶಾರೀರಿಕ ಭಂಗಿಗಳು ಆಗ ವಿಭಿನ್ನವಾಗಿರುತ್ತವೆ. ತಿರುಗುವುದು, ನಡುಗುವುದು, ಕೂದಲು ಬಿಚ್ಚಿಕೊಳ್ಳುವುದು, ತಲೆಯನ್ನು ಅಲ್ಲಾಡಿಸುವುದು, ಬಾಯಿಯಿಂದ ವಿಚಿತ್ರವಾದ ಧ್ವನಿ ಹೊರಡಿಸುವುದು ಕಾಣುತ್ತದೆ. ಆ ಸಾಧುವು ಅದೇ ಸಮಯದಲ್ಲಿ ಪಿಥೋರಾದಲ್ಲಿ ಆದ ತಪ್ಪುಗಳನ್ನು ಹೇಳುತ್ತಾನೆ. ಪಿಥೋರಾದಲ್ಲಿ ಬಿಟ್ಟಂತಹ ಇಲ್ಲವೇ ಮರೆತುಹೋದ ಪ್ರತಿಮೆ, ಸಂಕೇತಗಳನ್ನು ಗುರುತಿಸಿ ತೋರಿಸುತ್ತಾನೆ. ಚಿತ್ರಕಾರನು ಮತ್ತೇ ಬಿಟ್ಟುಹೋದ ಚಿತ್ರಗಳನ್ನು ಬರೆಯುತ್ತಾನೆ.

ಸಾಧು ಕುಣಿದು ಶಾಂತವಾದ ನಂತರ ಮನೆಯವರಿಗೆಲ್ಲ ಶುಭ ಹಾರೈಸುತ್ತಾನೆ. ಆಗ ಅಲ್ಲಿ ಹಾಡು, ವಾದ್ಯ ನುಡಿಸುವುದು ಆರಂಭವಾಗುತ್ತದೆ. ಸಾಧುವು ಪಿಥೋರಾದ ಹಾಡನ್ನು ತಾನೇ ಮೊದಲು ಹಾಡಲು ಆರಂಭಿಸುತ್ತಾನೆ. ಅವನ ಕೈಯಲ್ಲಿ ಬಿದಿರಿನಿಂದ ಮಾಡಿದ 'ಕರಗಸ' ವಾದ್ಯವಿರುತ್ತದೆ. ಒಂದು ಕೈಯಲ್ಲಿ ಅದನ್ನು ಹಿಡಿದು ಮತ್ತೊಂದು ಕೈಯಿಂದ ವಾದ್ಯವನ್ನು ಉಜ್ಜುತ್ತಾನೆ. ಆಗ ಆ ವಾದ್ಯದಿಂದ ಕರಕರ ಶಬ್ದವು ಹೊರ ಹೊಮ್ಮುತ್ತದೆ. ಸಾಧುವು ಹಾಡಿನ ಪಂಕ್ತಿಯನ್ನು ಹಾಡಿದರೆ ಉಳಿದವರು ಅನುಸರಿಸಿ ಹಾಡುತ್ತಾರೆ. ಆಗ ಪಿಥೋರಾ ದೇವನ ಆಗಮನವಾಗುತ್ತದೆ. ನಂತರ ಭೂಮಾತೆ, ರಾಣಿ ಕಾಜಲ್, ಮೋಹಿಮಾತಾ, ಮೋಟಮಾತಾ, ಖೇಡಾದೇವ, ಬಿಲದ ದೇವ, ಮೇಘ ರಾಣಾ, ರಾಮ–ಲಕ್ಷ್ಮಣ, ಸೀತಾ ಮಾತಾ, ಪಂಚ ಪಾಂಡವರು, ಗಂಗಾ–ಜಮುನಾ ಮುಂತಾದವರನ್ನು ಆಹ್ವಾನ ಮಾಡಲಾಗುತ್ತದೆ. ಸೂರ್ಯ–ಚಂದ್ರರು ಅಗತ್ಯವಾಗಿ ಆಹ್ವಾನಿತರಾಗಿರುತ್ತಾರೆ. ಇದನ್ನು ಎಂಟನೆಯ ಹಂತವೆಂದು ಪರಿಭಾವಿಸಬಹುದು.

**ಒಂಬತ್ತನೆಯ ಹಂತ: ಪಿಥೋರಾ ಪೂಜೆಯ ಸಮಾರೋಪ**

ಹಾಡು, ವಾದ್ಯ, ಗಾಯನ ಸಮಾಪ್ತಿಯಾದ ನಂತರ ಸಾಧುವು ಪಿಥೋರಾ ದೇವನ ಕಣ್ಣು ತೆಗೆಯಲು ಆಜ್ಞೆ ಮಾಡುತ್ತಾನೆ. ಸಾಧುವು ಪೂಜೆಯ ಸಮಾರೋಪವನ್ನು ಮಾಡಲು ಆಜ್ಞಾಪಿಸುತ್ತಾನೆ. ಈ ಆಜ್ಞೆಯ ನಂತರವೇ ಪೂಜಾರಿಯು ಪೂಜೆಯನ್ನು ಮಾಡುವುದು. ಇದೇ ಸಮಯದಲ್ಲಿ ಸಂಬಂಧಿಕರು, ಅಕ್ಕ ತಂಗಿಯರು, ಮಕ್ಕಳು, ಪಿಥೋರಾ ಸಮಾರೋಪ ಪೂಜೆಯಲ್ಲಿ ಪಾಲ್ಗೊಂಡು ಪೂಜಿಸಲು ಆರಂಭಿಸುತ್ತಾರೆ. ಪೂಜೆಯಲ್ಲಿ ಐದು ಮೊಟ್ಟೆಗಳು, ಐದು ಕೋಳಿಗಳು, ಮೇಕೆ, ತುಪ್ಪ, ನೀರಿನ ಲೋಟ, ಉರಿಯುತ್ತಿರುವ ದೀಪ ಮತ್ತು ಸಾರಾಯಿ ಬೇಕಾಗುತ್ತದೆ. ಪಿಥೋರಾ ದೇವನ ಪೂಜೆಯನ್ನು ಪೂಜಾರಿ, ಸಾಧು, ಮನೆಯ ಮಾಲಿಕ ಮತ್ತು ಉಳಿದ ಸ್ತ್ರೀ ಪುರುಷರು ಸೇರಿ ಮಾಡುತ್ತಾರೆ. ಪಿಥೋರಾ ಪೂಜೆಯ ವ್ರತಧಾರಿಯೂ ಇದರಲ್ಲಿ ಪಾಲ್ಗೊಳ್ಳುತ್ತಾನೆ. ಮೊಟ್ಟೆ, ತುಪ್ಪ, ತೆಂಗಿನಕಾಯಿ, ಹೂವು, ಹಣ್ಣು, ಹಂಪಲುಗಳನ್ನು ನೀರು ಸಿಂಪಡಿಸಿ ನೈವೇದ್ಯ ಮಾಡಲಾಗುತ್ತದೆ. ಒಂದು ಮೊಟ್ಟೆಯನ್ನು ಒಡೆದು ನೈವೇದ್ಯ ಮಾಡಲಾಗುತ್ತದೆ. ಉಳಿದ ಮೊಟ್ಟೆಗಳನ್ನು ಹಾಗೆಯೇ ಇಡಲಾಗುತ್ತದೆ. ಮೊದಲು ಕೋಳಿಯ ಬಲಿಯನ್ನು ಕೊಡಲಾಗುತ್ತದೆ. ನಂತರ ಮೇಕೆಯ ಬಲಿ ಕೊಡುತ್ತಾರೆ. ಈ ಪಿಥೋರಾ ಪೂಜೆಯಲ್ಲಿ ಯಜಮಾನನ ಸಹೋದರಿ ಮತ್ತು ಮಗಳು ಸಂಬಂಧಿಕರು ಕೂಡ ಕೋಳಿ, ಮೇಕೆಯ ಬಲಿ ಕೊಡುವರು. ಪಿಥೋರಾ ಪೂಜೆ ಮಾಡಿದ ಮನೆಯ ಯಜಮಾನನು ಪೂಜೆಗೆ ಬಂದ ಸಂಬಂಧಿಗಳಿಗೆ ಉಡುಗೊರೆ ನೀಡುತ್ತಾನೆ. ಸಂದರ್ಶನದ ಸಮಯದಲ್ಲಿ ಒಬ್ಬ ಸಾಧು ಹೇಳಿದ ಪ್ರಕಾರ ೨೦೧೫ ರಲ್ಲಿ ೧೧ ಮೇಕೆಗಳನ್ನು ಆ ಮನೆಯಲ್ಲಿ ಬಲಿಕೊಟ್ಟಿದ್ದರಂತೆ.

ಆ ಬಲಿಯ ಮೇಕೆ ಕೋಳಿಗಳನ್ನು ಊರಿಗೆಲ್ಲಾ ಪ್ರಸಾದ ರೂಪದಲ್ಲಿ ಊಟ ಹಾಕಿಸಲಾಗಿತ್ತು. ಕೋಳಿಯನ್ನೂ ಸಹ ಪಿಥೋರಾ ದೇವನಿಗೆ ಪ್ರಸಾದ ಇಡಲಾಗುತ್ತದೆ. ಅದನ್ನು 'ದೇವಕುಕ್ಕಡ' ಎಂದು ಕರೆಯಲಾಗುತ್ತದೆ. ಪೂಜೆಗೆ ಬಂದಿರುವ ಪುರುಷ ಮಹಿಳೆಯರು ನೃತ್ಯ ಮತ್ತು ಗಾಯನವನ್ನು ಮಾಡುತ್ತಾರೆ. ಇದರಲ್ಲಿ ಸಾರಾಯಿಯನ್ನು ಅತೀ ಹೆಚ್ಚು ಉಪಯೋಗಿಸುತ್ತಾರೆ. ಮಹುವಾ ಸಾರಾಯಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಕುಡಿದು ಜನರು ಕುಣಿಯದಿದ್ದರೆ ಆಗ ಪಿಥೋರಾ ದೇವನ ಆಮಂತ್ರಣ ವ್ಯರ್ಥವೆಂದು ಭಾವಿಸುತ್ತಾರೆ.

ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಪಿಥೋರಾ ಪೂಜೆಯು ಹೌದು, ಕಲೆಯೂ ಹೌದು. ಪಿಥೋರಾ ಚಿತ್ರಕಲೆಯನ್ನು ಬೇರೆ ಬೇರೆ ಭಾಗದಲ್ಲಿ ಭಿನ್ನ ಭಿನ್ನವಾಗಿ ರಚಿಸಿದರೂ ಪೂಜೆಯ ಆಚರಣೆಯ ವಿಧಾನ ಹೆಚ್ಚು ಕಡಿಮೆ ಒಂದೇ ರೀತಿಯಿದೆ. ಪಿಥೋರಾ ಬಿಲ್ ಬುಡಕಟ್ಟು ಜನರ ಜೀವನಗಾಥಾ. ಅದರಿಂದ ಅವರಿಗೆ ತಮ್ಮ ಬದುಕಿನ ಬಗ್ಗೆ ಅಪಾರವಾದ ವಿಶ್ವಾಸವೊಂದನ್ನು ಮೂಡಿಸುವ ಪರಿ. ಹಾಗಾಗಿಯೇ ವಿವಿಧ ಭಾಗಗಳಲ್ಲಿ ಬೇರೆ ಬೇರೆ ಸಮಯದಲ್ಲಿ ಅದನ್ನು ಆಚರಿಸುವುದು. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಚಿತ್ರಕಲೆಯು ಭಾರತೀಯ ಜನರ ಬದುಕಿನ ನಡುವೆ ಹಾಸುಹೊಕ್ಕಾಗಿದೆ. ಅದರಲ್ಲೂ ಬುಡಕಟ್ಟಿನ ಜನರು ಇದನ್ನು ತಮ್ಮ ರಕ್ಷಣೆಯ ಪವಿತ್ರ ಪೂಜೆಯೆಂದು ಭಾವಿಸುತ್ತಾರೆ.

ಕರ್ನಾಟಕದಲ್ಲಿಯೂ ಕೆಲವು ಬುಡಕಟ್ಟು ಗೋಡೆಯ ಮೇಲೆ ಚಿತ್ರಗಳನ್ನು ತೆಗೆಯುತ್ತಾರೆ. ಉದಾಹರಣೆಗೆ ಸೋಲಿಗರು, ಕುರುಬರು, ಯರವರು, ಪಣಿಯರು, ಹಸಲರು, ದೀವರು, ಗೊಂಡರು, ಕುಣಬಿ, ಗೌಳಿಗರು ಮುಂತಾದವರು. ಇವರು ಕುಲಧರ್ಮದ ಚೌಕಟ್ಟಿನಲ್ಲಿ ಈ ಚಿತ್ರಗಳನ್ನು ಬರೆಯಬಹುದು. ಆದರೆ ಧರ್ಮದ ಅಸ್ತಿತ್ವದ ನೆಲೆಯಲ್ಲಿ ಚಿತ್ರಗಳನ್ನು ಬರೆಯುವುದಿಲ್ಲ. ಬುಡಕಟ್ಟು ಜನರಿಗೆ ಈ ರೀತಿಯಾದ ನಿಲುವು ಕಾಣುವುದಿಲ್ಲ. ಅವರಿಗೆ ಅವರ ಕುಲದ ಪ್ರಶ್ನೆ ಮಾತ್ರ ಮುಖ್ಯವಾಗಿರುತ್ತದೆ. ಹಾಗಾಗಿಯೇ ಈ ಬುಡಕಟ್ಟುಗಳೆಲ್ಲ ಚಿತ್ರಕಲೆಯನ್ನು ತಮ್ಮ ಬದುಕಿನ ಭಾಗವಾಗಿಸಿಕೊಂಡಿವೆ.

### ೫.೩ ಪಿಥೋರಾ ಚಿತ್ರಕಲೆ : ಸಾಂಪ್ರದಾಯಿಕ ನಂಬಿಕೆ

ಬಿಲ್ ಜನಾಂಗವು ಪಿಥೋರಾ ಚಿತ್ರಕಲೆಯ ಉಗಮಕ್ಕೆ ಹೇಗೆ ಪೌರಾಣಿಕವಾದ ಕಾರಣಗಳನ್ನು ಇಟ್ಟುಕೊಂಡಿದೆಯೋ ಹಾಗೆಯೇ ಈ ಚಿತ್ರಕಲೆಯ ರಚನೆಯ ಹಿನ್ನೆಲೆಯಲ್ಲಿ ಸಾಂಪ್ರದಾಯಿಕ ನಂಬಿಕೆಯು ಮುಖ್ಯವಾಗಿದೆ. ಯಾವುದೇ ಜಾನಪದ ಆಚರಣೆ ಮತ್ತು ಬುಡಕಟ್ಟು ಆಚರಣೆಗಳು ತಮ್ಮ ಕಾಲ ಮತ್ತು ಸನ್ನಿವೇಶದ ಸಂದರ್ಭದಲ್ಲಿ ಹುಟ್ಟಿದರೂ ಅದರ ಹಿನ್ನೆಲೆಯಲ್ಲಿ ತಮಗೆ ಒಳಿತಾಗಬೇಕೆಂಬ ನಂಬಿಕೆಯೊಂದು ಕೆಲಸ ಮಾಡುತ್ತದೆ. ನಂಬಿಕೆಯಿಂದಲೇ

ಅನೇಕ ಆಚರಣೆಗಳು ಇನ್ನೂ ನಮ್ಮ ದೇಶದಲ್ಲಿ ಜೀವಂತವಾಗಿವೆ. ನಂಬಿಕೆಯೊಂದಕ್ಕೆ ಅದೆಷ್ಟು ಶಕ್ತಿಯಿರುತ್ತದೆಯೆಂದರೆ ಅನೇಕ ಮನುಷ್ಯರ ಬಲಿಯನ್ನು ತೆಗೆದುಕೊಳ್ಳುವಷ್ಟಿರುತ್ತದೆ. ಅಲ್ಲದೆ ಇದಕ್ಕೆ ವ್ಯತಿರಿಕ್ತವಾಗಿ ನಂಬಿಕೆಯೊಂದು ಒಂದು ಜಾನಪದ ಲೋಕದ ಮತ್ತು ಬುಡಕಟ್ಟು ಜನರ ಸಾಂಸ್ಕೃತಿಕ ಜೀವನವನ್ನು ಶ್ರೀಮಂತಗೊಳಿಸಬಲ್ಲಷ್ಟು ಶಕ್ತಿ ಇರುತ್ತದೆ. ಹೀಗೆ ಇದಕ್ಕೆ ಡಯಲಿಕ್ಟಿಕಲ್ ಆದ ಧೋರಣೆಗಳು ಇರುತ್ತದೆ. ಈ ನಂಬಿಕೆಯ ವಿಚಾರ ಶಕ್ತಿಯಲ್ಲಿ ಎರಡು ಮುಖ ಅವರಲ್ಲಿ ಕಾಣುತ್ತದೆ. ಕೆಲವು ಬುಡಕಟ್ಟುಗಳು ತಮ್ಮ ಆಚರಣೆಯಲ್ಲಿ ಇಂತಹ ಅನೇಕ ಮಾದರಿಗಳನ್ನು ತಮ್ಮೊಳಗೆ ಹುದುಗಿಸಿಕೊಂಡಿವೆ. ಅಂತಹ ಮಾದರಿಗಳಲ್ಲಿ ಕಲೆಯೂ ಒಂದು. ಕಲೆಯನ್ನು ಬುಡಕಟ್ಟು ಜನಾಂಗವು ವಿಭಿನ್ನವಾಗಿ ಆಚರಿಸುತ್ತಾ ಬಂದಿದೆ. ಅಲ್ಲದೇ ಅದನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ರವಾನಿಸುತ್ತಲೂ ಬಂದಿದೆ. ಕ್ರೌರ್ಯ ಮತ್ತು ಕಲೆ ಎರಡೂ ಬುಡಕಟ್ಟು ಸಂಪ್ರದಾಯದಲ್ಲಿ ಸಾಮಾನ್ಯವಾಗಿದೆ. ಈ ರೀತಿಯಾದ ಸಂಪ್ರದಾಯವು ಬಿಲ್‌ರಲ್ಲಿಯೂ ಇದೆ.

ಇಂತಹ ನಂಬಿಕೆಯನ್ನು ಎಸ್. ಸಿ. ಪಾಟೀಲರು ಇನ್ನೊಂದು ಆಯಾಮದಿಂದ ನೋಡುತ್ತಾರೆ. ಅವರು "ಧರ್ಮದ ಚೌಕಟ್ಟನ್ನು ಹಾಕಿಕೊಂಡಾಗ ಧಾರ್ಮಿಕ ಆಚರಣೆಗಳು ಕಲೆಯ ರೂಪವನ್ನು ತಾಳುವುದನ್ನು ನೋಡುತ್ತೇವೆ. ಎಷ್ಟೋ ಕಾಲದ ಹಿಂದಿನಿಂದ ಬಂದಿದೆ, ಅದನ್ನು ಬಿಡಬಾರದೆಂದು ಆಚರಿಸುವ ಅನೇಕ ಆಚರಣೆಗಳು ನಮ್ಮ ಕಣ್ಣ ಮುಂದಿವೆ. ಈ ಧರ್ಮದ ಪ್ರಭಾವಕ್ಕೆ ಸಿಲುಕಿ ದೇವರ ಆರಾಧನೆಗೆ ತೊಡಗಿ, ದೇವರನ್ನು ಸ್ತುತಿಸಲು, ನಲಿಸಲು ದೇವರ ಕಣ್ಣಿಗೆ ಹಬ್ಬ ಮಾಡಲು ಸಾಹಿತ್ಯ, ನೃತ್ಯ, ಅಲಂಕಾರದಂತಹ ಕಲೆಗಳು ಹುಟ್ಟಿಬಂದವು" ಎನ್ನುತ್ತಾರೆ.[೧] ಹೀಗೆ ಹಿಂದಿನಿಂದ ಬಂದದ್ದು ಧರ್ಮದ ನೆಲೆಯಲ್ಲಿಯೋ, ಆಚರಣೆಯ ನೆಲೆಯಲ್ಲಿಯೋ, ನಂಬಿಕೆಯ ನೆಲೆಯಲ್ಲಿಯೋ ಜನ್ಮ ತಾಳುತ್ತದೆ. ಇದನ್ನು ಮುಂದುವರೆಸಿಕೊಂಡು ಹೋಗುವಾಗಲೂ ಇವೇ ನೆಲೆಗಳು ಮುಖ್ಯವಾಗುತ್ತವೆ. ಉಳವಿ ಚನ್ನಬಸವೇಶ್ವರನ ಜಾತ್ರೆಯ ಸಂದರ್ಭದಲ್ಲಿಯೇ ಬೆಳದಿಂಗಳ ಚಿತ್ರವನ್ನು ಬರೆಯಬೇಕೆಂಬ ನಂಬಿಕೆಯೊಂದು ಜನಪದರಲ್ಲಿ ಸ್ಥಿರವಾಗಿಬಿಟ್ಟಿದೆ. ಇದೇ ರೀತಿಯಾದ ನಂಬಿಕೆಯೊಂದು ಬಿಲ್ ಬುಡಕಟ್ಟು ಜನಾಂಗದಲ್ಲಿ ಕಾಣಬಹುದು. ಬಿಲ್‌ರಲ್ಲಿ ಪಿಥೋರಾ ಚಿತ್ರವನ್ನು ಹೋಳಿಹಬ್ಬದ ಸಂದರ್ಭದಲ್ಲಿ ಬರೆಯಬೇಕೆಂಬ ನಂಬಿಕೆಯೊಂದು ಹಿಂದಿನಿಂದಲೂ ನಡೆದು ಬಂದಿದೆ. ಅದರಂತೆಯೇ ಬಿಲ್‌ರು ಪಿಥೋರಾವನ್ನು ಬರೆಯುತ್ತಾರೆ.

ಪಿಥೋರಾ ಕಲೆಯಲ್ಲಿ ಬಿಲ್ ಜನಾಂಗದ ನಂಬಿಕೆಗಳು ಹಲವು ರೀತಿಯಲ್ಲಿವೆ. ಅವನ್ನು ಪುರಾಣದ ನೆಲೆಯಲ್ಲಿ ಈ ಹಿಂದೆ ಗಮನಿಸಲಾಗಿದೆ. ಅಲ್ಲದೇ ಈ ಮೊದಲೇ ಹೇಳಿದ ಹಾಗೆ

ಈ ಚಿತ್ರಕಲೆಯು ದೇವರನ್ನು ಸಂತೈಸಲು ಅಥವಾ ಸಂತುಷ್ಟಿಗೊಳಿಸಲು ರಚಿಸುವುದು ಎಂಬ ನಂಬಿಕೆಯಿದೆ. ಈ ನಂಬಿಕೆಯಿಂದಲೇ ಬಿಲ್‌ರು ಚಿತ್ರಗಳನ್ನು ಗೋಡೆಗಳ ಮೇಲೆ ಬರೆಯುತ್ತಾರೆ. ಈ ಭಿತ್ತಿಚಿತ್ರಗಳನ್ನು ಬಿಡಿಸಲು ಗೋಡೆಯ ಆಯ್ಕೆಯ ವಿಚಾರದಲ್ಲೂ ಕೆಲವು ನಂಬಿಕೆಗಳಿವೆ. ಆ ನಂಬಿಕೆಗಳನ್ನು ಈಗಲೂ ರೂಢಿಸಿಕೊಂಡು ಬಂದಿರುವುದು ಇಂದಿಗೂ ಬಿಲ್‌ರಲ್ಲಿ ಕಾಣುತ್ತದೆ. ಮನೆಯ ಮುಖ್ಯಬಾಗಿಲನ್ನು ಪ್ರವೇಶಿಸಿದ ತಕ್ಷಣವೇ ಎದುರಾಗುವ ಗೋಡೆಯ ಮೇಲೆ ಮತ್ತು ಅದರ ಅಕ್ಕಪಕ್ಕದ ಗೋಡೆಗಳ ಮೇಲೆ ಮಾತ್ರವೇ ಈ ಚಿತ್ರಗಳನ್ನು ಬಿಡಿಸಬೇಕೆಂಬ ನಂಬಿಕೆಯಿದೆ. ಈ ಗೋಡೆಗಳನ್ನು ಹೊರತುಪಡಿಸಿ ಬೇರೆ ಯಾವುದೇ ಗೋಡೆಗಳ ಮೇಲೆ ಪಿಥೋರಾ ಬಾಬಾನ ಕಲಾಕೃತಿಯನ್ನು ಬಿಡಿಸದಂತಹ ಸಾಂಪ್ರದಾಯಿಕ ನಂಬಿಕೆಯೊಂದು ಅಲ್ಲಿ ಕಾಣುತ್ತದೆ. ಚಿತ್ರದಲ್ಲಿ ಬರುವ ರೂಪಗಳು, ಪ್ರಾಣಿ-ಪಕ್ಷಿಗಳು, ಗಿಡ-ಮರಗಳು, ಗ್ರಾಮದ ಜನರು – ಹೀಗೆ ಅನೇಕ ಸಂಗತಿಗಳು ನಿರ್ದಿಷ್ಟಪಡಿಸಿದ ಜಾಗದಲ್ಲಿಯೇ ರಚಿಸಬೇಕು. ಅಲ್ಲದೇ ಇಂತಹದ್ದೇ ಬಣ್ಣವನ್ನು ಲೇಪನ ಮಾಡಬೇಕೆನ್ನುವ ಅನೇಕ ಕಟ್ಟುಪಾಡುಗಳಿವೆ. ಇಲ್ಲಿ ಮೂರು ಮುಖ್ಯ ವಿಚಾರಗಳನ್ನು ಅವರ ನಂಬಿಕೆಯಲ್ಲಿ ಗಮನಿಸಬಹುದು. ಪಿಥೋರಾ ಚಿತ್ರಿಸುವ ಸ್ಥಳ, ಬಣ್ಣ, ಸಂಯೋಜನೆಯನ್ನು ಯಾವುದೇ ಕಾರಣಕ್ಕೂ ಬದಲಿಸದ ಅಚಲವಾದ ನಂಬಿಕೆ ಇಂದಿಗೂ ರೂಢಿಗತವಾಗಿ ಬಂದಿದೆ.

ಬಿಲ್‌ರ ಪಿಥೋರಾ ಸಾಂಪ್ರದಾಯಿಕ ಆಚರಣೆಯಲ್ಲಿ ವರ್ಣಗಳಿಂದ ರಚಿತವಾಗುವ ಕುದುರೆಗಳು ಸಂಪ್ರದಾಯವಾಗಿ ಯಾವ ಸ್ಥಳದಲ್ಲಿ ಯಾವ ಕುದುರೆ ಇರಬೇಕೆಂಬ ನಿಯಮ ಬದ್ಧವಾದ ನಂಬಿಕೆಯಿದೆ. ಕಪ್ಪು ಮತ್ತು ಬಿಳಿಯ ಬಣ್ಣದಿಂದ ರಚಿತವಾಗಿರುವ ರಾಖಿಯಾ ಕುದುರೆ ಮತ್ತು ಪಿಥೋರಾ ಆಚರಿಸುತ್ತಿರುವ ಕುಟುಂಬದವರು ಪಿಥೋರಾಕ್ಕೆ ಆಹ್ವಾನಿಸುವ ಚಿತ್ರಣ ಮೊದಲು ರಚನೆಯಾಗಬೇಕೆಂಬ ನಂಬಿಕೆಯಿದೆ. ಈ ಹಿಂದೆ ಗುರುತಿಸಿದ ಹಂತಗಳಲ್ಲಿಯೇ ಪಿಥೋರಾ ಚಿತ್ರಕಲೆಯ ವಿಶಿಷ್ಟತೆಯಿದೆ. ಈ ವಿಶಿಷ್ಟತೆಯು ಅವರ ನಂಬಿಕೆಯ ಮೇಲೆ ಗಾಢವಾಗಿ ಪ್ರಭಾವಿಸಿದೆ. ಬಿಲ್‌ರ ಯಾವ ಮತ್ತು ಯಾರ ಕುಟುಂಬದಲ್ಲೂ ನಂಬಿಕೆಗೆ ವಿರುದ್ಧವಾಗಿ ಯಾವ ಕುದುರೆಗಳನ್ನೂ ಹಿಂದು ಮುಂದು ರಚಿಸುವುದಿಲ್ಲ. ಆಹ್ವಾನಿತ ಚಿತ್ರದ ನಂತರ ಬಿಳಿಯ ವರ್ಣದಲ್ಲಿ ಬಾಬಾದೇವ ಮತ್ತು ಅವರ ಜೊತೆಗೆ ದೇಶಿಭವರ ಎಂಬ ಹೆಸರಿನ ಎರಡು ಕುದುರೆಗಳು ರಚಿತವಾಗಬೇಕು. ಇದರ ನಂತರ ಪಿಥೋರಾ ಕುವರ ಎಂಬ ಎರಡು ಕುದುರೆಗಳ ಮಧ್ಯದಲ್ಲಿ ನಿಂತಿರುವ ಒಬ್ಬ ವ್ಯಕ್ತಿಯ ಚಿತ್ರವು ಬಿಳಿ ಬಣ್ಣದಲ್ಲಿಯೇ ಬಿಡಿಸಿರಬೇಕು. ಇದಾದ ನಂತರ ರಾಣಿ ಕಾಜೋಲ್ ಎಂಬ ಕುದುರೆಯನ್ನು ಎಡಭಾಗದ ಮೇಲೆ ರಚಿಸಿರಬೇಕು, ಅದು ಬೆಂಕಿಯ ಕೆಂಡದ ಮೇಲೆ ನಡೆಯುತ್ತದೆಯೆಂಬ ನಂಬಿಕೆಯಿದೆ. ಆದುದರಿಂದಲೇ ಅದರ ಚಿತ್ರವನ್ನು ಕೇಸರಿ ಮಿಶ್ರಿತ ಕೆಂಪು ಬಣ್ಣದಿಂದಲೇ ಬಿಡಿಸಬೇಕೆಂಬ ನಿಯಮಕ್ಕಿಂತ ಅದೊಂದು ಅವರಿಗೆ ನಂಬಿಕೆಯಾಗಿದೆ.

ರಾಣಿ ಕಾಜೋಲ್ ಚಿತ್ರದ ಕೆಳಗೆ ಕಪ್ಪು ಮತ್ತು ಬಿಳಿ ಬಣ್ಣದಿಂದ ಗಣೇಶ ದೇವರನ್ನು ಬಿಡಿಸುತ್ತಾರೆ. ಗಣೇಶನು ಹುಕ್ಕಾ ಕುಡಿಯುತ್ತಿರುವ (ಸೇದುವ) ದೃಶ್ಯವು ಕಂಡುಬರುತ್ತದೆ. ಇವರ ಸಂಪ್ರದಾಯದಲ್ಲಿ ಗಣೇಶನು ಆನೆಯ ಮುಖವನ್ನು ಹೊಂದಿರುವುದಿಲ್ಲ. ಅದು 'ಹಯವದನ' ರೂಪದಲ್ಲಿಯೂ ಇರುತ್ತದೆ. ಇದನ್ನು ಬಿಲ್‌ರು ಗಣೇಶನೆಂದೇ ಸಂಬೋಧಿಸುತ್ತಾರೆ. ಈ ಗಣೇಶನ ಪಕ್ಕದಲ್ಲಿ ಸೂರ್ಯ ಚಂದ್ರರನ್ನು ಬಿಡಿಸುತ್ತಾರೆ. ಬೆಳದಿಂಗಳ ಚಿತ್ರಕಲೆಯಲ್ಲಿ ಸೂರ್ಯ-ಚಂದ್ರರನ್ನು ಬಿಡಿಸುವುದನ್ನು ಕಾಣಬಹುದು. ಅಲ್ಲದೇ ಕೆಲವು ಗವಿಚಿತ್ರಗಳಲ್ಲಿಯೂ ಸೂರ್ಯ-ಚಂದ್ರರನ್ನು ಆದಿಮಾನವರು ಬಿಡಿಸಿದ್ದಾರೆ. ಈ ಚಿತ್ರಕಲೆಯಲ್ಲಿ ಸೂರ್ಯ ಚಂದ್ರರನ್ನು ಬಿಡಿಸುವುದು ಅವರ ನಂಬಿಕೆಯಾಗಿದೆ. ಅದನ್ನು ಬರೆದೋ ಅಥವಾ ಚಿತ್ರ ಬಿಡಿಸುವ ಯಾವುದಾದರೂ ಸಂದರ್ಭದಲ್ಲಿ ಸೂರ್ಯ ಚಂದ್ರರನ್ನು ಬಿಡಿಸುವುದು ಬಂದುಬಿಟ್ಟಿದೆ.

ಚಿತ್ರಗಳು ಆದಿಮಾನವನಿಂದಲೂ ಇವತ್ತಿನವರೆಗೆ ಯಾಕೆ ಆಚರಣೆಯ ಭಾಗವಾಗಿ ಹುಟ್ಟಿದವು. ಧರ್ಮದ ನೆಲೆಯಲ್ಲಿ ಏಕೆ ಸ್ಥಾಪಿತಗೊಂಡವೆಂಬುದಕ್ಕೆ ಇನ್ನೂ ಅಧ್ಯಯನಗಳು ಗಮನಾರ್ಹವಾಗಿ ನಡೆಯಬೇಕಿದೆ. ಆದರೆ ಹಿಂದಿನಿಂದಲೂ ಚಿತ್ರಕಲೆಯನ್ನು ಸಾಂಪ್ರದಾಯಿಕವಾಗಿ ಆಚರಿಸಿಕೊಂಡು ಬರುತ್ತಿರುವುದನ್ನು ಗಮನಿಸಿದರೆ ನಂಬಿಕೆಯೊಂದು ಬಲವಾಗಿ ಕೆಲಸ ಮಾಡಿದೆಯೆಂದು ಅನ್ನಿಸುತ್ತದೆ. ಸಾಂಪ್ರದಾಯಿಕ ನಂಬಿಕೆಯೆಂಬುವುದು ಜಾಗತೀಕರಣದ ಸನ್ನಿವೇಶದಲ್ಲೂ ಬರುತ್ತಿರುವುದನ್ನು ಗಮನಿಸಬಹುದು. ನಂಬಿಕೆಯೊಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಾಗುವ ಪ್ರಕ್ರಿಯೆಯಾಗಿರುತ್ತದೆ. ಅನೇಕ ಜನಪದ, ಬುಡಕಟ್ಟು ಜನರು ಹೀಗೆ ವರ್ಗಾಯಿಸಿಕೊಂಡು ಸಂಪ್ರದಾಯಬದ್ಧ ಚಿತ್ರಕಲೆಯನ್ನು ಇಂದಿಗೂ ಆಚರಿಸುತ್ತಾರೆ. ಅಂತಹ ಆಚರಣೆಗಳಲ್ಲಿ ಮಧ್ಯಪ್ರದೇಶದ ಪಿಥೋರಾ ಚಿತ್ರಕಲೆಯೂ ಒಂದಾಗಿದೆ.

ಆದಿಮಾನವನು ನಿಸರ್ಗದಲ್ಲಿ ನೋಡಿದ ದೃಶ್ಯ ಮತ್ತು ಅನುಭವಕ್ಕೆ ತಂದುಕೊಂಡ ದೃಶ್ಯಗಳನ್ನು ಚಿತ್ರಗಳಲ್ಲಿ ಬಿಡಿಸುತ್ತಾನೆ. ಹಾಗೆಯೇ ಬುಡಕಟ್ಟು ಜನರು ಸಹ ನಿಸರ್ಗದಲ್ಲಿ ನೋಡಿದ ದೃಶ್ಯ ಮತ್ತು ತಮ್ಮ ಅನುಭವಕ್ಕೆ ಬಂದ ದೃಶ್ಯಗಳನ್ನು ಪಿಥೋರಾದಲ್ಲಿ ಹೆಚ್ಚು ಬಿಡಿಸುತ್ತಾರೆ.

ಚಿತ್ರರಚನೆ, ಚಿತ್ರಸಂಯೋಜನೆ, ಬಣ್ಣ ಸಂಯೋಜನೆಯಲ್ಲಿಯೂ ದೈವ ನಂಬಿಕೆಯನ್ನು ಇಟ್ಟುಕೊಂಡ ಅಪರೂಪದ ಒಂದು ಜನಾಂಗ. ಈ ಬಿಲ್‌ರು ಇದಕ್ಕೆ ಉದಾಹರಣೆಯಾಗಿ ಗಮನಿಸುವುದಾದರೆ ದ್ವಿಮುಖ ಹೊಂದಿರುವ ಕುದುರೆ ಮತ್ತು ಬೇಟೆಗಾರರ ಮದ್ಯೆ ನವಿಲನ್ನು ಚಿತ್ರಿಸುತ್ತಾರೆ. ಈ ಚಿತ್ರವು ಕಪ್ಪು ಬಣ್ಣದಲ್ಲಿ ರಚನೆಯಾಗಿದೆ. ಚುಕ್ಕಿಯಂತೆ ಕಾಣುವ ಕಪ್ಪು, ಬಿಳಿ, ಕೇಸರಿ ಮತ್ತು ಹಸಿರು ಬಣ್ಣಗಳು ಧಾನ್ಯಗಳನ್ನು ಪ್ರತಿನಿಧಿಸುತ್ತವೆಂದು ತೋರಿಸಿದ್ದಾರೆ. ಬೇಟೆಗಾರರ ಕೆಳಗೆ ಬಲಭಾಗದ ಮೂಲೆಯಲ್ಲಿ ಒಂದು ಆಕಳನ್ನು ಬಿಳಿಯ ಬಣ್ಣದಿಂದ

ಚಿತ್ರಿಸಲಾಗಿದೆ. ಅದರ ಕೆಳಭಾಗದಲ್ಲಿಯೇ ರೈತನು ಹೊಲವನ್ನು ಊಳುವ ದೃಶ್ಯವಿದೆ. ಅವನು ಎರಡೂ ಎತ್ತುಗಳಿಗೆ ನೇಗಿಲನ್ನು ಹೂಡಿ, ಹೊಲ ಊಳುತ್ತಿರುವ ದೃಶ್ಯವನ್ನು ಸಂಪೂರ್ಣವಾಗಿ ಬಿಳಿಯ ಬಣ್ಣದಿಂದಲೇ ರಚಿಸಿದ್ದಾರೆ. ಅಲ್ಲಲ್ಲಿ ನೀಲಿ ವರ್ಣದಿಂದ ರೇಖೆಗಳನ್ನು ಹಾಕಿದ್ದಾರೆ. ಹೊಲವನ್ನು ಆಯತಾಕಾರದಲ್ಲಿ ಬಿಡಿಸಿ, ಅದನ್ನು ಏಳು ಭಾಗಗಳನ್ನಾಗಿ ಮಾಡಿ, ಆ ಭಾಗಗಳನ್ನು ವಿವಿಧ ಬೇರೆ ಬೇರೆ ಬಣ್ಣಗಳಿಂದ ತುಂಬಲಾಗಿದೆ. ಒಂದೊಂದು ಭಾಗವನ್ನು ಕೆಂಪು, ಹಳದಿ, ಹಸಿರು, ಕಪ್ಪು, ನೀಲಿ, ಬಿಳಿ ಮತ್ತು ಕಾಲಿಬಿಟ್ಟಿರುವ ಭಾಗವೊಂದು ಇರುತ್ತದೆ. ಬಿಲ್‌ರ ನಂಬಿಕೆಯ ಪ್ರಕಾರ ಪ್ರತಿಯೊಂದು ಬಣ್ಣವು ಒಂದೊಂದು ಬೆಳೆಯನ್ನು ಸೂಚಿಸುತ್ತವೆ. ಈ ರೀತಿಯಾಗಿ ಅವರು ಹೊಲನ್ನು ಅದರಲ್ಲಿಯ ಬೆಳೆಯನ್ನು ಭಿನ್ನ ಬಣ್ಣಗಳಿಂದ ತೋರಿಸಿದ್ದಾರೆ. ಇದನ್ನು ಅವರ ನಂಬಿಕೆಯೆನ್ನಬೇಕೊ? ಅವರ ಚಿತ್ರಕಲಾ ಶೈಲಿಯನ್ನಬೇಕೊ? ಧಾರ್ಮಿಕ ಆಚರಣೆಯ ಭಾಗವೆನ್ನಬೇಕೊ? ಆದರೆ ಇವೆಲ್ಲವೂ ಅವರ ವಿಶಿಷ್ಟತೆ.

ಪಿಥೋರಾ ಚಿತ್ರಕಲೆಯು ಬಿಲ್ ಮತ್ತು ರಾಥವಾ ಜನರ ಆಚರಣೆಯ ಒಂದು ಕಲಾಶೈಲಿ. ಈ ಕಲೆಯನ್ನು ಅಭಿವ್ಯಕ್ತಿಸಲು ಒಂದು ಸೂಕ್ತ ಸಮಯವನ್ನು ನಿಗದಿಮಾಡಲಾಗುತ್ತದೆ. ಇದನ್ನು ಹೋಳಿ, ರಕ್ಷಾಬಂಧನ ಮುಂತಾದ ಸಂದರ್ಭದಲ್ಲಿ ಮಾತ್ರ ಆಚರಿಸುವ ಪದ್ಧತಿಯಿದೆ. ಈ ಆಚರಣೆಯ ಸಂದರ್ಭದಲ್ಲಿನ ಚಿತ್ರಗಳನ್ನು ಪುರುಷ ಚಿತ್ರಕಾರನೇ ಬಿಡಿಸಬೇಕು, ಮಹಿಳೆಯರು ಬಿಡಿಸುವಂತಿಲ್ಲ. ಈ ನಿಯಮವನ್ನು ಅಥವಾ ನಂಬಿಕೆಯನ್ನು ಹಿಂದಿನಿಂದಲೂ ಅನುಸರಿಸುತ್ತಾ ಬರಲಾಗಿದೆ. ಈ ಆಚರಣೆಯ ಹಿಂದಿನ ನಂಬಿಕೆ ಏನೆಂದರೆ ದೇವರಿಗೆ ನಮಸ್ಕರಿಸಲು, ಧನ್ಯವಾದಗಳನ್ನು ತಿಳಿಸಲು ಅಥವಾ ವರವನ್ನು ಬೇಡಲು.[೨]

ಪಿಥೋರಾ ಚಿತ್ರಕಲೆಗೆ ಸಂಬಂಧಿಸಿದಂತೆ ಗೋಡೆಗೆ ಸಗಣಿ ಮತು ಕೆಮ್ಮಣ್ಣು ಲೇಪಿಸಿ ಕ್ಯಾನವಾಸನ್ನು ಸಿದ್ಧಗೊಳಿಸುವ ಕಾರ್ಯವು ಮಹಿಳೆಯರಿಗೆ ಮೀಸಲಾಗಿದೆ. ಇದನ್ನು ಹೊರತು ಪಡಿಸಿದರೆ ಮಹಿಳೆಯು ಪ್ರೇಕ್ಷಕಳಾಗಿ ಪಿಥೋರಾ ಪೂಜೆಯಲ್ಲಿ ಉಳಿಯುತ್ತಾಳೆ. ಪುರುಷನು ಮಾತ್ರವೇ ಚಿತ್ರಗಳನ್ನು ಬಿಡಿಸಬೇಕು. ವಿಪರ್ಯಾಸವೇನೆಂದರೆ ಜನಪದರು ಮತ್ತು ಬುಡಕಟ್ಟುಗಳು ಮಹಿಳೆಯರ ಮಡಿಮೈಲಿಗೆಯ ಪರಿಕಲ್ಪನೆಯಿಂದ ಆರಚಣೆಯ ಸಂದರ್ಭದಲ್ಲಿನ ಪೂಜೆಗಳಲ್ಲಿ ದೂರವಿಟ್ಟಿವೆ. ಅವಳಿಗೆ ಕೆಳದರ್ಜೆಯ ಕೆಲಸಗಳನ್ನು ಮಾತ್ರ ವಹಿಸಿ ಉಳಿದ ಕೆಲಸಗಳಲ್ಲಿ ಪುರುಷನೇ ಭಾಗಿಯಾಗುತ್ತಾನೆ. ಈ ಚಿತ್ರಗಳನ್ನು ಬರೆಯುವಾಗ ಹೆಣ್ಣುಮಕ್ಕಳಿಗೆ ಪ್ರವೇಶವಿಲ್ಲ.

ಪಿಥೋರಾ ಪೂಜೆ ಮತ್ತು ಚಿತ್ರಿಸುವ ತಿಥಿಯು ವರ್ಷದಲ್ಲಿ ಎರಡು ಮೂರು ಸಲ ಮಾತ್ರವಿರುತ್ತದೆ. ರಕ್ಷಾಬಂಧನದ ಸಮೀಪ, ಹೋಳಿ ಹಬ್ಬದ ಸಂದರ್ಭ ಮತ್ತು ದೀಪಾವಳಿಯ ಸಮೀಪದಲ್ಲಿ ಆಚರಿಸಲಾಗುತ್ತದೆ. ಭಾಗ್, ಭಾವರಾ, ಅಲಿರಾಜಪುರ, ಸೊಂಡವಾ ಪ್ರದೇಶಗಳಲ್ಲಿ ಶ್ರಾವಣಮಾಸದ ರಕ್ಷಾಬಂಧನದ ಮೂರನೆಯ ದಿನ ಇಲ್ಲವೇ ಶ್ರಾವಣ ಮಾಸದ ಹುಣ್ಣಿಮೆಯ

ನಂತರ ಅಮವಾಸ್ಯೆವರೆಗಿನ ತಿಥಿಯಲ್ಲಿ ಮಾಡುತ್ತಾರೆ. ಕೆಲವರು ದೀಪಾವಳಿಯಾದ ಒಂಬತ್ತನೆಯ ದಿನಗಳ ನಂತರ ಪಿಥೋರಾ ಪೂಜೆ ಮಾಡುವ ಪರಂಪರೆ ಆರಂಭವಾಗುತ್ತದೆ. ಎಲ್ಲ ಬಿಲ್, ಬಿಲಾಲ್ ಪಿಥೋರಾವನ್ನು ಪ್ರತಿವರ್ಷ ಮಾಡುವುದಿಲ್ಲ. ಯಾರು ಬೇಡಿಕೊಂಡ ಹರಕೆಗಳು ಪೂರ್ತಿಯಾಗಿರುತ್ತದೆಯೋ ಅವರು ಮಾಡುತ್ತಾರೆ. ಇಲ್ಲವೇ ಪಿಥೋರಾ ಪೂಜೆಯನ್ನು ಮಾಡಿ ಎರಡು ವರ್ಷಗಳು ಮುಗಿದಿದ್ದರೆ ಮೂರನೆಯ ವರ್ಷ ಪಿಥೋರಾ ಮಾಡಬೇಕೆಂಬ ನಂಬಿಕೆಯು ನಡೆದು ಬಂದಿದೆ. ಶನಿವಾರ ಮತ್ತು ರವಿವಾರ ಬಿಟ್ಟು ಇನ್ನುಳಿದ ದಿನಗಳಲ್ಲಿ ಮಾತ್ರ ಪಿಥೋರಾ ಪೂಜೆ ಮಾಡುತ್ತಾರೆ. ಈ ಎರಡೂ ದಿನಗಳಂದು ಬಿಲ್ ಜನ ಯಾವ ಶುಭ ಕಾರ್ಯಗಳನ್ನು ಮಾಡುವುದಿಲ್ಲ. ಅಷ್ಟೇ ಅಲ್ಲ, ಮದುವೆಯನ್ನು ಕೂಡ ಈ ಎರಡು ದಿನಗಳಲ್ಲಿ ಮಾಡುವುದಿಲ್ಲ. ಸಾಧುಗಳನ್ನು ಈ ಬಗ್ಗೆ ವಿಚಾರಿಸಿದಾಗ ಇದರ ಬಗ್ಗೆ ನಿಖರವಾದ ಯಾವುದೇ ಕಾರಣವನ್ನು ಕೊಟ್ಟಿಲ್ಲ. ನಮ್ಮ ಪೂರ್ವಜರು ಇದನ್ನು ಮಾಡುತ್ತಾ, ಒಪ್ಪುತ್ತಾ ಬಂದಿದ್ದಾರೆ. ನಾವೂ ಸಹ ಈ ದಿನಗಳಂದು ಶುಭ ಕಾರ್ಯ ಮಾಡದೇ ಅವರ ನಂಬಿಕೆಗಳನ್ನು ಉಳಿಸಿಕೊಂಡು ಬಂದಿದ್ದೇವೆ ಎನ್ನುತ್ತಾರೆ.[೩]

ಪಿಥೋರಾ ಚಿತ್ರಕಲಾವಿದನು ತನ್ನ ಭಾವನೆ, ಅನಿಸಿಕೆಗಳನ್ನು ಚಿತ್ರದ ಮೂಲಕ ವ್ಯಕ್ತಪಡಿಸಬೇಕೆಂಬ ನಿಲುವು ಕಾಣುವುದಿಲ್ಲ. ಕಾರಣವೇನೆಂದರೆ ಇದೊಂದು ಸಂಪ್ರದಾಯಬದ್ಧ ಆಚರಣೆಯನ್ನು ತನ್ನ ಒಡಲೊಳಗೆ ಇರಿಸಿಕೊಂಡಿರುವುದು. ಅವನು ತನ್ನ ಸ್ವತಂತ್ರ ಅಭಿವ್ಯಕ್ತಿಯೊಂದನ್ನು ಬಿಡಿಸುವ ಹಾಗಿಲ್ಲ. ಅವನ ಅನುಭವಗಳು, ಸಂವೇದನೆಗಳು ಪಿಥೋರಾ ಆಚರಣೆಗೆ ಪೂರಕವಾಗಿರಬೇಕು. ಇಲ್ಲವೇ ತಮ್ಮ ಸ್ವಂತ ಅನುಭವ, ಸಂವೇಧನೆಗಳನ್ನು ಪಿಥೋರಾದಲ್ಲಿ ಬಿಡಿಸುವಂತಿಲ್ಲ. ಪಿಥೋರಾ ಆಚರಣೆಯ ಒಂದು ಶೈಲಿಯನ್ನು ಮುಂದುವರೆಸಿಕೊಂಡು ಸಂಪ್ರದಾಯವಾದಿಗಳಾಗಿ ಉಳಿಯಬೇಕೆ ಹೊರತು, ಒಂದು ಹೊಸ ಸಂಪ್ರದಾಯವನ್ನು ಹುಟ್ಟುಹಾಕುವಂತಿಲ್ಲ. ಅಷ್ಟರ ಮಟ್ಟಿಗೆ ಬಿಲ್ ಜನಾಂಗದ ನಂಬಿಕೆ ಈ ಕಲೆಯಲ್ಲಿ ಆವರಿಸಿಕೊಂಡಿದೆ.

ಪಿಥೋರಾದಂತ ಚಿತ್ರಕಲೆಯನ್ನು ಗಮನಿಸಿದಾಗ ಒಂದಂಶ ಮುಖ್ಯವಾಗಿ ಕಾಣುತ್ತದೆ. ಕೇವಲ ಭಾವನೆಯ ತೀವ್ರತೆಯ ಅಭಿವ್ಯಕ್ತಿಯೊಂದೇ ಕಲಾರಚನೆಗೆ ಕಾರಣವಲ್ಲವೆಂಬುವುದು, ಬಿಲ್‌ರಲ್ಲಿ ಯಶಸ್ವಿ ಜೀವನಕ್ಕೆ, ದೈವದ ಬಗೆಗಿನ ಭಯ, ಆತಂಕ, ವಂಶಾಭಿವೃದ್ಧಿ, ತಮ್ಮ ಆಶೋತ್ತರಗಳ ಪೂರೈಕೆಗಾಗಿ ಕೆಲವು ನಂಬಿಕೆಗಳು ಮತ್ತು ಈ ತತ್ಸಂಬಂಧವಾದ ಕಟ್ಟುಕಟ್ಟಳೆಗಳು ರೂಢಿಗೆ ಬಂದವು ಅನಿಸುತ್ತದೆ. ಇದಕ್ಕೋಸ್ಕರವಾಗಿಯೇ ಅವರು 'ಪಿಥೋರಾ ಬಾಬಾ' ಪೂಜೆಯ ಆಚರಣೆ ಮಾಡುವುದನ್ನು ರೂಢಿಸಿಕೊಂಡು ಬಂದಿದ್ದಾರೆ. ಆದಿಮಾನವನು ಸಹ ಆಹಾರ ಸಂಪಾದನೆ, ಗಿಡ, ಮರ, ಬಳ್ಳಿಗಳ ಸಮೃದ್ಧ ಬೆಳವಣಿಗೆ, ಭಯಂಕರವಾದ ಸನ್ನಿವೇಶದಿಂದ

ಪಾರಾಗಲು ಕೆಲವು ಚಿತ್ರಗಳನ್ನು ಬರೆಯುತ್ತಿದ್ದನ್ನೆಂಬುವುದನ್ನು ಗಮನಿಸಬಹುದು. ಇದೇ ತೆರನಾಗಿ ಬೇರೆ ಬೇರೆ ಕಾರಣಕ್ಕೆ ಬಿಲ್‌ರು ಚಿತ್ರಕಲೆಯನ್ನು ಒಂದು ಪೂಜೆಯಾಗಿ ಆಚರಿಸುತ್ತಿರುವುದು, ಭಾರತದಲ್ಲಿಯೇ ವಿಶೇಷವಾಗಿದೆ.

ಸುಭಾಷ್ ಬಿಲ್ ಎನ್ನುವ ಕಲಾವಿದ ಪಿಥೋರಾ ಚಿತ್ರದ ಬಗ್ಗೆ ಬಾಬಾ ಪಿಥೋರಾನನ್ನು ಇಂದ್ರನ ಮಗನೆಂದು ನಾವು ನಂಬುತ್ತೇವೆ. ಇವತ್ತಿಗೂ ದೇವರೆಂದು ಪೂಜಿಸುವ ಪರಂಪರೆಯನ್ನು ಬೆಳೆಸಿಕೊಂಡು ಬಂದಿದ್ದೇವೆ. ಪಿಥೋರಾ ಬಾಬಾ ನಮ್ಮ ಪೂರ್ವಜರಿಗೆ ಬಂದಂತ ರೋಗ-ರುಜಿನಗಳನ್ನು ಶಮನ ಮಾಡಿದ, ಭೀಕರ ಬರಗಾಲದಿಂದ ತತ್ತರಿಸಿದ ಅವರನ್ನು ಬರದಿಂದ ಪಾರುಮಾಡಿದನೆಂದು ಹೇಳುತ್ತಾರೆ. ಅಲ್ಲದೇ ಪಿಥೋರಾ ಬಾಬಾ ಮುನಿಸಿಕೊಂಡರೆ ನಮಗೆ ಅನೇಕ ಸಮಸ್ಯೆಗಳು ಬರುವುದುಂಟು. ಆದುದರಿಂದ ನಮ್ಮ ಪೂರ್ವಜರ ಕಾಲದಿಂದಲೂ ಪಿಥೋರಾ ಚಿತ್ರ ರಚಿಸಿ, ಪಿಥೋರಾನನ್ನು ಸಂತುಷ್ಟಿಗೊಳಿಸಿ ನಾವು ಸಮೃದ್ಧಿಯನ್ನು ಪಡೆಯುತ್ತೇವೆ. ಹೀಗೆ ಬಿಲ್‌ರು ತಮ್ಮ ನಂಬಿಕೆಗಳನ್ನು ಪರಂಪರೆಯಿಂದಲೂ ಸಾಗಿಸಿಕೊಂಡು ಬಂದಿದ್ದಾರೆ.

ಬಿಲ್‌ರ ಪಿಥೋರಾ ಚಿತ್ರಕಲೆಗೆ ದೈವಮೂಲದ ಪ್ರೇರಣೆಯೇ ಹೆಚ್ಚು. ಅವರು ನಿಸರ್ಗವಾಸಿಗಳಾಗಿರುವುದರಿಂದ ಅವರ ಕೃತಿಗಳಲ್ಲಿ ನಿಸರ್ಗದ ವೈವಿಧ್ಯತೆಯು ಪ್ರವೇಶ ಪಡೆಯುತ್ತದೆ. ಕೆಲವು ಬುಡಕಟ್ಟುಗಳಲ್ಲಿ ಪಿಥೋರಾ-ಪಿಥೋರಿಯ ಮದುವೆಯ ದಿಬ್ಬಣದ ಚಿತ್ರಗಳು ಆ ಆಚರಣೆಯಲ್ಲಿ ಪ್ರವೇಶ ಪಡೆಯುತ್ತವೆ. ಸಾಂಪ್ರದಾಯಿಕ ನಂಬಿಕೆಯ ಆಧಾರದ ಮೇಲೆಯೇ ಪಿಥೋರಾ ಚಿತ್ರಶೈಲಿಯು ಬೆಳೆದಿರುವುದು ಗಮನಾರ್ಹವಾಗಿದೆ. ಪಿಥೋರಾ ಬಾಬಾನ ಅಕ್ಕ-ಪಕ್ಕದಲ್ಲಿ ಚಿತ್ರಿತವಾಗಿರುವ ಚಿತ್ರಗಳೆಲ್ಲವೂ ಪಿಥೋರಾ ಬಾಬಾನ ಪರಿವಾರವೆಂದು ಬಿಲ್‌ರು ನಂಬಿಕೊಂಡು ಬಂದಿದ್ದಾರೆ. ಬಾಬಾನ ಆಚರಣೆಯಲ್ಲಿ ಎರಡು ರೀತಿಯ ನಂಬಿಕೆಗಳಿವೆ. ಒಂದು ಸಂತಾನವಿಲ್ಲದೇ ಇದ್ದಾಗ, ಕಾಯಿಲೆ-ಕಸಾಲೆಗಳು ಬಂದಾಗ, ಅವಿವಾಹಿತರಾಗಿದ್ದು ಕಂಕಣಭಾಗ್ಯ ಕೂಡಿಬರದೇ ಇದ್ದಾಗ ಬಡುವಾ ಪೂಜಾರಿಯ ಬಳಿ ತಮ್ಮ ಈ ಕಷ್ಟಗಳನ್ನು ಹೇಳಿಕೊಂಡಾಗ, ಬಡವಾ ಪೂಜಾರಿಯು ಪಿಥೋರಾನನ್ನು ಮನೆಗೆ ಕರೆಯಿರಿ ಎಂದು ನಿರ್ದೇಶಿಸುತ್ತಾನೆ. ಆಗ ಮನೆಗೆ ಒಂದು ವರ್ಷ ಬಾಬಾನನ್ನು ಸ್ಥಾಪಿಸುತ್ತಾರೆ. ಎರಡು, ಬಿಲ್‌ರು ಮೊದಲ ವರ್ಷ ಬಡುವಾನನ್ನು ಕರೆಯಿಸಿ ಪಿಥೋರಾ ರಚಿಸುತ್ತಾರೆ, ನಂತರ ಪ್ರತಿ ವರ್ಷವೂ ಬಡವಾನನ್ನು ಕರೆಸಬೇಕೆಂದೇನೂ ಇಲ್ಲ. ಮನೆಯಲ್ಲಿರುವ ಚಿತ್ರಕಾರನೇ ಚಿತ್ರ ಬಿಡಿಸಿ ಪಿಥೋರಾ ಆಚರಿಸುತ್ತಾನೆ.

## ೫.೪ ಪಿಥೋರಾ ಚಿತ್ರಕಲೆ: ತಂತ್ರ, ರಚನಾ ವಿಧಾನ ಮತ್ತು ಸಾಮಗ್ರಿಗಳು

ಮನೆಯ ಗೋಡೆಯ ಮೇಲೆ ಪಿಥೋರಾ ಆಚರಣೆಯನ್ನು ಸೃಷ್ಟಿಸುವ, ಸ್ಥಾಪಿಸುವ ಕ್ರಿಯಾವಿಧಿಯ ಕಾರ್ಯವನ್ನು ಪಿಥೋರಾ 'ಬೆಹಡ್ವೊ' ಎಂದು ಕರೆಯಲಾಗುತ್ತದೆ. ಪಿಥೋರಾ ಕುಳಿತುಕೊಳ್ಳಲು ಮಾಡುವ ಈ ವರ್ಣ ಚಿತ್ರದ ಕಾರ್ಯವನ್ನು ಪಿಥೋರಾ 'ಲಕ್ವೊ' ಎಂದು ಸಹ ಕರೆಯುತ್ತಾರೆ. ಪಿಥೋರಾವು ಗೋಡೆಯ ಮೇಲೆ ಬಿಡಿಸುವ ಒಂದು ದೇವಕಾರ್ಯ ವಿಧಾನವಾಗಿದೆ. ಚಿತ್ರಕಲೆಯು ಪೂರ್ಣಗೊಂಡ ನಂತರ, ಬಾಡ್ವಾನು ಪರವಶತೆಯಿಂದ ಚಿತ್ರಕಾರನು ಬರೆದ ಪಿಥೋರಾ ಚಿತ್ರಗಳನ್ನು ಪರೀಕ್ಷಿಸುತ್ತಾನೆ. ಅಲ್ಲದೇ ಆ ಚಿತ್ರಗಳಿಗೆ ಹೆಸರುಗಳನ್ನು ಸೂಚಿಸುತ್ತಾನೆ. ಈ ಕಾರ್ಯವನ್ನು ಪಿಥೋರಾ 'ವಾಕ್ವೊ' ಎಂದು ಕರೆಯಲಾಗುತ್ತದೆ. ಹೀಗೆ ಪಿಥೋರಾವನ್ನು ಓದಿಕೊಳ್ಳಬಹುದು. ಅಲ್ಲದೇ ಪಿಥೋರಾವನ್ನು ಪಿಥೋರಾ ಸ್ಥಾಪಿಸುವುದು, ಪಿಥೋರಾ ಬಿಡಿಸುವುದು, ಪಿಥೋರಾ ಓದುವುದು ಎಂಬ ಬೇರೆ ಬೇರೆ ಪರಿಭಾಷೆಗಳಿಂದ ಕರೆದುಕೊಳ್ಳುವುದು ಗಮನಾರ್ಹವಾಗಿದೆ. ಇಂತಹ ಚಿತ್ರಕಲೆಯನ್ನು ಅವರು ಗೋಡೆಯ ಮೇಲೆ ಬಿಡಿಸುವಾಗ ಗೋಡೆಯ ತಯಾರಿ ಹೇಗಿರುತ್ತದೆ. ಬಣ್ಣಗಳನ್ನು ಹೇಗೆ ತಯಾರಿಸಿಕೊಳ್ಳುತ್ತಾರೆ. ಅವರ ಚಿತ್ರರಚನಾ ತಂತ್ರ ಮತ್ತು ವಿಧಾನಗಳು ಹೇಗಿವೆ. ಚಿತ್ರರಚನೆಗೆ ಏನೆಲ್ಲಾ ಸಾಮಗ್ರಿಗಳನ್ನು ಬಳಸುತ್ತಾರೆ ಎಂಬುದನ್ನು ಗಮನಿಸುವುದು ಅಗತ್ಯವಾಗಿದೆ.

### ೫.೪.೧ ಪಿಥೋರಾ ಚಿತ್ರಕಲೆ: ಗೋಡೆಯ ತಯಾರಿಕೆ

ಬಿಲ್ ಪುರಾಣ ಕಲ್ಪನೆಯ ಪ್ರಕಾರ, ಪಿಥೋರಾ ದೇವತೆಯ ಆಶ್ರಯ ಅಥವಾ ಆಸನವು ವರಾಂಡದ ಮುಖ್ಯ ಗೋಡೆಯಾಗಿದೆ. ಆದ್ದರಿಂದ ಇದನ್ನು ಹೆಚ್ಚಾಗಿ 'ರಾಜುಭಿಟು' ಅಥವಾ 'ರಾಯಲ್ ವಾಲ್' ಎಂದು ಕರೆಯಲಾಗುತ್ತದೆ. ಬಿಲ್‌ರು ಮನೆಯನ್ನು ನಿರ್ಮಿಸಿದ ಸಮಯದಿಂದಲೇ ಈ ನಿರ್ದಿಷ್ಟವಾದ ಗೋಡೆಯು ಪಿಥೋರಾಗೆ ಮೀಸಲಿಟ್ಟಿರುತ್ತಾರೆ. ಪಿಥೋರಾವನ್ನು ಈ ತನಕವೂ ಆಚರಣೆಯ ಭಾಗವಾಗಿ ಗೋಡೆಯ ಮೇಲೆ ಧರಿಸಲಾಗುತ್ತದೆ. ಅಲ್ಲದೆ ಆಚರಣೆಯ ನಂತರವೂ ಆ ಜಾಗವನ್ನು ಪಿಥೋರಾ ಬಾಬಾನ ಆಶ್ರಯ ತಾಣವಾಗಿ ಕಾಯ್ದಿರಿಸಲಾಗುತ್ತದೆ. ಯಾವುದೇ ಒಂದು ಕುಟುಂಬವು ತನ್ನ ಆರ್ಥಿಕ ಪರಿಸ್ಥಿತಿ ಮತ್ತು ಧಾರ್ಮಿಕ ಆಚರಣೆಯ ಅಗತ್ಯವನ್ನು ಪರಿಶೀಲಿಸಿದ ನಂತರವಷ್ಟೇ ಮುಂದಿನ ಕಾರ್ಯಕ್ಕೆ ಅಣಿಯಾಗುತ್ತದೆ. ಉತ್ತಮ ಸ್ಥಿತಿ ಇಲ್ಲದಿದ್ದರೆ ಈ ಆಚರಣೆಗೆ ಕೈ ಹಾಕುವುದಿಲ್ಲ. ಹಣಕಾಸಿನ ಸ್ಥಿತಿ ಉತ್ತಮವಿದ್ದು, ತಮ್ಮ ಹರಕೆಗಳನ್ನು ತೀರಿಸಲು ಸಾಧ್ಯವಾದಾಗ ಅವರು ಬಡುವಾನನ್ನು ಇದರ ಬಗ್ಗೆ ಸಮಾಲೋಚನೆ ಮಾಡಲು ಭೇಟಿಯಾಗುತ್ತಾರೆ. ನಂತರದಲ್ಲಿ ಬಡುವಾನ ಒಪ್ಪಿಗೆಯ ಮೇರೆಗೆ ಪಿಥೋರಾ ಪೂಜೆಗೆ ಬೇಕಾದ ತಯಾರಿ ನಡೆಯುತ್ತದೆ. ಮೊದಲ ತಯಾರಿಯೇ ಗೋಡೆಯನ್ನು ಸಿದ್ಧಗೊಳಿಸುವುದು. ಈ ಸಿದ್ಧತೆಗೆ ಬೇಕಾದಂತಹ ಮಣ್ಣು ಮತ್ತು ಸಗಣಿಯನ್ನು

ಸಂಗ್ರಹಿಸುವುದು. ಈ ತರಹದ ಸಂಗ್ರಹಕ್ಕಾಗಿ ತಮ್ಮ ಊರಿನ ಹುಡುಗ–ಹುಡುಗಿಯರನ್ನು ಸಣ್ಣ ಪುಟ್ಟ ಕೆಲಸಗಳಿಗೆ ಬಳಸಿಕೊಳ್ಳುತ್ತಾರೆ. ಅಲ್ಲಿ ಹುಡುಗ ಹುಡುಗಿಯರು ಪಿಥೋರಾನನ್ನು ನೋಡಲು ಬರುತ್ತಾರೆಂಬುದು ಗಮನಾರ್ಹವಾದುದು.

ಬಿಲ್‌ರು ಮಣ್ಣು ಮತ್ತು ಸಗಣಿಯನ್ನು ಚೆನ್ನಾಗಿ ಕಲೆಸಿ ಗೋಡೆಗೆ ಲೇಪಿಸುತ್ತಾರೆ. ಆ ಮೂಲಕ ಧಾರ್ಮಿಕವಾದ ಆಚರಣೆಗಾಗಿ ಅದನ್ನು ತಯಾರಿಸುತ್ತೇವೆಂಬ ಭಾವನೆಯನ್ನು ಅವರು ಹೊಂದಿರುತ್ತಾರೆ. ಒಂಬತ್ತು ದಿನಗಳ ಕಾಲ ಗೋಡೆಯನ್ನು ಮಣ್ಣು ಮತ್ತು ಸಗಣಿಯಿಂದ ಸ್ವಚ್ಛ ಮತ್ತು ಸಮಾನಾಂತರವಾಗಿ ಲೇಪಿಸುತ್ತಾರೆ. ಈ ಗೋಡೆಯ ತಯಾರಿ ಸಂದರ್ಭದಲ್ಲಿ ಪ್ರತಿದಿನವೂ ಹಾಡನ್ನು ಹಾಡಲಾಗುತ್ತದೆ. ಒಂಬತ್ತನೆಯ ದಿನದ ರಾತ್ರಿ, ಅದು ಮಂಗಳವಾರ ದಿನದಂದು ಗೋಡೆಗೆ ಮೃದುವಾದ ಬಿಳಿ ಮಣ್ಣಿನ ಕದರು ನೀರನ್ನು ಪರಿಹಾರದೋಪಾದಿಯಲ್ಲಿ ಅಂತಿಮ ಲೇಪನವನ್ನು ಮಾಡುತ್ತಾರೆ. ಈ ಕದರು ನೀರನ್ನು ಗೋಡೆಯಲ್ಲಿನ ವಕ್ರತೆ ಮತ್ತು ಬಿರುಕನ್ನು ಸರಿಪಡಿಸಲು ಲೇಪಿಸುತ್ತಾರೆ. 'ಪಾಂಡುರಾಯ'ವೆಂದು ಕರೆಯಲ್ಪಡುವ ಬಿಳಿ ಜೇಡಿ ಮಣ್ಣಿನ ಗಣಿಗಳು ತಮ್ಮ ಆಶ್ರಯದ ಸಮೀಪದಲ್ಲಿ ಕಂಡುಬರುತ್ತದೆ. ಈ 'ಪಾಂಡುರಾಯ' ಬಿಳಿ ಜೇಡಿ ಮಣ್ಣಿನ ದೇವರಾಗಿದ್ದಾನೆ. ಅವರು ಮಣ್ಣನ್ನು ತರುವ ಉದ್ದೇಶವನ್ನು ಇಟ್ಟುಕೊಂಡಾಗ ಮಂಗಳವಾರದಂದೇ ತರುತ್ತಾರೆ. ಏಕೆಂದರೆ ವಾರದಲ್ಲಿನ ಆ ದಿನವನ್ನು ಅಥವಾ ಮಂಗಳವಾರವು ಪಾಂಡುರಿಯೋ ದಿನವೆಂದು ಕರೆದುಕೊಂಡಿದ್ದಾರೆ. ಹಾಗಾಗಿಯೇ ಮಂಗಳವಾರ ಅವರಿಗೆ ವಿಶೇಷವಾದ ದಿನ.

ಈ ದಿನದಂದು ಇಬ್ಬರು ಅಥವಾ ಮೂರು ಮಂದಿ ಗಣಿಗಳಿಗೆ ಹೋಗಿ ಮಣ್ಣನ್ನು ಸಂಗ್ರಹಿಸುತ್ತಾರೆ. ಮಣ್ಣನ್ನು ಸಂಗ್ರಹಿಸುವುದಕ್ಕೆ ಹೋಗುವವರಿಗೆ ಬಡುವಾನು ಈ ರೀತಿ ಹೇಳುತ್ತಾನೆ. "ಜೇಡಿ ಮಣ್ಣನ್ನು ಸಂಗ್ರಹಿಸಲು ಹೋಗುವಾಗ ತಮ್ಮ ಜೊತೆಗೆ ಹಿತ್ತಾಳೆಯ ಅರಿವಾಣ, ಒಂದು ತಾಮ್ರದ ಬಿಂದಿಗೆ, ದೀಪ, ಹಿಂದುರ್ (ಪಾದರಸ ಆಕ್ಸೈಡ), ಸಾರಾಯಿ, ಕೋಳಿ ತೆಗೆದುಕೊಂಡು ಹೋಗಬೇಕು, ಅಲ್ಲಿ ಭೂಮಿತಾಯಿಯನ್ನು ಆರಾಧಿಸಿದ ನಂತರ, ಆ ತಾಯಿಗೆ ಮದ್ಯ ಮತ್ತು ಕೋಳಿಯ ಯಕೃತ್‌ನ್ನು ಎಡೆಯಾಗಿ ಅರ್ಪಿಸಬೇಕು. ಆಮೇಲೆ ಮಣ್ಣಿನ ಸಂಗ್ರಹಕ್ಕೆ ಗುಣಿಯನ್ನು ತೋಡಬೇಕು. ಭೂಮಿಯ ಹೊಟ್ಟೆಯನ್ನು ಬಗೆದು ಮಣ್ಣನ್ನು ಸಂಗ್ರಹಿಸುತ್ತಿದ್ದೇವೆ, ನಿನ್ನ ತ್ಯಾಗ ದೊಡ್ಡದು ತಾಯಿಯೆಂದು ನಮಸ್ಕರಿಸಬೇಕು. ಹೀಗೆ ಆರಚಣೆಯನ್ನು ಮಾಡದಿದ್ದರೆ ಮುಂದೆ ಪಿಥೋರಾ ಮಾಡುವಾಗ ಗೋಡೆಯಲ್ಲಿ ಬಿರುಕುಗಳು ಉಂಟಾಗುತ್ತವೆ" ಎಂದು ಹೇಳಿ ಕಳುಹಿಸಿರುತ್ತಾರೆ.

ಸಂಸ್ಕೃತದಲ್ಲಿ 'ಪಾಂಡು' ಎಂಬ ಪದವು ಅಸ್ತಿತ್ವದಲ್ಲಿದೆ. ಪಾಂಡು ಎಂದರೆ ಬಿಳಿ ಎಂದರ್ಥ. ಇಂತಹ ಮಣ್ಣನ್ನು ಚೆನ್ನಾಗಿ ಕಲೆಸಿ ಸಣ್ಣ ಸಣ್ಣ ಅಥವಾ ತುಂಡು ತುಂಡು ಮಿದಿಕೆ ಮಾಡಿ ಬಿಳಿ ಮಣ್ಣನ್ನಾಗಿ ಮಾಡಿಕೊಳ್ಳಲಾಗುತ್ತದೆ. ಅದನ್ನು ಗೋಡೆಗೆ ಹದವಾಗಿ ಲೇಪಿಸಲಾಗುತ್ತದೆ. ಮರುದಿನ ಮುಂಜಾನೆ ಅಂದರೆ ಬುಧವಾರದಂದು ಚಿತ್ರಕಲೆಗೆ ಗೋಡೆ ಸಿದ್ಧವಾಗಿರುತ್ತದೆ.

**೫.೪.೨ ಪಿಥೋರಾ ಚಿತ್ರ: ಸಲಕರಣೆಯ ವಸ್ತುಗಳು**

ವರ್ಣಚಿತ್ರದ ಸಂಪೂರ್ಣವಾದ ಕಾರ್ಯವಿಧಾನಕ್ಕೆ ಕೆಲವು ಸರಳವಾದ ಮತ್ತು ಮೂಲಭೂತವಾದ ವಸ್ತುಗಳನ್ನು ಬಳಸಲಾಗುತ್ತದೆ. ಇದರಲ್ಲಿ ಏಳು ಮೀಟರ್ ಉದ್ದದ ಹತ್ತಿಯ ದಾರವನ್ನು ಬಳಸುತ್ತಾರೆ. ಇದನ್ನು 'ಹುತಾರ್' ಎಂದು ಕರೆಯುತ್ತಾರೆ. ಈ ದಾರವನ್ನು ಚಿತ್ರ ಬಿಡಿಸುವ ಜಾಗದ ಅಳತೆ ಮತ್ತು ರೇಖೆಗಳನ್ನು ಹಾಕಿಕೊಳ್ಳಲು ಬಳಸುವುದಿದೆ. ಪ್ರಾಚೀನ ಬಿಲ್‌ರು ಬಿದಿರಿನಿಂದ ದಾರದ ಎಳೆಯನ್ನು ಮಾಡಿಕೊಂಡು ಬಳಸುತ್ತಿದ್ದರು. ಕುಂಚಗಳನ್ನು ತಯಾರಿಸಲು ಅವರು ಹಸಿರು ಬಿದಿರಿನ ನವಿರಾದ ಕಾಂಡದ ತುಂಡುಗಳನ್ನು ಬಳಸುತ್ತಾರೆ. ಬಿಲ್‌ರು ಮೊದಲು ಚಾಕು ಮತ್ತು ಬಾಣಗಳ ತುದಿಯಿಂದ ಚಿತ್ರವನ್ನು ಬಿಡಿಸಿಕೊಂಡು ನಂತರ ಬಣ್ಣವನ್ನು ತುಂಬುತ್ತಿದ್ದರು. ಪ್ರಸ್ತುತದಲ್ಲಿ ಮನಸ್ಸಿನಲ್ಲಿಯೇ ರೇಖಾ ಚಿತ್ರವನ್ನು ಹಾಕಿಕೊಂಡು ನೇರವಾಗಿ ಬಣ್ಣಗಳಿಂದಲೇ ಚಿತ್ರಗಳನ್ನು ಬಿಡಿಸುವ ಪದ್ಧತಿಯನ್ನು ಕೆಲವು ಚಿತ್ರಕಾರರು ರೂಢಿಸಿಕೊಂಡಿದ್ದಾರೆ. ಕೈ, ಕಾಲು, ಮುಖ ಇತ್ಯಾದಿಗಳು ವೃತ್ತಿಪರ ಚಿತ್ರಕಲಾವಿದರಂತೆ ಬರಬೇಕೆಂಬ ನಿಯಮವನ್ನು ಹಾಕಿಕೊಳ್ಳುವುದಿಲ್ಲ. ಬಣ್ಣಗಳ ಪುಡಿಗೆ ಹಾಲು, ತುಪ್ಪ ಮತ್ತು ಮಹುವಾ ಮದ್ಯವನ್ನು ಮಿಶ್ರಣ ಮಾಡಿ ವರ್ಣದ್ರವ್ಯಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಆದರೆ ಈಗ ಬಣ್ಣದಂಗಡಿಗಳಲ್ಲಿ ಸಿಗುವ ರಾಸಾಯನಿಕ ಬಣ್ಣಗಳನ್ನೇ ಬಳಸುತ್ತಿದ್ದಾರೆ. ಈ ರೀತಿಯಾದ ಸ್ಥಿತ್ಯಂತರಕ್ಕೆ ಅವರು ಬಂದಿದ್ದಾರೆ. ಅಲ್ಲದೆ ಆಧುನಿಕ ಬ್ರಷ್‌ಗಳನ್ನು ಸಹ ಬಳಸುತ್ತಿದ್ದಾರೆ.

ವರ್ಣಚಿತ್ರಕ್ಕಾಗಿ ವಿಭಿನ್ನವಾದ ಸರಣಿಯ ಕುಂಚಗಳಿಗಾಗಿ ವಿವಿಧ ದಪ್ಪವಾಗಿರುವ ಹಸಿರು ಬಿದಿರಿನ ಕಾಂಡಗಳಿಂದ ಕೆಲವು ತುಂಡುಗಳನ್ನು ಮಾಡಿಕೊಳ್ಳುತ್ತಾರೆ. ನಂತರ ವಿವಿಧ ಆಕಾರದ ಬಿದಿರಿನ ತುಂಡುಗಳ ತುದಿಗೆ ಸಣ್ಣ ಸುತ್ತಿಗೆಯಿಂದ ಹೊಡೆಯಲಾಗುತ್ತಿತ್ತು. ಈ ಸುತ್ತಿಗೆಯ ಏಟಿನಿಂದಾಗಿ ಹಸಿರು ಕಾಂಡದ ತೊಗಟೆಯ ಕೊನೆಯಲ್ಲಿ ಮೃದುವಾದ ಫೈಬರಗಳ ರೀತಿಯಲ್ಲಿ ಅರ್ಧ ಇಂಚಿನ ಉದ್ದದ ತುದಿಗಳು ಹೊಮ್ಮುತ್ತವೆ. ಇದನ್ನೇ ಅವರು ಕುಂಚಗಳಾಗಿ ಬಳಕೆ ಮಾಡಿಕೊಳ್ಳುತ್ತಾರೆ. ಕೆಲವು ಕಡೆ ಕಡ್ಡಿಗೆ ಹತ್ತಿಯನ್ನು ಸುತ್ತಿ ಬಣ್ಣ ಲೇಪಿಸಲು ಬಳಸುವ ಪದ್ಧತಿಯಿದೆ.

ಕೆಂಪು, ಹಸಿರು, ನೀಲಿ, ಹಳದಿ ಮತ್ತು ಕಿತ್ತಳೆ ಬಣ್ಣಗಳನ್ನು ಬಹುಮುಖ್ಯವಾಗಿ ಅವರು ತಮ್ಮ ಚಿತ್ರಗಳಲ್ಲಿ ಬಳಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಆಕ್ಸೈಡ ಬಣ್ಣಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಮಾರುಕಟ್ಟೆಯಲ್ಲಿ ಸಿಗುವ ಬಣ್ಣದ ಪುಡಿಗಳನ್ನು ಕೊಂಡುತಂದು ಅದಕ್ಕೆ

ಹಾಲು ಮತ್ತು ಮದ್ಯವನ್ನು ಮಿಶ್ರಣಮಾಡಿ ವರ್ಣದ್ರವ್ಯವನ್ನು ಮಾಡಿಕೊಳ್ಳುತ್ತಾರೆ. ಬಣ್ಣವನ್ನು ಸಂಗ್ರಹಿಸಿಕೊಳ್ಳಲು ಹಸಿರು ಎಲೆಗಳಿಂದ ಜೊನ್ನೆಯನ್ನು ತಯಾರಿಸುತ್ತಿದ್ದರು. ಮಣ್ಣಿನ ಲೋಟಗಳು ಮತ್ತು ಚೀನಾ ಬಟ್ಟಲುಗಳು ಎಲೆಯ ಲೋಟಗಳ ಜಾಗದಲ್ಲಿ ಈಗ ಬಂದಿವೆ.

ರಾಥವಾ ಬುಡಕಟ್ಟಿನಲ್ಲಿ ಪಿಥೋರಾ ಚಿತ್ರಕಲೆಗಾಗಿ ಕೆಲವು ಅಚ್ಚುಗಳನ್ನು ತಯಾರಿಸಿಕೊಂಡು ಇಟ್ಟುಕೊಳ್ಳುತ್ತಾರೆ. ಇವರು ಕ್ಯಾನವಾಸ್‌ನಲ್ಲಿ ಬರೆಯುವಾಗ ನೇರವಾಗಿ ಸ್ವತಃ ತಮ್ಮ ಚಿತ್ರಶೈಲಿಯನ್ನು ಅಭಿವ್ಯಕ್ತಿಸುತ್ತಾರೆ. ಇವರು ಗೋಡೆಯ ಮೇಲೆ ಬರೆಯುವಾಗ ಮರದ ಕೊರೆಯಚ್ಚುಗಳನ್ನು ಬಳಸುತ್ತಿದ್ದೆವೆಂದು ಕೆಲವರು ಹೇಳುತ್ತಾರೆ. ಆ ಚಿತ್ರಗಳನ್ನು ಗಮನಿಸಿದಾಗ ಹಾಗೆ ಅನ್ನಿಸುತ್ತದೆ. ಅವರು ಅಚ್ಚುಗಳನ್ನು ಬಳಸುತ್ತಾರೆ. ಈ ಅಚ್ಚುಗಳನ್ನು ಮರ ಮತ್ತು ಕಬ್ಬಿಣದ ತಗಡಿನ ಸಹಾಯದಿಂದ ತಯಾರಿಸಿಕೊಳ್ಳುತ್ತಿದ್ದರು. ಕುದುರೆ, ಆನೆ ಇತ್ಯಾದಿ ಅಚ್ಚುಗಳು ಕಾಣಸಿಗುತ್ತವೆ. ಬಿಲ್‌ರ ಪೇಮಪತ್ಯಾ ಎಂಬುವನು ಅಚ್ಚುಗಳ ಸಹಾಯವಿಲ್ಲದೇ ಪಿಥೋರಾ ಚಿತ್ರವನ್ನು ಬಿಡಿಸಬಲ್ಲವನಾಗಿದ್ದಾನೆ. ರಾಥವಾದವರಿಗೆ ಅಚ್ಚುಗಳು ಕಡ್ಡಾಯವಾಗಿ ಬೇಕಾಗಿವೆ. ಕೆಲವು ಚಿತ್ರಕಾರರಲ್ಲಿ ಇತ್ತೀಚೆಗೆ ಅಚ್ಚುಗಳ ಬಳಕೆ ಇಲ್ಲವೆನ್ನುವಷ್ಟರ ಮಟ್ಟಿಗೆ ಕಡಿಮೆಯಾಗಿದೆ. ಇಂದು ಪಿಥೋರಾ ವ್ಯಾಪಕವಾಗಿ ಹರಡಿದೆ ಮತ್ತು ಅದರ ಪರಿಚಯಿಸುವ ಕೆಲಸವೂ ಭಾರತ ಸರ್ಕಾರದಿಂದ ಆಗುತ್ತಿದೆ.

**೫.೪.೩ ಪಿಥೋರಾ ಚಿತ್ರಕಲೆ: ಆವರಣ ತಯಾರಿ ವಿಧಾನ**

ಗೋಡೆಯು ಪಿಥೋರಾಕ್ಕೆ ಸಿದ್ಧವಾದ ನಂತರದಲ್ಲಿ ಆವರಣ(Border)ವನ್ನು ಹಾಕಿಕೊಳ್ಳುವುದು ಇವರಲ್ಲಿ ಮುಖ್ಯವಾಗುತ್ತದೆ. ಬಡುವಾ ಹೇಳಿದ ಮೇಲೆ ಮುಖ್ಯ ಚಿತ್ರಕಾರನು ಸಹಾಯಕ ಚಿತ್ರಕಾರರಿಂದ ಆವರಣ ನಿರ್ಮಿಸುವ ಕಾರ್ಯಕ್ಕೆ ತೊಡಗುತ್ತಾನೆ. ಪವಿತ್ರ ಆವರಣಕ್ಕಾಗಿ ಪ್ರದೇಶವನ್ನು ಗುರುತಿಸುವ ಮತ್ತು ಗಡಿಗಳನ್ನು ರೂಪಿಸುವ ಜವಾಬ್ದಾರಿಯು ಬಡುವಾನಿಗೆ ಸಂಬಂಧಿಸಿರುತ್ತದೆ. ಅವನ ಆಜ್ಞೆಯಂತೆ ಅನುಭವಿ ಚಿತ್ರಕಾರರು ಆವರಣ ರೂಪಿಸಲು ತೊಡಗುತ್ತಾರೆ. ಗುರುತಿಸಲ್ಪಟ್ಟ ಪ್ರದೇಶವನ್ನು ತಮ್ಮ ತೋಳುಗಳಿಂದ ಅಳೆದು ಲೆಕ್ಕ ಹಾಕಲಾಗುತ್ತದೆ. ಈ ರೀತಿಯ ಅಳತೆಯನ್ನು ಸಾಮಾನ್ಯವಾಗಿ ರಾಥವಾ, ಬಿಲ್, ಬಿಲಾಲ್ ಇತ್ಯಾದಿ ಬುಡಕಟ್ಟುಗಳು ಮಾಡುತ್ತವೆ. ಪಿಥೋರಾ ಚೌಕಟ್ಟನ್ನು ಹತ್ತರಿಂದ ಹದಿನೈದು ಅಡಿ ಇಲ್ಲವೇ ಇದಕ್ಕಿಂತ ದೊಡ್ಡದಾಗಿ ರಚಿಸಿಕೊಳ್ಳುತ್ತಾರೆ. ಚೌಕಟ್ಟು ಸಣ್ಣದಾದ ಗೆರೆಯಿಂದ ಇರದೇ ಅಗಲ ಮತ್ತು ದಪ್ಪವಾಗಿರುತ್ತದೆ. ಕಟ್ಟಿವಾಡ ಮತ್ತು ಸೊಂಡವಾದಲ್ಲಿ ಪಿಥೋರಾ ಚೌಕಟ್ಟು ತೆಳ್ಳಗಿರುತ್ತವೆ.

ಒಂದು ಹತ್ತಿಯ ದಾರದಿಂದ ಸುತ್ತ ಆವರಣ ಹಾಕಿಕೊಳ್ಳಲಾಗುತ್ತದೆ. ಆವರಣದ ಗುರುತು ಕಾಣಲು ಆ ದಾರಕ್ಕೆ ಕೆಂಪು, ನೀಲಿ ಇತ್ಯಾದಿ ಯಾವುದಾದರೊಂದು ಬಣ್ಣವನ್ನು

ಲೇಪಿಸಿಕೊಂಡಿರುತ್ತಾರೆ. ಎರಡು ತುದಿಗಳನ್ನು ಹಿಡಿದು ನಿಂತಿರುವ ಚಿತ್ರಕಾರರು ತಮಗೆ ಬೇಕಾದ ಅಳತೆಯನ್ನು ಮಾಡಿಕೊಂಡು, ನಂತರ ಆ ದಾರವನ್ನು ಬಿಗಿಯಾಗಿ ಎಳೆದು ಗೋಡೆಗೆ ಬಿಡುತ್ತಾರೆ. ಆಗ ಗೋಡೆಯಲ್ಲಿ ಗೆರೆ ಬೀಳುತ್ತದೆ. ಹೀಗೆಯೇ ನಿರ್ದಿಷ್ಟವಾದ ಆವರಣನ್ನು ನಾಲ್ಕು ಭಾಗದಲ್ಲೂ ಗೆರೆ ಎಳೆದುಕೊಂಡು ರಚಿಸಿಕೊಳ್ಳುತ್ತಾರೆ.

ಆಯತಾಕಾರದ ಆವರಣದ ಗಡಿಯು ಗುರುತಿಸಲ್ಪಟ್ಟ ತಕ್ಷಣವೇ, ಮೂರರಿಂದ ನಾಲ್ಕು ಮಂದಿ ಏಕಕಾಲಕ್ಕೆ ಆ ಆವರಣದ ವಿವಿಧ ಸ್ಥಳಗಳಲ್ಲಿ ಚೌಕಟ್ಟನ್ನು ಅಲಂಕರಿಸುತ್ತಾರೆ. ಜ್ಯಾಮಿತಿಯ ರೀತಿಯಲ್ಲಿ ತ್ರಿಭುಜ ಮತ್ತು ವಜ್ರದಂತಹ ಚಿಹ್ನೆಗಳನ್ನು ಆವರಣದ ಸುತ್ತಲೂ ಬಿಡಿಸುತ್ತಾರೆ. ಸಮತಲ ಗಡಿಯ ಮಧ್ಯದಲ್ಲಿ ಅಂತರವನ್ನು ಬಿಡುತ್ತಾರೆ. ಅದನ್ನು ಪಿಥೋರಾ ದ್ವಾರವೆಂದು ಕರೆಯುತ್ತಾರೆ. ಪಿಥೋರಾ ಪ್ರವೇಶವಾಗುವುದು ಇಲ್ಲಿಂದಲೇ ಎಂಬ ನಂಬಿಕೆ ಅವರಿಗಿದೆ.

ಆರಂಭದಲ್ಲಿ ಬರುವ ಹೆಚ್ಚು ಸಂಖ್ಯೆಯ ಚಿತ್ರಗಳನ್ನು ಬರೆಯುವ ಹೆಚ್ಚಿನ ಸ್ಥಳಗಳಲ್ಲಿ ಬರೆಯಲು ಚಾಕು ಮತ್ತು ಬಾಣದ ಚೂಪಾದ ತುದಿಯನ್ನು ಬಳಸುತ್ತಾರೆ. ಚಿತ್ರಕಾರನು ಈ ಉಪಕರಣಗಳನ್ನು ತನ್ನ ಬಲಗೈಯಲ್ಲಿ ಲಂಬವಾಗಿ ಹಿಡಿದು ರಚಿಸಲು ಪ್ರಯತ್ನಿಸುತ್ತಾನೆ. ಗೋಡೆಯ ಅಥವಾ ಗೋಡೆಯ ಸ್ವಾಭಾವಿಕ ಸ್ಥಿತಿಗೆ ಅನುಗುಣವಾಗಿ ಅವನು ಅವಲಂಬಿತನಾಗಿ ಚಿತ್ರ ತೆಗೆಯುತ್ತಾನೆ. ಹುಕ್ಕಾ ಗಣೇಶ, ಸೂರ್ಯ, ಚಂದ್ರ, ಕುದುರೆ, ಆನೆ, ನವಿಲು, ಎತ್ತು, ಕೃಷಿಕ, ಹೊಲ ಇತ್ಯಾದಿಗಳ ಆವರಣದೊಳಗೆ ಚಿತ್ರಗೊಳ್ಳುತ್ತವೆ. ಈ ಕುದುರೆಯ ಚಿತ್ರಗಳನ್ನು ಚಿತ್ರಕಾರನು ನಾಲ್ಕು ಹಂತವಾಗಿ ಬಿಡಿಸುತ್ತಾನೆ. ಈ ಹಂತಗಳು ರಾಥವಾದಲ್ಲಿ ಹೆಚ್ಚಾಗಿದೆ.

೧) ಚಾಕು ಚಿತ್ರ (Knife Drawing)

೨) ವರ್ಣದ್ರವ್ಯ ಚಿತ್ರ (Pigment Drawing)

೩) ಸವಾರನನ್ನು ಚಿತ್ರಿಸುವುದು (Drawing the Rider)

೪) ಬಣ್ಣಗಳನ್ನು ತುಂಬುವುದು (Filling Pigment)

**೧) ಚಾಕು ಚಿತ್ರ**

ಕುದುರೆಯ ಚಿತ್ರವನ್ನು ಬರೆಯುವಾಗ ಚಿತ್ರಕಾರನು ಸಾಮಾನ್ಯವಾಗಿ ಕುದುರೆ ಮುಂಡದ ಮರದ ಕೊರೆಯಚ್ಚು ಬಳಸುತ್ತಾನೆ. ಕುತ್ತಿಗೆ ಭಾಗವನ್ನು ಮತ್ತೊಂದು ಕೊರೆಯಚ್ಚು ಬಳಸಿ ಕುದುರೆಯ ಸಂಪೂರ್ಣ ಚಿತ್ರವನ್ನು ಬಿಡಿಸಲಾಗುತ್ತದೆ. ಈ ತಲೆ ಮತ್ತು ಮುಂಡಕ್ಕೆ ಅಚ್ಚನ್ನು

ಬಳಸದೆ ಸ್ವತಃ ಕೈಯಿಂದ ಹಿಂಗಾಲು ಮತ್ತು ಮುಂಗಾಲುಗಳನ್ನು ಬರೆಯುತ್ತಾರೆ. ಅಲ್ಲದೆ ಕುದುರೆಯ ಇತರ ಭಾಗಗಳನ್ನು ಕ್ರಮಬದ್ಧವಾಗಿ ಕೈಯಿಂದಲೇ ಬಿಡಿಸುತ್ತಾರೆ. ಇದನ್ನು ನೈಫ್ ಡ್ರಾಯಿಂಗ್ ಎಂದು ಕರೆಯುವರು.

**೨) ವರ್ಣದ್ರವ್ಯ ಚಿತ್ರ**

ಚಾಕು ಚಿತ್ರ ಮುಗಿದ ಮೇಲೆ, ಆ ಚಿತ್ರವನ್ನು ಬಿದಿರಿನ ಕುಂಚದ ಸಹಾಯದಿಂದ ನೀಲಿ ಬಣ್ಣದ ದಪ್ಪವಾದ ಹೊರರೇಖೆಯನ್ನು ಎಳೆಯಲಾಗುತ್ತದೆ. ತಲೆಯ ಭಾಗಕ್ಕೆ ಸಂಪೂರ್ಣವಾಗಿ ನೀಲಿ ವರ್ಣದ್ರವ್ಯವನ್ನು ತುಂಬಲಾಗಿರುತ್ತದೆ. ಕುದುರೆಯ ಬೆನ್ನಿನ ಮೇಲೆ ಹಾಕುವ ತಡಿಯನ್ನು ದಪ್ಪದಾದ ಹೊರರೇಖೆಯಿಂದ ಸೂಚಿಸಲಾಗುತ್ತದೆ. ಅದರ ಕುತ್ತಿಗೆಯ ಹೊರರೇಖೆಯು ದಪ್ಪವಾಗಿರುತ್ತದೆ. ಕುದುರೆಯ ದೇಹದ ಮೇಲೆ ಹಲವಾರು ಸಮಾನಾಂತರ ಕರ್ಣೀಯ ಮತ್ತು ಅಡ್ಡ ಕರ್ಣೀಯ ಗೆರೆಗಳು ಸ್ಥಾನ ಪಡೆಯುತ್ತವೆ. ವರ್ಣಗಳನ್ನು ಬಳಸಿ ಕುದುರೆಯ ದೇಹದ ಮೇಲೆ ಪರೀಕ್ಷಕ ಮಾದರಿಯ ವ್ಯಕ್ತಿಯನ್ನು ಕೂರಿಸಲಾಗುತ್ತದೆ.

**೩) ಸವಾರನನ್ನು ಚಿತ್ರಿಸುವುದು**

ಈ ವರ್ಣಚಿತ್ರದಲ್ಲಿ ಪಿಥೋರಾ ಕುದುರೆಯ ಮೇಲೆ ಸವಾರನೊಬ್ಬನು ನಿಂತಿರುವುದು ತೋರಿಸಲಾಗುತ್ತದೆ. ಇದನ್ನು ಕೆಂಪು ವರ್ಣದ್ರವ್ಯದಿಂದ ಚಿತ್ರದ ಹೊರರೇಖೆಯನ್ನು ಹಾಕಿಕೊಳ್ಳುವುದು. ಮೊದಲಿಗೆ ಒಂದು ಕುದುರೆಯಿಂದ ಇನ್ನೊಂದು ಕುದುರೆಯ ನಡುವೆ ಸ್ವಲ್ಪ ಜಾಗವನ್ನು ಖಾಲಿ ಬಿಡುತ್ತಾರೆ. ಅಲ್ಲದೆ ಒಂದರ ಹಿಂದೆ ಇನ್ನೊಂದು ಹಿಂಬಾಲಿಸುವಂತೆ ರಚಿಸುತ್ತಾರೆ. ಈ ರೀತಿಯ ಕುದುರೆಗಳು ಮಾನವಜನ್ಯ ದೇವತೆಯ ಮುಂಡದಂತಿರುತ್ತವೆ. ಆ ಕುದುರೆಯ ಕೆಳಗಿನ ತುದಿಯಲ್ಲಿ ಮರಳುಗಡಿಯಾರವಿರುತ್ತದೆ. ಇನ್ನೊಂದು ನಂತರದ ಒಂದು ಕುದುರೆಯ ಮೇಲೆ ಕುಳಿತ ವ್ಯಕ್ತಿಯ ಎರಡು ಕಾಲುಗಳು ಹೊರ ಹಾಕಿದ ರೀತಿಯಲ್ಲಿ ಕಾಣುತ್ತವೆ. ಕುದುರೆಯ ಬೆನ್ನಿನ ಮೇಲಿನ ಅಂಚು ಮತ್ತು ಕಾಲುಗಳ ಕೆಳತುದಿಯ ನಡುವಿನ ಜಾಗದಲ್ಲಿ ದೇವತೆಯ ಎರಡು ಕಾಲುಗಳು ಹೊರಚಾಚಿರುತ್ತವೆ. ಆ ಕಾಲುಗಳ ಪಾದಕ್ಕೆ ಎರಡು ಬೂಟುಗಳನ್ನು ಅಳವಡಿಸಿರುತ್ತಾರೆ. ನಂತರ ಎಡ ಮತ್ತು ಬಲಗೈಗಳನ್ನು ಚಾಚಿಕೊಂಡಂತೆ ಬಿಡಿಸಲಾಗಿರುತ್ತದೆ. ಕುತ್ತಿಗೆಗೆ ನೇರವಾಗಿ ಜೋಡಿಸಿದಂತಿರುವ ಆ ದೇಹವು ಪಾದದಿಂದ ಹಿಡಿದು ತಲೆಯವರೆಗೂ ನೇರವಾದ ರೇಖೆಯಂತೆ ಕಾಣುತ್ತದೆ. ತಲೆಯನ್ನು ದೇಹಕ್ಕೆ ಜೋಡಿಸಿದಂತೆ ಬಿಡಿಸಿರುವ ಹಾಗೆ ಕಾಣುವಂತೆ ರಚಿಸಿರುತ್ತಾರೆ.

೪) ಬಣ್ಣ ತುಂಬುವುದು

ಮೊದಲಿಗೆ, ಗಾಢವಾದ ಹೊಳಪಿನಿಂದ ಕೂಡಿದ ಬಣ್ಣವನ್ನು ಪರೀಕ್ಷಾರ್ಥ ಮಾದರಿಗಾಗಿ ಕುದುರೆಗೆ ತುಂಬಲಾಗುತ್ತದೆ. ಸವಾರನ ಅಂಗಿಗೂ ಅದೇ ಗಾಢವಾದ ಬಣ್ಣವನ್ನು ತುಂಬಲಾಗುತ್ತದೆ. ಇದಾದ ನಂತರ ಕುದುರೆ ದೇಹದ ಉಳಿದ ಭಾಗಗಳಲ್ಲಿ ಅಪಾರದರ್ಶಕ ಬಣ್ಣಗಳನ್ನು ಭರ್ತಿ ಮಾಡಲಾಗುವುದು. ಅಂತಿಮವಾಗಿ ಕುದುರೆ ಮತ್ತು ಸವಾರನ ಮುಖದ ವೈಶಿಷ್ಟ್ಯಗಳನ್ನು ಬಿಡಿಸಲಾಗುವುದು.

ಈ ಹಿನ್ನೆಲೆಯನ್ನು ಗಮನಿಸಿದಾಗ ರಾಥವಾ ಬುಡಕಟ್ಟು ಜನರು ಕೊರೆಯಚ್ಚುಗಳ ಸಹಾಯದಿಂದ ಕುದುರೆಗಳನ್ನು ಬಿಡಿಸುತ್ತಾರೆಂದು ತಿಳಿಯುತ್ತದೆ. ಆದರೆ ಬಿಲ್‌ರು ಕೊರೆಯಚ್ಚುಗಳನ್ನು ಬಳಸುವುದಿಲ್ಲವೆಂಬುದು ಗಮನಿಸಬೇಕಾದ ವಿಚಾರ. ಹಾಗಾಗಿಯೇ ಮಧ್ಯಪ್ರದೇಶದ ಭೂಪಾಲನಲ್ಲಿರುವ ಮಾನವ ಸಂಗ್ರಹಾಲಯದಲ್ಲಿ ಬಿಲ್ ಚಿತ್ರಕಾರರು ತುಂಬಾ ಸಿಗುತ್ತಾರೆ. ಬಿಲ್‌ರು ಸೃಜನಶೀಲತೆ ಮತ್ತು ಕ್ರಿಯಾಶೀಲತೆಗೆ ಹೆಚ್ಚು ತಮ್ಮನ್ನು ತಾವು ತೊಡಗಿಸಿಕೊಂಡವರಾಗಿದ್ದಾರೆ. ರಾಥವಾ ಪಿಥೋರಾ ಚಿತ್ರಗಳನ್ನು ಗಮನಿಸಿದಾಗ ಅವು ತುಂಬಾ ಸೊಗಸಾಗಿ ಕಾಣಿಸುತ್ತವೆ. ಬಿಲ್‌ರ ಹಾಗೆ ಪಿಥೋರಾ ಚಿತ್ರ ನೈಜತೆಯಾಗಿ ಕಾಣುವುದಿಲ್ಲ. ಈ ಹಿನ್ನೆಲೆಯಲ್ಲಿ ಎರಡು ರೀತಿಯ ಪಿಥೋರಾ ಚಿತ್ರಶೈಲಿಯನ್ನು ಗುರುತಿಸಿಕೊಳ್ಳಬಹುದು.

೧) ಬಿಲ್ ಪಿಥೋರಾ ಚಿತ್ರಶೈಲಿ

೨) ರಾಥವಾ ಪಿಥೋರಾ ಚಿತ್ರಶೈಲಿ

ಈ ಚಿತ್ರಶೈಲಿಗಳು ದೈವ ಸಂತೃಪ್ತಿಯ ಹಿನ್ನೆಲೆಯಲ್ಲಿ ಆಚರಣೆಯ ಭಾಗವಾಗಿವೆ. ಹೆಚ್ಚು ಕಡಿಮೆ ನಂಬಿಕೆಗಳು ಬೇರೆ ಬೇರೆಯಾಗಿದ್ದರೂ ಆಚರಣೆಯು ಒಂದೇ ರೀತಿಯಾಗಿದೆ. ಇದರ ಬಗ್ಗೆ ಇದೇ ಅಧ್ಯಾಯದಲ್ಲಿ ಹಿಂದೆ ಚರ್ಚಿಸಲಾಗಿದೆ. ಆದ್ದರಿಂದ ಈ ಎರಡು ಚಿತ್ರಶೈಲಿಗಳ ಚಿತ್ರಗಳನ್ನು ಪ್ರತ್ಯೇಕವಾಗಿ ವಿಶ್ಲೇಷಣೆ ಮಾಡುವ ಪ್ರಯತ್ನವಿದೆ.

**೫.೫ ಪಿಥೋರಾ: ಚಿತ್ರಗಳ ವಿಶ್ಲೇಷಣೆ**

ಸೃಷ್ಟಿ ಪುರಾಣಗಳಿಗೆ ಸಂಬಂಧಿಸಿದ ವರ್ಣಚಿತ್ರಗಳು, ಮಹಾದೇವತೆಗಳಾದ ಪಿಥೋರಾ ಮತ್ತು ಇಂದ್ರರಾಜ ಮತ್ತು ಪ್ರೇತಗಳಿಗೆ ಸಂಬಂಧಿಸಿದವುಗಳಾಗಿವೆ. ಪೂರ್ವಜರ ಮತ್ತು ಈ ಪ್ರಪಂಚದ ಘಟನೆಗಳನ್ನು ಕುರಿತು ವರಾಂಡದ ಗೋಡೆಗಳ ಮೇಲೆ ಚಿತ್ರಿಸಲಾಗುತ್ತದೆ. ಇದರಲ್ಲಿ ಪಿಥೋರಿಯೊಂದಿಗೆ ಪಿಥೋರಾನ ಮದುವೆಯು ಅವರ ಚಿತ್ರಕಲೆಯ ಪ್ರಮುಖವಾದ ದಂತಕಥೆಯ ಅಂಶಗಳಲ್ಲಿ ಒಂದಾಗಿದೆ. ಇದರಲ್ಲಿ ಮದುವೆಯ ದಿಬ್ಬಣದ ಹಲವಾರು ರೀತಿಯ

ಚಿತ್ರಗಳಿವೆ. ಆ ಚಿತ್ರಗಳಲ್ಲಿ ಕೆಲವು ಪುರಾಣ ಚಿತ್ರಗಳು ಇವೆ. ಸಿತುರಾಣೊ, ರಾಣಿ ಕಾಜೊಲ್, ಪಿಥೋರೊ, ಪಿಥೋರಿ, ವಲನ್, ಇಂದ್ರರಾಜ, ರಾಣಿಕೋಯಲ್ ಇತ್ಯಾದಿ. ಇವರನ್ನೆಲ್ಲ ಗುರುತಿಸುವುದು ಕುದುರೆ ಚಿತ್ರಗಳಿಂದ ಎಂಬುವುದನ್ನು ಗಮನಿಸಬೇಕಾಗುತ್ತದೆ.

ಪಿಥೋರೊ ಮದುವೆಯ ಮೆರವಣಿಗೆಯು ರಾಯಲ್ ವಿಜೃಂಭಣೆಯ ಮೆರವಣಿಗೆಯಂತೆ ಚಿತ್ರದಲ್ಲಿ ಕಾಣುತ್ತದೆ. ಈ ಪಿಥೋರೊವನ್ನು ದಸೆರಾ ಸಂದರ್ಭದಲ್ಲಿ ನೆರವೇರಿಸಲಾಗುತ್ತದೆಂದು ಗೊಡ್ಡಿ ಎಂಬ ಹಳ್ಳಿಯ ಬಡುವಾನೊಬ್ಬನು ಹೇಳುತ್ತಾನೆ. ಅಲ್ಲದೆ ಈ ಚಿತ್ರಗಳಲ್ಲಿ ಕಾಣುವ ಇನ್ನೊಂದು ಅಂಶವನ್ನು ಗಮನಿಸಿಬಹುದು. ಅದು ಏನೆಂದರೆ, ಕುದುರೆಗಳು, ಆನೆಗಳು, ರಥಗಳು, ರಾಯಲ್ ವಸ್ತ್ರಗಳು, ವಿವಿಧ ಆಭರಣಗಳು. ಇವುಗಳೆಲ್ಲ ರಜಪೂತ ದೊರೆಗಳ ವೈಶಿಷ್ಟ್ಯಗಳನ್ನು ವಿವರಿಸುವಂತೆಯೂ ಕಾಣುತ್ತದೆ. ಅವರ ಚಿತ್ರಕಲೆಗೆ ರಜಪೂತರ ಹಬ್ಬವೊಂದರ ಮೆರವಣಿಗೆಯು ಪ್ರಭಾವ ಬೀರಿದೆ. ಅಲ್ಲದೆ ಅವರ ಚಿತ್ರಕಲೆಯ ನಿರೂಪಣೆಯು ಸರಳವಾಗಿದೆ. ಬಣ್ಣಗಳ ಪದ್ಧತಿ ಮತ್ತು ಸಂಯೋಜನೆ ವಿಭಿನ್ನವಾಗಿದೆ.

ಇವತ್ತಿಗೂ ಸಹ ಗುಜರಾತ ಮತ್ತು ಮಧ್ಯಪ್ರದೇಶದ ಗಡಿಯ ಭಾಗಗಳ ಮಧ್ಯದಲ್ಲಿನ ಕೆಲವು ಆಳವಾದ ಪ್ರದೇಶಗಳಿಗೆ ಹೋದರೆ, ಪಿಥೋರಾ ಮತ್ತು ನವ್ಯ ಚಿತ್ರಗಳ ಮಧ್ಯೆ ಹೋಲಿಕೆಯನ್ನು ಕಾಣಬಹುದು. ಈ ಪ್ರದೇಶಗಳಲ್ಲಿ ಮೆರವಣಿಗೆಯ ಚಿತ್ರಗಳ ಗೈರನ್ನು ಕಾಣಬಹುದು. ರಾಥವಾದ ಚಿತ್ರಶೈಲಿಗೆ ಬದಲಾಗಿ, ಇಲ್ಲಿ ಗೋಡೆಯ ಮೇಲೆ ಎಂಟು ಬಿಳಿ ಕುದುರೆಗಳು ಜಾಗವನ್ನು ಪಡೆದಿವೆ. ರಾಥವಾದ ಹಾಗೆ ವರ್ಣರಂಜಿತ ಚಿತ್ರಗಳು ಇಲ್ಲಿ ಕಂಡುಬುರುವುದಿಲ್ಲ. ನಾಲ್ಕು ಕುದುರೆಗಳ ಎರಡು ಗುಂಪು ಮತ್ತು ನಾಲ್ಕು ಬಿಡಿ ಕುದುರೆಗಳು ಸಾಂಪ್ರದಾಯಿಕ ಪಿಥೋರಾದ ಬಿಲ್‌ರಲ್ಲಿ ಕಂಡುಬರುತ್ತವೆ. ಅವರಲ್ಲಿ ಕುದುರೆಗಳು ಪರಸ್ಪರ ಎದುರು ನೋಡುತ್ತಾ ನಿಂತಿರುವಂತೆ ರಚಿಸುತ್ತಾರೆ. ಈ ಚಿತ್ರಗಳಲ್ಲಿ ಮುಖ್ಯವಾದ ಭಾಗವು ಬಿಳಿ ಬಣ್ಣದಿಂದ ಕೂಡಿದ್ದಾಗಿದೆ. ಈ ಚಿತ್ರಗಳು ಪುರಾತನ ಮತ್ತು ಆರಂಭಿಕ ಗುಹೆ ಚಿತ್ರಗಳ ಮಾದರಿಯಲ್ಲಿಯೂ ಕಂಡುಬರುತ್ತವೆ. ರಾಥವಾ ಮತ್ತು ಬಿಲ್‌ರಲ್ಲಿ ಹೀಗೆ ಎರಡು ಬಗೆಯ ಚಿತ್ರಶೈಲಿಗಳು ಗಮನ ಸೆಳೆಯುತ್ತವೆ. ಮೊದಲಿಗೆ ಬಿಲ್‌ರ ಪಿಥೋರಾ ಚಿತ್ರಗಳ ವಿಶ್ಲೇಷಣೆಯ ಕಡೆ ಗಮನಿಸೋಣ.

### ೫.೫.೧ ಬಿಲ್‌ರ ಪಿಥೋರಾ ಚಿತ್ರಗಳ ವಿಶ್ಲೇಷಣೆ

**ಹುಕ್ಕಾ ಗಣೇಶ:** ಪಿಥೋರಾ ಚಿತ್ರರಚನೆಯಲ್ಲಿ ಮೊದಲಿಗೆ ಹುಕ್ಕಾ ಗಣೇಶನನ್ನು ಬಿಡಿಸಲಾಗುತ್ತದೆ. ಹುಕ್ಕಾ ಗಣೇಶನನ್ನು ಪೂಜೆಗೆ ಆಹ್ವಾನ ಮಾಡಿ ಚೌಕಟ್ಟಿನ ಎಡಬದಿಗೆ ಸ್ವಲ್ಪ ಅಂತರದಲ್ಲಿ ರಚಿಸಲಾಗುತ್ತದೆ. ಬಾಬರಾ–ಅಲಿರಾಜಪುರದಲ್ಲಿ ಹುಕ್ಕಾ ಗಣೇಶನನ್ನು ಕಪ್ಪು ಬಣ್ಣದಿಂದ ರಚಿಸುತ್ತಾರೆ. ಗಣೇಶನು ಕೈಯಲ್ಲಿ ಹುಕ್ಕಾ ಹಿಡಿದು ಸೇದುತ್ತಿರುವ ಕಮಾನಿನ ಆಕಾರದಲ್ಲಿ ಕಾಲುಗಳನ್ನು ಮಡಚಿ ನಿಂತಿರುವ ಭಂಗಿಯಲ್ಲಿದ್ದಾನೆ. ಕಟ್ಟಿವಾಡದಲ್ಲಿ ಇದನ್ನು ಬಲಭಾಗದಲ್ಲಿ ನೀಲಿ ಕುದುರೆಯ ಮೇಲೆ ನೀಲಿ ಬಟ್ಟೆ ಧರಿಸಿ ಸವಾರಿ ಮಾಡುತ್ತಿರುವ ಭಂಗಿಯಲ್ಲಿ ಚಿತ್ರಿಸಿದ್ದಾರೆ. ಅದರಲ್ಲಿ ಕೂಡ ಹುಕ್ಕಾ ಕೈಯಲ್ಲಿರುತ್ತದೆ. ಇಲ್ಲಿಯ ಗಣೇಶ ಆನೆಯ ಮುಖದವನಲ್ಲ. ಕುದುರೆಯ ಮುಖದವನಾಗಿದ್ದಾನೆ. ಹಿಂದೂ ಪುರಾಣದಲ್ಲಿ ಗಣೇಶ ಪ್ರಥಮ ಪೂಜಿತ ದೇವನಾಗಿರುತ್ತಾನೆ. ಆದರೆ ಇಲ್ಲಿ ಹುಕ್ಕಾ ಸೇದುತ್ತಿರುವ ಗಣೇಶನು ಸಾಮಾನ್ಯ ವ್ಯಕ್ತಿಯಾಗಿ ಕಾಣುತ್ತಾನೆ. ಬಿಲ್‌ರ ಮನಸ್ಸಿನಲ್ಲಿ ಶಿವ, ಗೌರಿ ಮತ್ತು ಗಣೇಶರ ಅವತಾರಗಳು ಶುಭ ದೇವತೆಗಳಂತಿವೆ. ಪಿಥೋರಾ ಪುರಾಣ ಕಥೆಯಲ್ಲಿ ಗಣೇಶನ ಜನ್ಮದ ಕಥೆ ಶಿವ–ಗೌರಿಯರ ಆಸುಪಾಸಿನಲ್ಲಿ ಸುತ್ತುತ್ತದೆ. ಹುಕ್ಕಾ ಸೇದುವುದು ಬಿಲ್‌ರ ಒಂದು ಹವ್ಯಾಸವಾಗಿದೆ. ಆದುದರಿಂದ ಗಣೇಶನ ಜೊತೆಗೆ ಹುಕ್ಕಾವನ್ನು ಸೇರಿಸಿ ತಮ್ಮ ಹವ್ಯಾಸವನ್ನು ಅಭಿವ್ಯಕ್ತಿಸಿದ್ದಾರೆ.



**ಕಾಟಿಯಾ ಗೋಡಾ:** ಚೌಕಟ್ಟಿನಿಂದ ಹೊರಗಿರುವ ಚಿತ್ರವಿದು. ಕುದುರೆಯ ಬೆನ್ನಿನ ಮೇಲೆ ಜೀನು ಕಟ್ಟಿ ಅದರ ಮೇಲೆ ಸವಾರನನ್ನು ಕೂರಿಸಲಾಗುತ್ತದೆ. ಇದಕ್ಕೆ ಕಾಟಿಯಾ ಗೋಡಾವೆಂದು ಕರೆಯುತ್ತಾರೆ. ಕಾಟಿಯಾ ಕುವರ ದೇವ ಎಂಬ ಹೆಸರು ಸಹ ಇದೆ. ಸವಾರನ ಒಂದು ಕೈಯಲ್ಲಿ ಲಗಾಮು ಇನ್ನೊಂದು ಕೈಯಲ್ಲಿ ಲಾಠಿ ಇರುತ್ತದೆ. ಕುದುರೆಯ ಮುಖ ಬಲಗಡೆಗೆ ತಿರುಗಿರುತ್ತದೆ. ಈ ಕುದುರೆಯ ಮುಂದೆ ನಾಲ್ಕೈದು ಜನ ಬಂದೂಕುಧಾರಿಗಳು ಹೋಗುವ ದೃಶ್ಯವಿರುತ್ತದೆ. ಈ ಕುದುರೆಯು ಪಿಥೋರಾ ಪೂಜೆಗೆ ದೇವಾನುದೇವತೆಗಳಿಗೆ ಆಮಂತ್ರಣವನ್ನು ಕೊಡಲು ಹೊರಟಿರುವಂತೆ ಚಿತ್ರರಚನೆಯಾಗಿರುತ್ತದೆ. ಇದನ್ನು ಕಪ್ಪು ಬಣ್ಣದಿಂದ ರಚಿಸಿರುವುದು ಅಲ್ಲಿ ಕಂಡುಬರುತ್ತದೆ. ಇದನ್ನು ಚೌಕಟ್ಟಿನ ಎಡಗಡೆಯ ಭಾಗದ ಮೂಲೆಯ ಹೊರಗೆ ಅಥವಾ ಒಳಗೆ ರಚಿಸಲಾಗುತ್ತದೆ. ಇದರಲ್ಲಿ ಊರಿನ ಸಂಬಂಧಿಗಳು, ಪರಿಚಿತರು, ಚಿಕ್ಕವರು, ದೊಡ್ಡವರು



ಹೀಗೆ ಹಲವಾರು ಜನ ಸೇರಿರುತ್ತಾರೆ. ಅಲ್ಲಿ ಊರಿನ ಪ್ರಮುಖರ ಮನೆಯಲ್ಲಿ ಪಿಥೋರಾ ರಚಿಸುತ್ತಾರೆ. ಎಲ್ಲರೂ ಬರಬೇಕೆಂದು ಘೋಷಣೆ ಮಾಡುತ್ತಾರೆ. ಕಟ್ಟಿವಾಡದಲ್ಲಿ ಪಿಥೋರಾ ಮನೆಯ ಹೊರಗೆ ಬಹಳಷ್ಟು ಕಾಟಿಯಾ ಗೋಡಾ ಮತ್ತು ಸವಾರರನ್ನು ಚಿತ್ರಿಸಲಾಗುತ್ತದೆ. ಕಾಟಿಯಾ ಗೋಡಾ ಒಂದು ಆಮಂತ್ರಣ ಕುದುರೆಯಾಗಿದೆ. ಇದನ್ನು ರಚಿಸಿದ ನಂತರ ಪಿಥೋರಾ ಚಿತ್ರಕಾರ ನಿರಾಳವಾಗುತ್ತಾನೆ. ಏಕೆಂದರೆ ಕುದುರೆ ಆಮಂತ್ರಣಕ್ಕೆ ಹೊರಟಿತೆಂದು, ಎಲ್ಲ ದೇವ-ದೇವತೆಗಳು ಮತ್ತು ಜನರು ಬರುತ್ತಾರೆಂದು ಅವನು ತಿಳಿಯುತ್ತಾನೆ.[೪]

**ಪಿಥೋರಾ ಬಾಪಜಿ:** ಪಿಥೋರಾ ಚಿತ್ರ ಚೌಕಟ್ಟಿನಲ್ಲಿ ಪೂಜೆ ಸಲ್ಲುವುದು ಮುಖ್ಯ ದೇವನಾಗಿರುವ ಪಿಥೋರಾ ಬಾಪಜಿಗೆ. ಎರಡು ಬಿಳಿಯ ಕುದುರೆಗಳು ಎದುರು-ಬದುರಾಗಿ ನಿಂತಿರುವ ಹಾಗೂ ಅವುಗಳನ್ನು ಹಿಡಿದು ನಿಂತಿರುವ ವ್ಯಕ್ತಿಯನ್ನು ಒಟ್ಟಾರೆಯಾಗಿ ಪಿಥೋರಾ ಬಾಪಜಿ ಎಂದು ಗುರುತಿಸಲಾಗುತ್ತದೆ. ಇದರ ರಚನೆ ಮಲಗಿರುವ ಗುಣಿತಾಕಾರದ ಗೆರೆಗಳಿಂದ ಆಗುತ್ತದೆ. ಚಿತ್ರಕಾರ ಮೊದಲು ಕುಂಚದಿಂದ ಗುಣಾಕಾರ ಚಿಹ್ನೆಯ ಗೆರೆಯನ್ನು ಎಳೆಯುತ್ತಾನೆ. ನಂತರ ಅದನ್ನು ಬಿಳಿಯ ಬಣ್ಣದಿಂದ ತುಂಬಿ ಉದ್ದವಾದ ನಾಲ್ಕು ಕಾಲುಗಳನ್ನು ಬಿಡಿಸುತ್ತಾನೆ.



ಕೆಳಗೆ ಗೋಲಾಕಾರದ ಲಾಳದ ಪ್ರತೀಕ ಮಾಡಲಾಗುತ್ತದೆ. ಕುದುರೆಗಳ ಬಾಹ್ಯ ರೇಖೆಯನ್ನು ಹಸಿರು ಇಲ್ಲವೇ ನೀಲಿ ಬಣ್ಣದಲ್ಲಿ ರಚಿಸಲಾಗುತ್ತದೆ. ಮಧ್ಯದಲ್ಲಿ ಲಗಾಮು ಹಿಡಿದುಕೊಂಡಿರುವ ವ್ಯಕ್ತಿಯನ್ನು ಬಿಡಿಸಲಾಗಿದೆ. ಅವನಿಗೆ ದೊಡ್ಡದಾದ ಪೇಠಾ ಇದ್ದು, ಕಾಲಲ್ಲಿ ಬೂಟು ಹಾಕಿರುತ್ತಾರೆ. ಕೆಲವು ಸ್ಥಳಗಳಲ್ಲಿ ಇದನ್ನು ಕಪ್ಪು ಬಣ್ಣದಿಂದಲೂ ಬಿಡಿಸುತ್ತಾರೆ. ಎರಡು ಕುದುರೆಯ ಬೆನ್ನ ಮೇಲೆ ಜೀನು ಹಾಕಲಾಗಿರುತ್ತದೆ. ಆದರೆ ಸವಾರನನ್ನು ಬಿಡಿಸುವುದಿಲ್ಲ. ಶುಭ್ರವಾದ ವರ್ಣದಿಂದ ಅಲಂಕರಿಸಲಾಗುತ್ತದೆ. ಕುದುರೆಯ ಸುತ್ತಲೂ ಬಿಳಿ, ಹಳದಿ, ಕಪ್ಪು ಇಲ್ಲವೆಂದರೆ ಬೇರೆ ಯಾವುದಾದರೂ ಬಣ್ಣಗಳಿಂದ ಚುಕ್ಕಿಗಳನ್ನಿಟ್ಟು ಅಲಂಕರಿಸುತ್ತಾರೆ. ಇದರಿಂದ ಕುದುರೆಗಳ ಶೋಭೆ ಹೆಚ್ಚಾಗುತ್ತದೆ.

ಪಿಥೋರಾ ದೇವತೆಯ ತಲೆಯ ಹಿಂದೆ ಪ್ರಕಾಶಮಾನವಾದ ಚಕ್ರವಿರುತ್ತದೆ. ದೇವಾನುದೇವತೆಗಳ ತಲೆಯ ಹಿಂದೆ ಈ ರೀತಿಯಾದ ಚಕ್ರಗಳನ್ನು ಕಾಣಬಹುದು. ಅದನ್ನು ಅವರು ತಮ್ಮ ಚಿತ್ರಗಳಲ್ಲಿ ಪ್ರಭಾವಿಸಿಕೊಂಡಿದ್ದಾರೆ. ಅವರ ಚಿತ್ರಗಳಲ್ಲಿ ಸಾಮಾನ್ಯವಾದ ಕುದುರೆಗಳಿಗೆ ಈ ರೀತಿಯಾದ ಪ್ರಕಾಶಮಾನವಾದ ಚಿತ್ರಗಳನ್ನು ಬರೆಯುವುದಿಲ್ಲ. ಆ ದೇವತೆಯ ಅಸಾಧಾರಣ ಪ್ರಭಾವವನ್ನು ತೋರಿಸಲು ಈ ರೀತಿ ಮಾಡುತ್ತಾರೆ. 'ಪಿಥೋರಾ ಬಾಪಜಿ' ಕುದುರೆಯು ತನ್ನಲ್ಲಿಯೇ ಒಂದು ಲೌಖಿಕ ಮತ್ತು ಅಸಾಧಾರಣತೆಯನ್ನು ತೋರಿಸುತ್ತದೆ. ಈ ಕುದುರೆಯೇ 'ಪಿಥೋರಾ ದೇವ'ನ ಪ್ರತಿನಿಧಿತ್ವವನ್ನು ಮಾಡುತ್ತದೆ. ಅವನ ಉದಾತ್ತ ಗುಣಗಳ ಅನುಸಾರ ಆ ಚಿತ್ರವನ್ನು ಮಾಡುತ್ತಾರೆ. ಈ ಬಾಪಜಿಯ ಕುದುರೆಯನ್ನು ರಚಿಸಿದ ನಂತರ ಚಿತ್ರಕಾರ ಮನೆಯ ಮುಖ್ಯಸ್ಥನೊಂದಿಗೆ ಮದ್ಯದ ನೈವೇದ್ಯವನ್ನು ಮಾಡಿ 'ಪಿಥೋರಾ ದೇವ' ನ ಆಹ್ವಾನವನ್ನು ಮಾಡಲಾಗುತ್ತದೆ. ನಂತರದಲ್ಲಿ ತಮ್ಮ ರಕ್ಷಣೆಗೆ ಪ್ರಾರ್ಥನೆ ಮಾಡಲಾಗುತ್ತದೆ. ಈ ಕುದುರೆಯ ಕಣ್ಣುಗಳನ್ನು ಕೊನೆಗೆ ಚಿತ್ರಿಸಲಾಗುತ್ತದೆ. ಏಕೆಂದರೆ ಕಣ್ಣನ್ನು ಬಿಡಿಸಿದ ತಕ್ಷಣವೇ ಪ್ರಾಣಪ್ರತಿಷ್ಠಾಪನೆ ಆಗುತ್ತದೆಂದು ಅವರು ನಂಬುತ್ತಾರೆ.[೫]

ಪಿಥೋರಾ ಬಾಪಜಿ ಮತ್ತು ಪಿಥೋರಾ ದೇವ ಎಂಬ ಎರಡು ಜೋಡಿ ಕುದುರೆಗಳು ಮತ್ತು ಆ ಕುದುರೆಗಳ ಲಗಾಮು ಹಿಡಿದಿರುವ ವ್ಯಕ್ತಿಗಳು ಒಟ್ಟಾಗಿರುವ ಚಿತ್ರಗಳೆ ಪಿಥೋರಾ. ಅವರನ್ನು ಪೂಜಿಸಿದರೆ ತಮ್ಮ ಕುಟುಂಬ ಸಮೃದ್ಧವಾಗಿ ಬೆಳವಣಿಗೆ ಹೊಂದುವುದೆಂಬ ವಾಡಿಕೆ ಬಿಲ್‌ರಿಗೆ ಇದೆ. ಆದುದರಿಂದಲೇ ತಲೆತಲಾಂತರದಿಂದ ಇದನ್ನು ಆಚರಿಸಿಕೊಂಡು ಬರುತ್ತಿದ್ದಾರೆ.

**ಪಿಥೋರಾ ಬಾಬಾ:** ಪಿಥೋರಾ ಬಾಪಜಿಯ ಕುದುರೆಯ ಕೆಳಗೆ ಬಿಳಿಯ ಬಣ್ಣದಿಂದ ಅದನ್ನು ರಚಿಸಲಾಗುತ್ತದೆ. ಅದನ್ನು 'ದೇಶಿ ಬಾಬಾ' ಎಂತಲೂ ಕರೆಯುತ್ತಾರೆ. ದೇಶಿ ಬಾಬಾ ಗ್ರಾಮದ ಧಣಿಯ (ಗ್ರಾಮ ಮುಖ್ಯಸ್ಥ) ನ ದೇವತೆಯಾಗಿದೆ. ಆದುದರಿಂದಲೇ ಗ್ರಾಮದ ರಕ್ಷಣೆಯ ಭಾರವು ಅದರ ಮೇಲಿರುತ್ತದೆ. ಆದ್ದರಿಂದಲೇ ಅವನ ಎರಡು ಕುದುರೆಗಳನ್ನು

ಪಿಥೋರಾ ಬಾಪಜಿಯ ಕೆಳಗೆ ರಚಿಸಿ ವಿಶೇಷ ಸನ್ಮಾನಗಳನ್ನು ಕೊಡಲಾಗುತ್ತದೆ. ಪಿಥೋರಾ ಮನೆಯ ರಕ್ಷಕನಾಗಿದ್ದರೆ, ಗ್ರಾಮ ಧಣಿ ಊರಿನ ರಕ್ಷಕನಾಗಿರುತ್ತಾನೆ. ಗ್ರಾಮಧಣಿಯ ಕುದುರೆಗಳ ಲಗಾಮನ್ನು ಕೂಡ ರೈತವ್ಯಕ್ತಿ ಹಿಡಿದುಕೊಂಡಿರುತ್ತಾನೆ. ಪಿಥೋರಾ ಕುದುರೆಯ ಕೊರಳಲ್ಲಿ ಗೆಜ್ಜೆಯನ್ನು ಅಥವಾ ಗಂಟೆಯನ್ನು ಹಾಕಲಾಗುತ್ತದೆ. ಪಿಥೋರಾ ಭೂಮಿ ಮತ್ತು ಆಕಾಶಗಳೆರಡರ ದೇವತೆಯಾಗಿದೆ.

**ರಾಣಿ ಕಾಜೊಲ್:** ರಾಣಿ ಕಾಜೊಲ್‌ಳ ಚಿತ್ರವನ್ನು ಕೇಸರಿ ಬಣ್ಣದಿಂದ ಚಿತ್ರಿಸುತ್ತಾರೆ. ಈ ಕುದುರೆಯ ಜೊತೆಗೆ ಒಂದು ಮರಿ ಕುದುರೆಯನ್ನು ಬಿಡಿಸಲಾಗುತ್ತದೆ. ಈ ಮರಿಕುದುರೆಯು ಕೇಸರಿ ಬಣ್ಣದ್ದಾಗಿರುತ್ತದೆ. ಪಿಥೋರಾದಲ್ಲಿ ಕೇಸರಿ ಬಣ್ಣ ಎಲ್ಲಕ್ಕಿಂತ ಹೆಚ್ಚು ಆಕರ್ಷಣೆಯಾಗಿರುತ್ತದೆ.



ರಾಣಿ ಕಾಜೊಲ್ ಕುದುರೆಯು ಮಾತೃ ಶಕ್ತಿಯನ್ನು ಪ್ರತಿನಿಧಿಸುತ್ತದೆ. ಬಿಲ್ ಪುರಾಣ ಕಲ್ಪನೆಯ ಪ್ರಕಾರ ಪಿಥೋರಾನ ಸಾಕು ತಾಯಿಯಾಗಿದ್ದಾಳೆಂಬ ಅಭಿಪ್ರಾಯವೂ ಇದೆ.

**ಹಾಥ್ ರಾಜ ಕುವರ:** ಇವನು ಅರಣ್ಯ ದೇವನಾಗಿರುತ್ತಾನೆ. ಬುಡಕಟ್ಟು ಜನರು ಮರ-ಗಿಡ, ನದಿ-ಬೆಟ್ಟ, ಅರಣ್ಯ ಮುಂತಾದವುಗಳಲ್ಲಿ ತಮ್ಮ ಇಷ್ಟದೇವ-ದೇವತೆಗಳು ವಾಸಿಸುತ್ತಾರೆಂಬ ನಂಬಿಕೆಯನ್ನು ಹೊಂದಿದ್ದಾರೆ. ಇಂತಹ ಅರಣ್ಯದಲ್ಲಿ ಅವರ ದೇವತೆ ವಾಸವಾಗಿರುತ್ತಾನೆಂದು, ಅವನು ಅರಣ್ಯವನ್ನು ರಕ್ಷಣೆ ಮಾಡುತ್ತಾನೆಂದು ಆ ಬುಡಕಟ್ಟು ಜನರು ನಂಬಿದ್ದಾರೆ. ಆದುದರಿಂದ ಪಿಥೋರಾದಲ್ಲಿ ಹಾಥ್ ರಾಜ ಕುವರನನ್ನು ಸೇರಿಸಿಕೊಂಡಿರುತ್ತಾರೆ.

**ಬಾರಹ ಮಾತ್ಯ:** ಅಂದರೆ ಹನ್ನೆರಡು ಮುಖತಲೆಯನ್ನು ಹೊಂದಿದ ಒಬ್ಬ ವ್ಯಕ್ತಿಯಾಗಿದ್ದಾನೆ. ಪಿಥೋರಾದ ಬಲಬದಿಯ ಮೂಲೆಯಲ್ಲಿ ಪ್ರಾಯಶಃ ಅವನಿಗೆ ಸ್ಥಳಾವಕಾಶವಿರುತ್ತದೆ. ಒಮ್ಮೊಮ್ಮೆ ಇದನ್ನು ಪಿಥೋರಾ ಮನೆಯ ಹೊರಗೆ ಎಡಬದಿಯ ಕೆಳಗೆ ಕೂಡ ಚಿತ್ರಿಸುವುದುಂಟು. ಇದರ ವಿಶಾಲವಾದ ಆಕೃತಿಯನ್ನು ಮಾಡಲು ಚಿತ್ರಕಾರರು ಪ್ರಯತ್ನಿಸುತ್ತಾರೆ. ಅವನಿಗೆ ಹನ್ನೆರಡು ತಲೆಗಳಿದ್ದು, ಆ ವ್ಯಕ್ತಿಯನ್ನು ನಿಶ್ಚಿತ ರೂಪದಲ್ಲಿ ದೊಡ್ಡದಾಗಿ ಕಾಣುವಂತೆ ಬಿಡಿಸಲಾಗುತ್ತದೆ. ಚಿತ್ರಕಾರನು ಈ ಪಿಥೋರಾದಲ್ಲಿ ಇದನ್ನು ಆಕರ್ಷಕವಾಗಿ ಕಾಣಿಸಲು ಪ್ರಯತ್ನ ಮಾಡುತ್ತಾನೆ.

ಅಗಲವಾದ ಭುಜದ ಮೇಲೆ ತೆಳುವಾದ ಗೆರೆಗಳಿಂದ ಹನ್ನೆರಡು ತಲೆಗಳನ್ನು ಮಾಡುತ್ತಾನೆ. ಈ ಚಿತ್ರವನ್ನು ನಿಂತಿರುವ ಭಂಗಿಯಲ್ಲಿ ಬಿಡಿಸಲಾಗಿರುತ್ತದೆ. ಅವನಿಗಿರುವ ಎರಡೂ ಕೈಗಳು ಮಡಚಿಕೊಂಡಂತಿರುತ್ತವೆ. ಅವನ ಕೈಯಲ್ಲಿ ಸರ್ಪ ಅಥವಾ ಕೋಲು ಕೊಟ್ಟಿರುತ್ತಾರೆ. ಒಮ್ಮೊಮ್ಮೆ ಕೈಗಳು ಜೋತು ಬಿದ್ದಿರುತ್ತವೆ. ಇದನ್ನು ಪ್ರಾಯಶಃ ಬಿಳಿ ಬಣ್ಣದಿಂದ ಮಾಡಲಾಗುತ್ತದೆ. ಬಿಲ್‌ರ ಇತಿಹಾಸದಲ್ಲಿ ಅಥವಾ ಪುರಾಣದಲ್ಲಿ ಇಂತಹ ಮನುಷ್ಯನ ಇರುವಿಕೆಯ ಬಗ್ಗೆ ದಾಖಲೆ ಸಿಗುವುದಿಲ್ಲ. ಅವನಿಗಿರುವ ಹನ್ನೆರಡು ತಲೆಗಳ ಬಗ್ಗೆ ಏನನ್ನೂ ಬಿಲ್‌ರು ಹೇಳುವುದಿಲ್ಲ. ಅವರು ಹತ್ತು ತಲೆಯುಳ್ಳ ರಾವಣನ ಹೆಸರನ್ನು ಇದರೊಟ್ಟಿಗೆ ಜೋಡಿಸಿ ಹೇಳುತ್ತಾರೆ. ಹಿಂದೂ ಪುರಾಣದಲ್ಲಿ ರಾವಣನಿಗೆ ಹತ್ತು ತಲೆ ಹಾಗೂ ಇಪ್ಪತ್ತು ಕೈಗಳಿದ್ದವು. ಇದೇ ಕಾರಣಕ್ಕಾಗಿಯೇ ಬಿಲ್‌ರು ಬಾರಹ ಮಾತ್ಯನನ್ನು ರಾವಣನೆಂದು ಕರೆಯುತ್ತಾರೆ. ಆದರೆ ಬಾರಹ ಮಾತ್ಯ ಯಾವುದೋ ಪುರಾಣದ ಪುರುಷನಿರಬೇಕು. ಅವನ ಸೊಂಟದಲ್ಲಿ ಬೆಲ್ಟ್(ಸೊಂಟದ ಪಟ್ಟಿ) ಮತ್ತು ಕಾಲುಗಳಲ್ಲಿ ಬೂಟುಗಳಿರುವುದನ್ನು ಗಮನಿಸಿದರೆ ರಾವಣನಿಗಿಂತ ಭಿನ್ನ ಕಲ್ಪನೆಯ ನೆಲೆಯಿಂದ ಈ ರೀತಿಯಾದ ವ್ಯಕ್ತಿ ಚಿತ್ರಣವೊಂದನ್ನು ಬಿಲ್‌ರು ಮಾಡಿರಲು ಸಾಧ್ಯವಿದೆ.

**ಮೇಘನಿ ಗೋಡಾ:** ಈ ಕುದುರೆಯ ಚಿತ್ರಣದ ಸ್ವರೂಪವು ಉಳಿದ ಕುದುರೆಗಳಿಗಿಂತ ಭಿನ್ನವಾಗಿದೆ ಮತ್ತು ಅದ್ಭುತವಾಗಿದೆ. ಮೇಘನಿ ಕುದುರೆಯು ಒಂದೇ ದೇಹದಲ್ಲಿ ಎರಡು ಮುಖಗಳನ್ನು ಹೊಂದಿದೆ. ಈ ಕುದುರೆಯ ಚಿತ್ರವನ್ನು ಬಿಳಿಯ ಬಣ್ಣದಿಂದ ರಚಿಸಲ್ಪಟ್ಟಿರುತ್ತಾರೆ. ಒಂದು ಮುಖವನ್ನು ಈ ಕುದುರೆಯು ತಿನ್ನಲು ಬಳಸಿದರೆ, ಇನ್ನೊಂದು ಮುಖದಿಂದ ಮೇಘರಾಜನ ಜೊತೆಗೆ ಮಾತನಾಡುತ್ತದೆ ಎಂಬ ನಂಬಿಕೆಯ ಮೇಲೆ ರಚಿಸುತ್ತಾರೆ. ಇದು ಮೇಘರಾಜನ ಕಡೆಗೆ ನೋಡುತ್ತಾ ಅದರ



ಇರುವಿಕೆಯನ್ನು ಸಂಗ್ರಹಿಸುತ್ತದೆ. ಇದರ ನಾಲ್ಕು ಕಡೆಗೆ ಕೇಸರಿ ಗೆರೆಗಳನ್ನು ಹಾಕಲಾಗುತ್ತದೆ. ಅದರ ಬೆನ್ನ ಮೇಲೆ ಜೀನು ಹಾಕಿರುವುದಿಲ್ಲ. ಇದರಿಂದ ಮೇಘನಿ ಕುದುರೆ ಆಕಾಶದಲ್ಲಿ ಸ್ವತಂತ್ರವಾಗಿ ವಿಹರಿಸುತ್ತದೆಂಬ ನಂಬಿಕೆ ಬಿಲ್‌ರಿಗೆ ಇದೆ. ಇದು ಮಳೆ ತರಿಸುವ ಕುದುರೆಯಾಗಿರುವುದರಿಂದ ಪಿಥೋರಾದಲ್ಲಿ ಇದನ್ನು ಪ್ರತಿಷ್ಠಾಪಿಸಲಾಗುತ್ತದೆ.

**ಸೂರ್ಯ-ಚಂದ್ರ:** ಪಿಥೋರಾದ ಮನೆಯ ದ್ವಾರದ ಮೇಲಿನ ಭಾಗದಲ್ಲಿ ಸೂರ್ಯ-ಚಂದ್ರ, ನಕ್ಷತ್ರಗಳನ್ನು ಬಿಡಿಸುತ್ತಾರೆ. ಸೂರ್ಯನನ್ನು ಗೋಲಾಕಾರದಲ್ಲಿ ಬಿಡಿಸಿ ಅದರ ಸುತ್ತಲೂ ಕಿರಣಗಳನ್ನು ರಚಿಸುತ್ತಾರೆ. ಇದು ಪ್ರಕಾಶಮಾನವಾದ ಸಂಕೇತಕ್ಕೆ ಸಾಕ್ಷಿಯಾಗಿದೆ. ಅರ್ಧ ಚಂದ್ರನನ್ನು ರಚಿಸಲಾಗುತ್ತದೆ. ಸೂರ್ಯ-ಚಂದ್ರರ ಆಸುಪಾಸಿನಲ್ಲಿ ಚುಕ್ಕಿಗಳಿಂದ ನಕ್ಷತ್ರಗಳನ್ನು ಚಿತ್ರಿಸಲಾಗುತ್ತದೆ. ಸೂರ್ಯ-ಚಂದ್ರರು ಸೃಷ್ಟಿಯ ಎರಡು ಕಣ್ಣುಗಳಿದ್ದಂತೆ. ಈ ಕಣ್ಣುಗಳಿಂದಲೇ ಹಗಲು-ರಾತ್ರಿ ಪ್ರಕ್ರಿಯೆ ನಡೆಯುತ್ತದೆ. ಪಿಥೋರಾದಲ್ಲಿ ಸೂರ್ಯ-ಚಂದ್ರ ಬೆಳಕನ್ನು ನೀಡುವ ದೇವತೆಗಳಾಗಿದ್ದಾರೆ.



ಬಿಲ್‌ರು ಮಾತ್ರವಲ್ಲದೆ ಸೂರ್ಯ-ಚಂದ್ರರ ಚಿತ್ರ ತೆಗೆದು ಪೂಜಿಸುವುದು ಇಂದಿಗೂ ಇದೆ. ಧಾರವಾಡ ಮತ್ತೀತರ ಪ್ರದೇಶಗಳಲ್ಲಿ ಬೆಳದಿಂಗಳ ಹಬ್ಬದ ಸಂದರ್ಭದಲ್ಲಿ ಸೂರ್ಯ-ಚಂದ್ರನ ಚಿತ್ರ ತೆಗೆಯುತ್ತಾರೆ. ಆದಿಮಾನವನು ಸಹ ಸೂರ್ಯ-ಚಂದ್ರನ ಗೀರು-ಗವಿಚಿತ್ರಗಳನ್ನು ಬಿಡಿಸಿರುವುದು ಕಂಡು ಬರುತ್ತದೆ. ಸೂರ್ಯ ಕ್ರಿಯಾತ್ಮಕ ಸಂಕೇತವಾದರೆ, ಚಂದ್ರ ಸೃಜನಶೀಲತೆಯ ಸಂಕೇತವಾಗಿಯೇ ಕವಿ-ಕಲಾವಿದರ ಮನಸ್ಸಿನಲ್ಲಿ ಉಳಿದಿದ್ದಾನೆ. ಆದಿಮಾನವನ ಕಾಲದಿಂದ ಸೂರ್ಯ-ಚಂದ್ರ ಈ ಪ್ರಕ್ರಿಯೆಯಲ್ಲಿಯೇ ಹಾಸುಕೊಕ್ಕಾಗಿರಬಹುದು.

**ಸಿಂಹ-ಹುಲಿಯ ಆಕೃತಿ:** ಇದನ್ನು ಪಿಥೋರಾ ದ್ವಾರದ ಮೇಲೆ ಮಾಡಲಾಗುತ್ತದೆ. ಕೆಲವೊಂದು ಕಡೆ ಎರಡು ಹುಲಿಗಳನ್ನು ಬಿಡಿಸುವ ವಾಡಿಕೆಯೂ ಇದೆ. ಹುಲಿಯನ್ನು ಅರಣ್ಯದ ರಾಜನೆಂದು ಭಾವಿಸಿರುವ ಬಿಲ್‌ರು ತಮ್ಮನ್ನು ಊರಿನ ರಾಜನಂತೆ ಎಂದು ಪರಿಭಾವಿಸಿಕೊಳ್ಳುತ್ತಾರೆ. ಅರಣ್ಯದಲ್ಲಿ ಮೇಲಿಂದ ಮೇಲೆ ಬಿಲ್‌ರಿಗೆ ಹುಲಿಯ ಮುಖಾಮುಖಿಯಾಗುತ್ತದೆ. ಹುಲಿಯ ಜೊತೆಗೆ ವಿಭಿನ್ನವಾದ ಸಂಬಂಧವನ್ನು ಹೊಂದಿದ್ದಾರೆ. ಬಿಲ್‌ರು ತಮ್ಮನ್ನು ತಾವು



ಹುಲಿಗೆ ಹೋಲಿಸಿಕೊಳ್ಳುತ್ತಾರೆ. ಹುಲಿಯಂತೆ ಮೀಸೆಯನ್ನು ತಿರುವುತ್ತಿರುತ್ತಾರೆ. ಬಿಲ್‌ರೇ ಹೇಳುವಂತೆ "ನಾನು ಹುಲಿ, ಹಸಿದರೂ ಸುಖದಿಂದ ಇದ್ದೇನೆ" ಪಿಥೋರಾದಲ್ಲಿ ಹುಲಿಯ ಉಪಸ್ಥಿತಿ ಇದೇ ಕಾರಣಕ್ಕೆ ಇರಬೇಕು. ಹುಲಿ ಅರಣ್ಯ ಜೀವನದ ಪ್ರತೀಕವಾಗಿದೆ. ಹುಲಿಯನ್ನು ಬಿಳಿ, ಕೆಂಪು ಮತ್ತು ಹಳದಿ ಬಣ್ಣದಿಂದ ಬರೆದು ಮೇಲೆ ಕಪ್ಪು ಬಣ್ಣದಿಂದ ಪಟ್ಟಿ ಇಲ್ಲವೆ ಚೌಕಾಕಾರದಲ್ಲಿ ರಚಿಸುತ್ತಾರೆ. ಸಿಂಹವನ್ನು ಕೂಡ ಇವರು ಬರೆಯುತ್ತಾರೆ. ಸಿಂಹವು ಹುಲಿಗಿಂತ ಹೆಚ್ಚು ಪ್ರಾಧನ್ಯತೆಯನ್ನು ಹೊಂದಿಲ್ಲ.

**ಆನೆಯ ಚಿತ್ರ:** ಪಿಥೋರಾದಲ್ಲಿ ಆನೆಯನ್ನು ಚಿತ್ರಿಸುವ ಪದ್ಧತಿ ವೈಭವದ ಪ್ರತೀಕವಾಗಿರುತ್ತದೆ. ಆನೆಯನ್ನು ನೀಲಿ ಅಥವಾ ಕಪ್ಪು ಬಣ್ಣದಿಂದ ರಚಿಸಲಾಗುತ್ತದೆ. ಆನೆಯ ಚಿತ್ರವನ್ನು ಪ್ರಾಯಶಃ ಪಿಥೋರಾ ದ್ವಾರದ ಸಮೀಪದಲ್ಲೆ ಚಿತ್ರಿಸಲಾಗುತ್ತದೆ. ಕೆಲವು ಕಡೆ ಆನೆಯ ಮೇಲೆ ಪಲ್ಲಕ್ಕಿ ಅಥವಾ ಅಂಬಾರಿಯನ್ನು ಮಾಡಲಾಗುತ್ತದೆ. ಕೆಲವೊಮ್ಮೆ ಆನೆಯ ಮೇಲೆ ವ್ಯಕ್ತಿಯೊಬ್ಬನು ಸವಾರಿ ಮಾಡುವಂತೆಯೂ ರಚಿಸುತ್ತಾರೆ. ಈ ರೀತಿಯ ಪ್ರಭಾವಕ್ಕೆ ಆದಿ ಕಾಲದ ಪುರಾಣ ಅಥವಾ ಗುಹೆ ಚಿತ್ರಗಳು ಕಾರಣವಾಗಿರಬಹುದು.



**ನೀರು ಮತ್ತು ಮಹಿಳೆಯ ಚಿತ್ರ:** ಜಾಬುವಾದಲ್ಲಿ ಜಲಸಂಗ್ರಹಗಳಿಂದ ನೀರು ತರುವುದು ತುಂಬಾ ಕಠಿಣ ಮತ್ತು ದುರ್ಗಮವಾಗಿರುತ್ತದೆ. ಇದರಿಂದಾಗಿ ಅದನ್ನು ಪಿಥೋರಾದಲ್ಲಿ ನೀರಿನ ಉಪಲಬ್ಧತೆಯ ಕಾರಣಕ್ಕಾಗಿ ಸೇರಿಸಿಕೊಳ್ಳಲಾಗಿದೆ. ತಲೆಯ ಮೇಲೆ ಬಿಂದಿಗೆ ಹೊತ್ತ ಬಿಲ್ ಮಹಿಳೆಯರ ಚಿತ್ರಣವು ರಮ್ಯವಾಗಿದೆ. ಈ ಚಿತ್ರದಲ್ಲಿ ಅವರ ವೇಷ-ಭೂಷಣಗಳ ಬಗ್ಗೆ ಒತ್ತುಕೊಡಲಾಗಿದೆ. ಬಿಲ್ ಮಹಿಳೆಯು ಯಾವ ಬಣ್ಣದ ಬಟ್ಟೆಯನ್ನು ಧರಿಸುತ್ತಾಳೆಯೋ ಅದೇ ಬಣ್ಣವನ್ನು ಚಿತ್ರಕಾರ ಬಳಸುತ್ತಾನೆ. ಅವರು ನೀರಡಿಕೆಯಾಗಿರುವ ದೇವತೆಗಳಿಗೆ ನೀರು ತರುವಂತವರಾಗಿದ್ದಾರೆ.

ನೀರು ತರುವ ದೃಶ್ಯದ ಸಮೀಪವೆ ಬಾವಿಯ ಚಿತ್ರವಿರುತ್ತದೆ. ಕೊಳ ಅಥವಾ ಬಾವಿ ಇಲ್ಲದಿದ್ದರೆ, ನೀರಡಿಸಿದ ದೇವತೆಗಳಿಗೆ ನೀರು ಎಲ್ಲಿಂದ



ತರಬೇಕು ಎಂಬುವುದು ಅವರಿಗೆ ಕಾಡುತ್ತಿತ್ತು. ಅವರಿಗೆ ನೀರು ತರುವುದಕ್ಕಾಗಿ ಬಾವಿಗಳನ್ನು ಬಳಸುತ್ತಿದ್ದುದಕ್ಕೆ ಸಾಕ್ಷಿಯಾಗಿ ಕೊಳವನ್ನು ಪಿಥೋರಾದಲ್ಲಿ ಚಿತ್ರಿಸುತ್ತಾರೆ. ಕೊಳವನ್ನು ನೀರಿನ ಪೂಜೆಗಾಗಿ ಬಳಸುವುದಿದೆ. ಬಾವಿಯು ನೀರಿನ ಸಂಗ್ರಹವಾಗಿದ್ದು ಮತ್ತು ಜಲವೇ ಜೀವನವಾಗಿದೆ. ನೀರಿನ ಮಹತ್ವವನ್ನು ಬಿಲ್‌ರು ತುಂಬಾ ಅರಿತಿದ್ದರೆಂಬುವುದಕ್ಕೆ ಈ ನೀರು ಸಂಗ್ರಹ ವಿಧಾನವೇ ಸಾಕ್ಷಿ. ಅಲ್ಲದೆ, ಶೇರ ಸಿಂಗ್‌ನ 'ಏ ಬಿಲ್ ಸ್ಟೋರಿ' ಎಂಬ ಕೃತಿಯು ಬಿಲ್‌ರಿಗೆ ನೀರಿನ ಬಗ್ಗೆ ಇದ್ದ ತಿಳುವಳಿಕೆಯನ್ನು ರೂಪಕದ ಮೂಲಕ ಸಾಕ್ಷಿಕರಿಸುತ್ತದೆ.

ಕೊಳದ ಹತ್ತಿರ ಹಾವು-ಚೇಳು, ಕಪ್ಪೆ, ಹಲ್ಲಿ ಮುಂತಾದ ಜೀವ-ಜಂತುಗಳಲ್ಲದೇ ನೀರು ತುಂಬುವವರ ಚಿತ್ರಣವನ್ನು ಮಾಡುತ್ತಾರೆ. ಪ್ರಾಯಶಃ ನೀರಿನ ಸಮೀಪ ಎಲ್ಲಾ ಜೀವ-ಜಂತುಗಳು ಸಿಗುತ್ತವೆ. ಆದ್ದರಿಂದ ಇವುಗಳು ಕೂಡ ಜೀವನದಲ್ಲಿ ಒಂದಿಲ್ಲಾ ಒಂದು ಕಡೆ ಉಪಯೋಗವಾಗುತ್ತವೆ ಎಂಬ ನಂಬಿಕೆ ಅವರದ್ದು.

**ಕೋತಿ ಚಿತ್ರ:** ಪಿಥೋರಾ ಚಿತ್ರದಲ್ಲಿ ಕೋತಿಯನ್ನು ಚಿತ್ರಿಸುತ್ತಾರೆ. ಪಿಥೋರಾದ ಚೌಕಟ್ಟಿನ ಹೊರಗೆ ಬಲಗಡೆಗೆ ಐದಾರು ಮಂಗಗಳನ್ನು ಬಿಡಿಸುತ್ತಾರೆ. ಮಂಗನನ್ನು ಕಪ್ಪು, ಬಿಳಿ ಮತ್ತು ಕೆಂಪು ಬಣ್ಣದಲ್ಲಿ ಚಿತ್ರಿಸುತ್ತಾರೆ. ಇವನ್ನು ತಮ್ಮ ಪೂರ್ವಜರೆಂದು ಬಿಲ್‌ರು ಭಾವಿಸುತ್ತಾರೆ. ಮಂಗನಿಂದ ಮಾನವ ಎಂಬ ಪರಿಕಲ್ಪನೆಯನ್ನು ಅರಿತಿದ್ದರೆಂಬುವುದು ಇದರಿಂದ ತಿಳಿಯುತ್ತದೆ.



**ಗಿಳಿ ಚಿತ್ರ:** ಗಿಳಿಯು ಪ್ರೇಮದ ಪ್ರತೀಕವಾಗಿದೆ. ಅದರ ಮಾತು ಸಿಹಿಯಾಗಿ, ಇಂಪಾಗಿರುತ್ತದೆ. ಆದ್ದರಿಂದ ಜನರು ಅದನ್ನು ಪಂಜರದಲ್ಲಿ ಇಟ್ಟು ಸಾಕುತ್ತಾರೆ. ಇದರ ಅಭಿವ್ಯಕ್ತಿಗಾಗಿಯೇ ಪಿಥೋರಾದಲ್ಲಿ ಪಂಜರದ ಗಿಳಿಯನ್ನು ಚಿತ್ರಿಸುತ್ತಾರೆ. ಪಂಜರವನ್ನು ಬಿಳಿಯ ಇಲ್ಲವೇ ಕಪ್ಪು ವರ್ಣದಿಂದ ರಚಿಸಿ ಅದರಲ್ಲಿ ಹಸಿರು ಬಣ್ಣದ ಗಿಳಿಯನ್ನು ಚಿತ್ರಿಸುತ್ತಾರೆ. ಪಂಜರದ ಆಕೃತಿ ತ್ರಿಭುಜಾಕಾರವಾಗಿದ್ದು, ಅದನ್ನು ಅಲಂಕರಿಸಲಾಗುತ್ತದೆ. ಇದರ ಜೊತೆ ನವಿಲು ಮತ್ತು ಇತರ ಪಕ್ಷಿಗಳನ್ನು ರಚಿಸಲಾಗುತ್ತದೆ. ಕೋಳಿ, ಹುಂಜ, ಹದ್ದು, ಕಾಗೆ ಮುಂತಾದವುಗಳನ್ನು ಮಾಡಲಾಗುತ್ತದೆ. ನೀಲಿ ವರ್ಣದಿಂದ ನವಿಲನ್ನು ಬರೆಯುತ್ತಾರೆ. ಅದು ಸಂತೋಷ ಮತ್ತು ಆಳವಾದ ಆನಂದದ ಪ್ರತೀಕವಾಗಿದೆ. ಪಾತರಗಿತ್ತಿ, ಗುಂಗಿಹುಳು ಮುಂತಾದವುಗಳನ್ನು ಚಿತ್ರಿಸುತ್ತಾರೆ. ರಣಹದ್ದು, ಗೂಬೆ ಹತ್ತಿರದಲ್ಲಿಯೇ ಚಿತ್ರಿಸುತ್ತಾರೆ, ರಣಹದ್ದು, ಸತ್ತ ಪಶುಗಳ ಮಾಂಸ ತಿನ್ನುತ್ತದೆ ಮತ್ತು ಗೂಬೆ ಅಪಶಕುನದ ಪ್ರತೀಕವಾಗಿದೆ.

ಕುದುರೆ, ಆನೆ, ಎತ್ತು, ಸಿಂಹ, ಮಂಗಗಳ ಚಿತ್ರಗಳನ್ನು ಪಿಥೋರಾದಲ್ಲಿ ರಚಿಸಲಾಗುತ್ತದೆ. ಇದರ ಜೊತೆಗೆ ಒಂಟೆ, ಜಿಂಕೆ, ಬೆಕ್ಕು, ನಾಯಿ, ಕತ್ತೆ, ಮೊಲ, ಕರಡಿ, ಆಡು, ಆಕಳು, ಎಮ್ಮೆ, ಗೂಳಿ, ಹಿಮಸಾರಂಗ ಮುಂತಾದ ಚಿತ್ರಗಳನ್ನು ರಚಿಸಲಾಗುತ್ತದೆ. ಈ ಚಿತ್ರದಲ್ಲಿ ಅನಾದಿಕಾಲದಿಂದಲೂ ಮನುಷ್ಯ ಮತ್ತು ಪಶುಗಳ ನಡುವೆ ಇರುವ ಸಂಬಂಧವನ್ನು ವ್ಯಕ್ತಪಡಿಸುತ್ತಾರೆ. ಈ ಎಲ್ಲ ಪ್ರಾಣಿ ಸಮೂಹಗಳನ್ನು ಗಮನಿಸಿದರೆ ಪರಸ್ಪರ ಆಸರೆಯ ಧ್ಯೋತಕವಾಗಿದೆ.

ಪಿಥೋರಾದಲ್ಲಿ ಸರ್ಪ–ಚೇಳು ಇವುಗಳನ್ನು ಪರಂಪರೆಯಿಂದಲೇ ಬಿಡಿಸಿಕೊಂಡು ಬಂದಿದ್ದಾರೆ. ಪಿಥೋರಾದಲ್ಲಿ ಇರುವೆಯಿಂದ ಜೇನುಹುಳುಗಳವರೆಗೂ ಸ್ಥಳವಿದೆ. ಮನುಷ್ಯನ ಸಂಬಂಧ ಹುಳ–ಹುಪ್ಪಡಿಗಳ ಜೊತೆಗೂ ಇದೆ. ಹಲ್ಲಿ, ಊಸರವಳ್ಳಿ, ಜೇಡರ ಹುಳು, ಆಮೆ, ಮೀನು, ಮೊಸಳೆ ಮುಂತಾದವು ಪಿಥೋರಾದಲ್ಲಿ ಎಲ್ಲೋ ಒಂದು ಕಡೆ ತಮ್ಮ ವಿಧಿಯ ಜೊತೆ ಕಾಣಸಿಗುತ್ತವೆ. ಎಲ್ಲಿಯವರೆಗೆಂದರೆ ಪಶು–ಪಕ್ಷಿ, ಹುಳ–ಹುಪ್ಪಡಿಗಳ ಸಂಭೋಗದ ಚಿತ್ರವು ಕೂಡ ರಚಿಸಲ್ಪಡುತ್ತದೆ. ಬಾಬರಾದ ಪಿಥೋರಾದಲ್ಲಿ ಜೇನುಗೂಡಿನ ಚಿತ್ರವನ್ನು ಮರದ ರೆಂಬೆಗೆ ಕಟ್ಟಿರುವಂತೆ ರಚಿಸುತ್ತಾರೆ. ಸರ್ಪ–ಚೇಳನ್ನು ಬೆಳದಿಂಗಳ ಹಬ್ಬದ ಸಂದರ್ಭದಲ್ಲಿ ಗೋಡೆಯ ಮೇಲೆ ಬರೆಯುತ್ತಾರೆ.

ಪಿಥೋರಾದಲ್ಲಿ ಜಾಬುವಾದಲ್ಲಿ ಸಿಗತಕ್ಕಂತ ವನಸ್ಪತಿ ಗಿಡ, ಮರಗಳ ಚಿತ್ರಗಳ ರಚನೆಗಳಿವೆ. ವನಸ್ಪತಿ ಪ್ರಕೃತಿಯ ಕೊಡುಗೆಯಾಗಿದೆ. ಅದರ ಉಪಯೋಗವನ್ನು ಮನುಷ್ಯ ಅನಾದಿಕಾಲದಿಂದಲೂ ಮಾಡಿಕೊಳ್ಳುತ್ತಾ ಬಂದಿದ್ದಾನೆ. ಇದನ್ನೇ ಅವರು ಪಿಥೋರಾದಲ್ಲಿ ಬಿಡಿಸುತ್ತಾರೆ. ಪ್ರಕೃತಿ ಮತ್ತು ವನಸ್ಪತಿಯನ್ನು ಪೂಜನೀಯ ಭಾವದಿಂದ ಮನುಷ್ಯನ ಮನದಲ್ಲಿ ಅಡಗಿದೆ ಎಂಬುವುದನ್ನು ಬಿಲ್‌ರು ಈ ಚಿತ್ರಗಳ ಮೂಲಕ ಅಭಿವ್ಯಕ್ತಿಸುತ್ತಾರೆ. ಏಕೆಂದರೆ ಪ್ರಕೃತಿ ಮತ್ತು ವನಸ್ಪತಿಯಿಂದ ಅವನ ಸಂಬಂಧ ಜೀವನದಲ್ಲಿ ಸಂಚಲನವಾಗುತ್ತ ಬಂದಿದೆಯಲ್ಲದೇ ಜೈವಿಕವಾಗಿಯೂ ಇದೆ. ಜಾಬುವಾದ ಅಲಿರಾಜಪುರ–ಕಟ್ಟಿವಾಡ ಕ್ಷೇತ್ರದಲ್ಲಿ ಬೆಳೆಯುವ ಶಿಂಧಿ (ಈಚಲು) ಮರದಿಂದ ತಯಾರಿಸುವ ಸೇಂದಿ ರಸ ಬಿಲ್‌ರಿಗೆ ಅಮೂಲ್ಯವಾದ ಮದ್ಯವಾಗಿದೆ. ಇದಿಲ್ಲದೆ ಹೋದರೆ ಬಿಲ್‌ರ ಜೀವನ ಅಪೂರ್ಣವಾಗುತ್ತದೆ. ಪಿಥೋರಾದಲ್ಲಿ ಈಚಲು ಮರಕ್ಕೆ ಮಡಿಕೆ ಕಟ್ಟುವ ಸನ್ನಿವೇಶವನ್ನು ಚಿತ್ರಿಸಲಾಗಿದೆ. ಖರ್ಜುರ ಗಿಡವನ್ನು ಸಹ ರಚಿಸುತ್ತಾರೆ. ಈ ಗಿಡವನ್ನು ಗುಡ್ಡಗಳಲ್ಲಿ, ಹೊಲಗಳಲ್ಲಿ ಯಥೇಚ್ಚವಾಗಿ ಬೆಳೆಯುತ್ತಾರೆ.

ವ್ಯವಸಾಯವು ಬಿಲ್‌ರ ಕಸುಬಾಗಿದೆ. ಇದರ ಮೇಲೆಯೇ ಅವರ ಪರಿವಾರವು ಅವಲಂಬಿತವಾಗಿರುತ್ತದೆ. ಈ ವ್ಯವಸಾಯ ಚಿತ್ರಣವನ್ನು ಪಿಥೋರಾದಲ್ಲಿ ಬಿಡಿಸುತ್ತಾರೆ. ಬಿಲ್‌ರು ಪಿಥೋರಾ ದೇವನನ್ನು ಒಳ್ಳೆಯ ಬೆಳೆಗಾಗಿ ಬೇಡಿಕೊಳ್ಳುತ್ತಾರೆ. ಏಕೆಂದರೆ ಜಾಬುವಾದಲ್ಲಿ ಕೃಷಿಯು ಒಂದು ಕಠಿಣ ಕಾರ್ಯವಾಗಿದೆ. ಮಳೆಯು ಇಲ್ಲಿ ತುಂಬಾ ಕಡಿಮೆಯಾಗುತ್ತದೆ.

ವ್ಯವಸಾಯ ಮಾಡುತ್ತಿರುವ ರೈತನ ಚಿತ್ರವು ಪಿಥೋರಾದಲ್ಲಿದೆ. ಎರಡು ಬಿಳಿ ಬಣ್ಣದ ಎತ್ತುಗಳು ಮತ್ತು ಕಪ್ಪು ಬಣ್ಣದಿಂದ ರೈತನ ಚಿತ್ರವನ್ನು ಬಿಡಿಸಿದ್ದಾರೆ. ತಲೆಗೆ ರೈತನು ಪೇಟಾವನ್ನು ಸುತ್ತಿದ್ದಾನೆ. ರೈತನ ಜಮೀನನ್ನು ಬೇರೆ ಬೇರೆ ಬಣ್ಣಗಳಿಂದ ರಚಿಸಿದ್ದಾರೆ. ರೈತ, ಎತ್ತು ಮತ್ತು ಹೊಲದ ಚಿತ್ರಗಳು ಅಕ್ಕ-ಪಕ್ಕ ಇವೆ. ಅಲ್ಲದೇ ಕೃಷಿಯು ಅವರ ಬದುಕಿನ ಧ್ಯೋತಕವಾಗಿದೆ.

ಬುಡಕಟ್ಟಿನ ಜನರಲ್ಲಿ ಬೇಟೆ ಆದಿಕಾಲದಿಂದಲೂ ನಡೆದುಕೊಂಡು ಬಂದಿದೆ. ಇವತ್ತಿಗೂ ಬೇಟೆಯ ವಿವಿಧ ಆಚರಣೆಗಳಿವೆ. ಮಾಂಸಾಹಾರ ಬಿಲ್‌ರ ಮನೆಗಳಲ್ಲಿದೆ. ಬಿಲ್‌ರಲ್ಲಿ ಬೇಟೆಯ ದಾಖಲೆಗಳು ಸಾಕಷ್ಟು ಸಿಗುತ್ತವೆ. ಹುಲಿ, ಚಿರತೆ, ಜಿಂಕೆ ಇತ್ಯಾದಿ ಪ್ರಾಣಿಗಳನ್ನು ಬೇಟೆಯಾಡುತ್ತಾರೆ. ಬಿಲ್ಲು ಮತ್ತು ಬಂದೂಕನ್ನು ಬೇಟೆಯಾಡಲು ಬಳಸುವರು. ಇಬ್ಬರು ಬೇಟೆಗಾರರು ಬಲಿ ಮಾಡಿದ ಸತ್ತ ಪ್ರಾಣಿಯೊಂದನ್ನು ಒಂದು ಬಲವಾದ ಕಟ್ಟಿಗೆಗೆ ಆ ಪ್ರಾಣಿಯ ಕಾಲನ್ನು ಕಟ್ಟಿ ನೇತುಹಾಕಿಕೊಂಡು ಬರುತ್ತಿರುವ ಸನ್ನಿವೇಶವನ್ನು ಚಿತ್ರಿಸಲಾಗಿದೆ. ಈ ದೃಶ್ಯವು ಆದಿಮಾನವನ ಚಿತ್ರಗಳಲ್ಲಿಯೂ ಕಾಣಬಹುದು. ಪ್ರಸ್ತುತ ದಿನದಲ್ಲಿ ಬೇಟೆಯನ್ನು ನಿಷೇದಿಸಿರುವುದರಿಂದ ಈಗ ಬೇಟೆಯನ್ನು ಬಿಲ್‌ರು ಕಡಿಮೆ ಮಾಡುತ್ತಾರೆ. ದೊಡ್ಡ ದೊಡ್ಡ ಪ್ರಾಣಿಗಳ ಬೇಟೆ ಆಡುತ್ತಿಲ್ಲ.

**ಸೂಪಡ್ ಕನ್ಯಾ-ಏಕ್ ಟಾಂಗ್ಯ:** ಪಿಥೋರಾದಲ್ಲಿ ಸಮಾಜದ ಬೇರೆ ಬೇರೆ ಪಾತ್ರಗಳ ಚಿತ್ರಣವನ್ನು ಮಾಡಲಾಗುತ್ತದೆ. 'ಸೂಪಡ್ ಕನ್ಯಾ' ಉದ್ದನೆಯ ಕಿವಿಯುಳ್ಳ ಹೆಣ್ಣಿನ ಚಿತ್ರ. ಈ ಚಿತ್ರವು ಪಿಥೋರಾದಲ್ಲಿ ಪ್ರತಿಮಾತ್ಮಕವಾಗಿ ಕಾಣುತ್ತದೆ. ಇಲ್ಲಿ ಉದ್ದನೆಯ ಕಿವಿ ಎಂದರೆ ಊರಿನ ವಿಷಯಗಳನ್ನು ಲಾಲಿಸುವುದು ಮತ್ತು ಊರಿಗೆಲ್ಲಾ ಪ್ರಚಾರ ಮಾಡುವುದು. ಏಕ್ ಟಾಂಗ್ಯ ಅಂಗವಿಕಲತೆಯಿಂದ ಕೂಡಿರುವ ವ್ಯಕ್ತಿ. ಅವನು ಒಂದೇ ಕಾಲುಳ್ಳ ವ್ಯಕ್ತಿಯಾಗಿದ್ದಾನೆ. ಈ ಎರಡು ಚಿತ್ರಗಳನ್ನು ಪಿಥೋರಾದಲ್ಲಿ ಬಿಲ್‌ರು ಕಾಣಿಸುತ್ತಾರೆ.



ಹೀಗೆ ಪಿಥೋರಾದಲ್ಲಿ ಬಿಲ್‌ರು ತಮ್ಮ ನೈಜ ಜೀವನದ ಮತ್ತು ಪುರಾಣ ಕಲ್ಪಿತ ಚಿತ್ರಣಗಳನ್ನು ಬಿಡಿಸುತ್ತಾರೆ. ಇದು ಇಂದಿಗೂ ಬಿಲ್‌ರ ಸಾಂಸ್ಕೃತಿಕ ಜೀವನದ ಭಾಗವಾಗಿದೆ. ತಮ್ಮ ಬದುಕಿನಲ್ಲಿ ಕಂಡುಕೊಂಡ ಸನ್ನಿವೇಶ, ವಸ್ತುಗಳನ್ನು ಗೋಡೆಯ ಮೇಲೆ ಬರೆಯುತ್ತಾರೆ. ಸಾಂಸ್ಕೃತಿಕ ಅನನ್ಯತೆಯು ಬಿಲ್‌ರಲ್ಲಿ ಚಿತ್ರರಚನೆಯ ಮೂಲಕ ಅಭಿವ್ಯಕ್ತಿಯಾಗುತ್ತಿರುವುದು ಅದೊಂದು ಭಾರತಕ್ಕೆ ಹೆಮ್ಮೆಯ ವಿಚಾರವಾಗಬೇಕಿದೆ.

### ೫.೫.೨ ರಾಥವಾ ಪಿಥೋರಾ: ಚಿತ್ರಗಳ ವಿಶ್ಲೇಷಣೆ

**ಪಿಥೋರೋ:** ರಾಥವಾದಲ್ಲಿ ಅತಿ ಹೆಚ್ಚು ಪೂಜನೀಯ ದೇವರು ಈ ಪಿಥೋರೋ. ಅವನನ್ನು ರಾಥವಾ ಜನರು ಪಿಥೋರೋ ಕುವರ, ಪಿಥೋರಾ ರಾಣೋ, ಭನೇಜ್, ಮಲ್ಲಾನಿ, ಮೋಟದೇವ್ ಎಂಬ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಅವನು ದೇವರಾಗಿ ಮನೆಯೊಂದಿಗೆ ಸಂಪರ್ಕ ಹೊಂದಿದ ಮತ್ತು ಜಾನುವಾರುಗಳ ಕಲ್ಯಾಣವನ್ನು ಸಾಧಿಸಲು ಬಯಸುತ್ತಾನೆ. ಪ್ರತಿ ರಾಥವಾ ಕುಟುಂಬವು ಮನೆಯ ರಕ್ಷಣೆ ಮತ್ತು ಕಲ್ಯಾಣಕ್ಕಾಗಿ ಪಿಥೋರೋ ಇರುವಿಕೆಯನ್ನು ಅಪೇಕ್ಷಿಸುತ್ತದೆ. ಈ ಕಾರಣಕ್ಕಾಗಿ ಪ್ರತೀ ಮನೆಯಲ್ಲಿ ಪಿಥೋರೋನ ಆಹ್ವಾನ ಮತ್ತು ಉಪಸ್ಥಿತಿಗಾಗಿ ಅವರು ಗೋಡೆಯ ಮೇಲೆ ಚಿತ್ರವನ್ನು ಮಾಡುತ್ತಾರೆ. ಹೀಗೆ ಒಂದು ಕುಟುಂಬದಿಂದ ಆ ಚಿತ್ರವು ಪೋಷಿಸಲ್ಪಡುತ್ತದೆ. ಆ ಚಿತ್ರದ ಅನುಸ್ಥಾಪನೆಯ ಸಮಯದಲ್ಲಿ ಮತ್ತು ನಂತರ ವಾರ್ಷಿಕವಾಗಿ ಅಥವಾ ಎರಡು ವರ್ಷಕ್ಕೊಮ್ಮೆ ಬಾಡ್ವಾನೊಂದಿಗೆ ಸಮಾಲೋಚಿಸಿ ಪಿಥೋರಾ ಪೂಜೆಗೆ ಸಿದ್ಧಗೊಳ್ಳುತ್ತಾರೆ. ಪೂಜೆಗೆ ಹಣಕಾಸಿನ ಹೊಂದಿಕೆಯಾದ ಮೇಲೆ ಬಾಡ್ವಾನನ್ನು ಆಹ್ವಾನಿಸಲಾಗುತ್ತದೆ.

ಪಿಥೋರೋನ ಹುಟ್ಟಿನ ಬಗ್ಗೆ ಇದೇ ಅಧ್ಯಾಯದಲ್ಲಿ ಮಿತ್ ಒಂದನ್ನು ಉಲ್ಲೇಖಿಸಲಾಗಿದೆ. ಪಿಥೋರಾನ ಪ್ರಾಥಮಿಕ ಚಿತ್ರಣದ ಬಗ್ಗೆ ಅಲ್ಲಿ ನೋಡಬಹುದು. ಹೆಚ್ಚಿನ ವರ್ಣಚಿತ್ರಗಳಲ್ಲಿ, ಪಿಥೋರೋನನ್ನು ಕುದುರೆಯ ಮೇಲೆ ನಿಂತಿರುವ, ಕುಳಿತಿರುವ ರೀತಿಯಲ್ಲಿ ಅಥವಾ ಸವಾರಿ ಮಾಡುತ್ತಿರುವಂತೆ ಚಿತ್ರವನ್ನು ತೆಗೆಯಲಾಗಿದೆ. ಪಿಥೋರೋನ ಉಡುಪನ್ನು ಗಮನಿಸಿದರೆ ಅವನು ಪಟ್ಟೆಯುಳ್ಳ ಅಂಗಿ ಅಥವಾ ಕೋಟನ್ನು ಧರಿಸುತ್ತಾನೆ. ಕೆಲವು ಸಂದರ್ಭಗಳಲ್ಲಿ ಯುರೋಪಿಯನ್ ಶೈಲಿಯ ಶರ್ಟನ್ನು ಧರಿಸಿರುವಂತೆ ಕಾಣುತ್ತದೆ. ಅಲ್ಲದೆ ಒಂದು ಉದ್ದವಾದ ನಿಲುವಂಗಿಯನ್ನು ಧರಿಸಿರುವಂತೆ ಚಿತ್ರಿಸಿರುವ ಉದಾಹರಣೆಗಳು ಸಿಗುತ್ತವೆ. ಕೆಂಪು ಬಣ್ಣದಲ್ಲಿ ಚಿತ್ರಿಸಲ್ಪಟ್ಟ ಅಂಶಗಳನ್ನು ಹೊಂದಿದ ಮುಂಡವನ್ನು ಪಿಥೋರಾ ಹೊಂದಿರುತ್ತಾನೆ. ನಂತರದಲ್ಲಿ ಅಂಗಿಯನ್ನು ಬಿಡಿಸಿ ಆ ಮೂಲಕ ಪಿಥೋರಾನನ್ನು ನೋಡಲಾಗುತ್ತದೆ. ಕೆಲವು ಚಿತ್ರಗಳಲ್ಲಿ ಅವರು ಕಿರೀಟವನ್ನು ಪಿಥೋರಾನಿಗೆ ಧರಿಸುತ್ತಾರೆ. ಆದರೆ ಹೆಚ್ಚಾಗಿ ಯುರೋಪಿಯನ್ ಟೋಪಿ ಮತ್ತು ಬೇಟೆಯಾಡುವ ಪ್ಯಾಂಟುಗಳನ್ನು ಧರಿಸಿರುವಂತೆ ತೋರಿಸುತ್ತಾರೆ. ಪಿಥೋರೋ ಯಾವಾಗಲೂ ಎರಡು ಕೈಗಳನ್ನು ಹೊಂದಿರುವುದನ್ನು ತೋರಿಸಲಾಗಿದೆ. ಇನ್ನೂ ಕೆಲವು ವಿಶೇಷಗಳೆಂದರೆ ಬಿಲ್ಲು ಮತ್ತು ಬಾಣ, ಚಾವಟಿ ಮತ್ತು ಲಗಾಮು, ಗಿಳಿ ಮತ್ತು ಹೂವನ್ನು ಒಯ್ಯುತ್ತಿರುವಂತೆ ರಚಿಸುತ್ತಾರೆ. ಕೆಲವೊಮ್ಮೆ ಕತ್ತಿಯನ್ನು ಅವನ ಸೊಂಟಕ್ಕೆ ನೇತು ಹಾಕಿಕೊಂಡಿರುವಂತೆ ತೋರಿಸಲಾಗಿದೆ. ಅವನ ಕುದುರೆಯನ್ನು ಪ್ರಮುಖವಾಗಿ ಕೆಂಪು ಅಥವಾ ಕಿತ್ತಳೆ ಬಣ್ಣದಿಂದ ರಚಿಸುತ್ತಾರೆ. ಮಧ್ಯಪ್ರದೇಶದ ಕೆಲವು ಭಾಗಗಳಲ್ಲಿ ಬಿಳಿ ಬಣ್ಣದಿಂದಲೂ ಪಿಥೋರಾ ಚಿತ್ರ

ತೆಗೆಯುತ್ತಾರೆ. ವರ್ಷಕ್ಕೆ ಇಲ್ಲವೆ ಎರಡು ವರ್ಷಕ್ಕೊಮ್ಮೆ ನಡೆಸುವ ಪಿಥೋರಾ ಆರಾಧನೆಯಲ್ಲಿ ಅದರ ಅನುಸ್ಥಾಪನೆಯ ಸಂದರ್ಭದಲ್ಲಿ ಒಂಬತ್ತು ಚುಕ್ಕೆಗಳನ್ನು ಬಿಡಿಸಲಾಗುತ್ತದೆ. ಈ ಚುಕ್ಕೆಗಳ ಸಂಖ್ಯೆಯನ್ನು ಎಣಿಸುವ ಮೂಲಕ ಬಡವಾನು ಪಿಥೋರಾ ರಚನೆಗೆ ಕೊಟ್ಟ ದಿನವನ್ನು ಇದು ಸೂಚಿಸುತ್ತದೆ.

**ಪಿಥೋರಿ:** ಪಿಥೋರೋನ ವಧು ಪಿಥೋರಿಯಾಗಿದ್ದಾಳೆ. ರಾಥವಾದಲ್ಲಿ ಪಿಥೋರಿಯ ಮೂಲದ ಬಗ್ಗೆ ವಿಭಿನ್ನವಾದ ಆವೃತ್ತಿಗಳಿರುವಂತೆ ತೋರುತ್ತದೆ. ಈಕೆಯ ಕುರಿತು ಚುಲ್ಲಿ ಎಂಬ ಗ್ರಾಮದಲ್ಲಿ ಹೇಳುವಂತೆ ಜಗತ್ತನ್ನು ಸೃಷ್ಟಿಸುವ ಸಮಯದಲ್ಲಿ ರಚಿಸಲಾದ 'ಬಾರ್ ಮಥಾನೋ ಧನಿರಾಜ ರಾವಣ'ನ ಪುತ್ರಿಯಾಗಿದ್ದಾಳೆ. ಪದಾಲಿಯಾ ಗ್ರಾಮದಲ್ಲಿ ಪಿಥೋರಿಯು ರಾಣಿ ಕಾಜೋಲ್ ಮತ್ತು ಸೀತುರಾಣೋ ಅವರ ಪುತ್ರಿಯೆಂದು ನಂಬಿರುವುದು ಕಂಡುಬರುತ್ತದೆ. ಇವರೇ ಪಿಥೋರೋನ ಪೋಷಕರಾಗಿರುವುದನ್ನು ಒಂದು ಮಿತ್ ಕೂಡ ಹೇಳುತ್ತದೆ. ಅವಳು ಸೂರ್ಯ-ಚಂದ್ರನಿಗೆ ಸೊಸೆಯಾಗಿದ್ದಾಳೆ. ಆಕೆಯನ್ನು ಸುಂದರವಾದ ಮಹಿಳೆಯೆಂದು ಮಿತ್‌ನಲ್ಲಿ ಬಣ್ಣಿಸಲಾಗಿದೆ. ತನ್ನ ಸೌಂದರ್ಯದ ಚಿಹ್ನೆಯಾಗಿ ಅವಳು ಮೆಹಂದಿಯನ್ನು ಲೇಪಿಸಿಕೊಳ್ಳುತ್ತಾಳೆ. ಚಿನ್ನ ಮತ್ತು ಬೆಳ್ಳಿಯ ಆಭರಣಗಳನ್ನು ಧರಿಸುವಳು.

ಚಿತ್ರಕಲೆಯಲ್ಲಿ, ಪಿಥೋರೋದ ಹಿಂಭಾಗದಲ್ಲಿರುವುದೇ ಪಿಥೋರಿ ಕುದುರೆಯಾಗಿದೆ. ಈ ಕುದುರೆಯ ಮೇಲೆ ಆಕೆ ಸವಾರಿ ಮಾಡುವಂತೆ ಚಿತ್ರದಲ್ಲಿ ತೋರಿಸಲಾಗಿದೆ. ಅವಳನ್ನು ಉದ್ದನೆಯ ಕೂದಲು, ತಲೆ, ಕುತ್ತಿಗೆ ಮತ್ತು ಸೊಂಟದಲ್ಲಿನ ಆಭರಣಗಳಿಂದಾಗಿ ಆ ದೇವತೆಯ ಸ್ಥಾನದಿಂದ ಗುರುತಿಸಬಹುದಾಗಿದೆ. ಅವಳ ಕೈಯಲ್ಲಿ ಬಾಚಣಿಕೆ ಮತ್ತು ಹೂವು ಅಥವಾ ಗಿಳಿ ಮತ್ತು ಕೈಯಲ್ಲಿ ಅಭಿಮಾನಿಯನ್ನು ಹಿಡಿದುಕೊಂಡು ಒಯ್ಯುವಂತೆ ಚಿತ್ರಿಸಲಾಗಿದೆ. ಇಂತಹ ಪಿಥೋರಿ ಚಿತ್ರದ ಬಣ್ಣವು ಕೆಂಪು ಮತ್ತು ಹಳದಿಯಾಗಿದೆ.

**ರಾಣಿ ಕಾಜೋಲ್:** ದಂತಕತೆಯ ಪ್ರಕಾರ ರಾಣಿಕಾಜೋಲ್ ಪಿಥೋರೋನ ಸಾಕುತಾಯಿಯಾಗಿದ್ದಾಳೆ. ಅವಳು ಗೊಡ್ಲಿ ಹಳ್ಳಿಯಲ್ಲಿ ರಾಣಿ ಮೊಖಾಲ್ ಎಂದು ಉಲ್ಲೇಖಿಸಲ್ಪಟ್ಟಿದ್ದಾಳೆ. ಅವಳ ಸೋದರಿಯಾದ ಕಾಲಿ ಕಾಯೋಲ್ ಎಂಬುವಳು ಮದುವೆಗೆ ಮುಂಚೆ ಒಂದು ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಅವಳು ಕಾಲಿ ಕಾಜೋಲ್ ಮತ್ತು ಬಾಬಾ ಇಂದ್ರದೇವನ ತಂಗಿಯಾಗಿದ್ದಾಳೆ. ಆ ಮಗುವಿನ ಸಾಕು ತಾಯಿಯಾಗಿ ರಾಣಿ ಕಾಜೋಲ್ ಪೋಷಿಸುತ್ತಾಳೆ. ಆ ಸಾಕು ಮಗುವೇ ಪಿಥೋರಾ. ಕಾಲಿ ಕಾಯೊಲ್ ಮತ್ತು ಕುಂದುರಾಣೋ ಪ್ರೇಮದ ಫಲಿತವಾಗಿ ಗಂಡು ಮಗುವೊಂದು ಜನಿಸುತ್ತದೆ. ಆ ಮಗುವನ್ನು ಕುಂದುರಾಣೋ ತಿರಸ್ಕರಿಸುತ್ತಾನೆ. ತನ್ನ ಅಣ್ಣನಿಗೆ ಹೆದರಿ ಒಂದು ನೀರಿನ ಮೂಲದಲ್ಲಿ ಮಗುವನ್ನು ಕಾಲಿ

ಕೊಯಲ್ ಬಿಟ್ಟುಬಿಡುತ್ತಾಳೆ. ರಾಣಿ ಕಾಜೋಲ್ ನೀರನ್ನು ತರಲು ಹೋದಾಗ ಆ ಮಗುವನ್ನು ನೋಡಿ ಮನೆಗೆ ತಂದು ಸಾಕುತ್ತಾಳೆ. ಹೀಗಾಗಿಯೇ ಪಿಥೋರಾ ಚಿತ್ರದಲ್ಲಿ ರಾಣಿ ಕಾಜೋಲ್‌ಗೆ ವಿಶೇಷವಾದ ಸ್ಥಾನಮಾನವಿದೆ.

ರಾಣಿಕಾಜೋಲ್ ಪಿಥೋರಾ ಮೆರವಣಿಗೆಯಲ್ಲಿ ನಾಲ್ಕನೆಯ ಕುದುರೆಯಾಗಿ ಆಹ್ವಾನ ಪಡೆದಿದೆ. ಜಟ್ಟುಕ ಮತ್ತು ದೇವಗಡ್ ಬರಿಯಾ ತಾಲ್ಲೂಕ್‌ಗಳಲ್ಲಿ ಕಂಡುಬರುವ ವರ್ಣಚಿತ್ರಗಳಲ್ಲಿ ಪಿಥೋರಾ ಮೆರವಣಿಗೆಯಲ್ಲಿ ನಾಲ್ಕನೇಯ ಕುದುರೆಯಾಗಿ ರಾಣಿಕಾಜೋಲ್ ಕಂಡುಬರುತ್ತದೆ. ಅನುಕ್ರಮವಾಗಿ ಗಮನಿಸಿದರೆ ಇದು ಪಿಥೋರೋದ ಕುದುರೆಗೆ ಮುಂಚಿನದಾಗಿದೆ. ಈ ವರ್ಣಚಿತ್ರಗಳ ಪೈಕಿ ಒಂದರಲ್ಲಿ ಅವಳು ಹಳದಿ ಸ್ಕರ್ಟ ಮತ್ತು ಹಸಿರು ಫ್ರಾಕ್ ಧರಿಸಿ ತನ್ನ ಕುದುರೆಯ ಮೇಲೆ ನಿಂತಿರುವಂತೆ ತೋರಿಸಿದ್ದಾರೆ. ಈಕೆಯು ತನ್ನ ಬಲಗೈಯಲ್ಲಿ ಗಿಳಿ ಮತ್ತು ಎಡಗೈಯಲ್ಲಿ ಅಭಿಮಾನಿಗಳನ್ನು ಹಿಡಿದಿಟ್ಟುಕೊಂಡಿದ್ದಾಳೆ. ಅವಳ ಕುದುರೆ ಕೆಂಪು ಬಣ್ಣದಿಂದ ಕೂಡಿರುತ್ತದೆ. ರಾಣಿಕಾಜೋಲಳನ್ನು ಗಾಂತಿಯಾ ಗ್ರಾಮದಲ್ಲಿನ ಪಿಥೋರಾ ಮೆರವಣಿಗೆಯಲ್ಲಿ ತೋರಿಸಿಲ್ಲ. ಇಲ್ಲಿ ಮೆರವಣಿಗೆಯನ್ನು ಹೆಡ್ವಾ ಜಟಾರ್ ನೇತೃತ್ವದಲ್ಲಿ ನೆರವೇರಿಸಲಾಗುತ್ತದೆ. ಈ ಪ್ರದೇಶದ ಪ್ರಮುಖ ದೇವತೆಯು 'ಮಾಶಿ'ಯಾಗಿದ್ದಾಳೆ. ಈ ಮಾಶಿಯು ರಾಣಿಕಾಜೋಲ್ ತಾಯಿಯ ತಂಗಿಯಾಗಿದ್ದಾಳೆ. ಐದನೆಯ ಮತ್ತು ವರ್ಣಚಿತ್ರದಲ್ಲಿನ ಕೊನೆಯ ಕುದುರೆ ಪಿಥೋರಾದ ನಿಜವಾದ ತಾಯಿಯಾದ ಕಾಲಿಕೋಯಲ್ ಅವಳದ್ದಾಗಿದೆ. ಬಡುವಾ ನಮಗೆ ಹೇಳಿದ ಪ್ರಕಾರ ಒಮ್ಮೊಮ್ಮೆ ರಾಣಿ ಕಾಜೋಲ್ ಮತ್ತು ಕಾಲಿ ಕೋಯಲ್ ಇಬ್ಬರೂ ಒಂದೇ ಕುದುರೆಯ ಚಿತ್ರವನ್ನು ಪ್ರತಿನಿಧಿಸುವರೆಂದು ತಿಳಿಸಿದರು. ಈ ಕುದುರೆಯ ಮೇಲೆ ಒಂದು ಹೆಣ್ಣು ಚಿತ್ರವು ಕುಳಿತು ಮತ್ತು ಅದು ಉದ್ದನೆಯ ಮುಸುಕನ್ನು ಹೊಂದಿದೆ. ಅಲ್ಲದೆ, ಬೆಳ್ಳಿಯಿಂದ ತಯಾರಿಸಿದ ಸೊಂಟದ ಪಟ್ಟಿಯನ್ನು ಹಾಕಿರುವಂತೆ ಚಿತ್ರಿಸಲಾಗಿದೆ. ಪ್ಯಾಂಟನ್ನು ಧರಿಸಿರುವಂತೆಯು ಕೂಡ ಚಿತ್ರವನ್ನು ತೆಗೆದಿದ್ದಾರೆ. ತನ್ನ ಬಲಗೈಯಲ್ಲಿ ಬಾಚಣಿಕೆಯನ್ನು, ಎಡಗೈಯಲ್ಲಿ ಅವಳ ಅಭಿಮಾನಿಗಳನ್ನು ಹೊಂದಿದ ಚಿತ್ರವನ್ನು ತೋರಿಸಲಾಗಿದೆ.

**ಕಾಲಿ ಕೋಯಲ್:** ಈ ಮೇಲಿನ ಸಾಲುಗಳಲ್ಲಿ ಉಲ್ಲೇಖಿಸಿರುವಂತೆ ಕಾಲಿ ಕೋಯಲ್ ಪಿಥೋರಾನ ನಿಜವಾದ ತಾಯಿಯಾಗಿದ್ದಾಳೆ. ಪಿಥೋರಾದಲ್ಲಿ ಅವಳನ್ನು ತುಂಬ ವಿರಳವಾಗಿ ಚಿತ್ರಿಸಲಾಗಿದೆ. ಕೆಲವು ಗ್ರಾಮಗಳಲ್ಲಿನ ವರ್ಣಚಿತ್ರಗಳಲ್ಲಿ ಅವಳನ್ನು ಅಕ್ಷರಶಃ ಕಪ್ಪು ಕೋಗಿಲೆ ಅಥವಾ ಕಾಲಿ ಕೋಯಲ್ ಎಂದು ತೋರಿಸಲಾಗಿದೆ. ಕೋಗಿಲೆಗೆ ತನ್ನ ಮೊಟ್ಟೆಗಳಿಗೆ ತಾನೇ ಕಾವು ಕೊಟ್ಟು ಸಾಕುವ ಗುಣವಿಲ್ಲ. ಕಾಲಿ ಕೋಯಲ್ ನಿಜವಾಗಿಯೂ ಕೋಗಿಲೆಯನ್ನೇ ಪ್ರತಿನಿಧಿಸುತ್ತಾಳೆ.



**ಸೀತು ರಾಣೋ:** ಈತನು ಪಿಥೋರೋನ ಸಾಕುತಂದೆ ಮತ್ತು ರಾಣಿ ಕಾಜೋಲ್‌ನ ಪತಿಯಾಗಿದ್ದಾನೆ. ಸೀತುರಾಣೋ ಮತ್ತು ರಾಣಿ ಕಾಜೋಲ್ ಜೋಡಿಯು ಪಿಥೋರಿಯ ಪೋಷಕರಾಗಿದ್ದಾರೆ. ಸೀತುರಾಣೋನನ್ನು ಗೋಡೆಯ ವರ್ಣಚಿತ್ರಕಾರ ಎಂದು ವರ್ಣಿಸಲಾಗಿದೆ. ತನ್ನ ಹೆಂಡತಿ ರಾಣಿ ಕಾಜೋಲ್ ಕೆಂಪು ಕುದುರೆಯ ಮೇಲೆ ಸವಾರಿ ಮಾಡುವ ಮೆರವಣಿಗೆಯಲ್ಲಿ ಸೀತುರಾಣೋವನ್ನು ತೋರಿಸಲಾಗಿದೆ. ಅವನು ಸಾಮಾನ್ಯವಾಗಿ ಕಿರೀಟ, ದೀರ್ಘವಾದ ಕೋಟ್ ಮತ್ತು ಅವನ ಸೊಂಟದಲ್ಲಿ ಕತ್ತಿಯನ್ನು ಧರಿಸುತ್ತಾನೆ. ಆದರೆ ಗಾಂತಿಯಾ ಗ್ರಾಮದಲ್ಲಿ ಅವನನ್ನು ವರ್ಣಚಿತ್ರದಲ್ಲಿ ತೋರಿಸಲ್ಪಟ್ಟಿಲ್ಲ.

**ವಲನ್:** ಬಾಬಾ ಇಂದ್ರನ ಸಹೋದರಿ ಮತ್ತು ಭೂಮಿಯ ರಕ್ಷಕಿಯಾಗಿದ್ದಾಳೆ. ಈಕೆ ಮಗುವನ್ನು ಪಡೆದುಕೊಳ್ಳಲು ಭೂತಾಯಿಯ ಜೊತೆಗೆ ಪ್ರಮಾಣವನ್ನು ತೆಗೆದುಕೊಳ್ಳುತ್ತಾಳೆ. ಮೂರು ಪ್ರಮುಖ ಕೂಟಗಳಲ್ಲಿ ಕಂಬಗಳನ್ನು, ಹಳ್ಳಿಯ ದೇವಾಲಯಗಳನ್ನು ಸ್ಥಾಪಿಸಲಾಗಿದೆ. ಇಂತವುಗಳಲ್ಲಿ ವಲನ್ ಕೂಡ ಒಂದು ಕೂಟ.

ಪಿಥೋರಾ ವರ್ಣಚಿತ್ರಗಳಲ್ಲಿ ವಲನ್ ಉಪಸ್ಥಿತಿಯನ್ನು ಪಿಥೋರಿ ನಂತರದ ಸ್ಥಾನದಲ್ಲಿ ಕಾಣಬಹುದು. ಇದು ಹಸಿರು ಬಣ್ಣದಿಂದ ಕೂಡಿದ ಚಿತ್ರವಾಗಿದೆ. ಕೆಲವೊಮ್ಮೆ ಮೆರವಣಿಗೆಯ ಸಂದರ್ಭದಲ್ಲಿ ಕಣಿವೆ ಪ್ರದೇಶದ ಮೇಲಿರುವ ದೇವರ ಕುದುರೆಗಳನ್ನು ಹಸಿರಿನಿಂದ ತೋರಿಸಲಾಗಿದೆ. ಒಂದು ವರ್ಣಚಿತ್ರದಲ್ಲಿ ಎರಡು ಸವಾರರ ಹಸಿರು ಕುದುರೆಗಳು ಪ್ರತಿನಿಧಿಸಿದ್ದರೆ, ಅವುಗಳಲ್ಲಿ ಒಂದು ವಲನ್ ಅವನದ್ದು, ಮತ್ತೊಂದು ಇಂದ್ರರಾಜನದ್ದು.

**ಬಾಬೋ ಇಂದ್ರ:** ಬಾಬೋ ಇಂಡ್, ಇಂದ್ರಜ ಅಥವಾ ಇಂದಿರಾಜ್ ಎಂಬ ವಿವಿಧ ಹೆಸರುಗಳಿಂದ ಇಂದ್ರನನ್ನು ಕರೆಯಲಾಗುತ್ತದೆ. ಇಂದ್ರಜ ತುಂಬ ಮಹತ್ವವುಳ್ಳ ದೇವರು. ಇಂದ್ರಜ ಮತ್ತು ಪಿಥೋರೋ ನಡುವೆ ಮಿತ್ವೊಂದರ ಕೊಂಡಿಯಿದೆ. ಇಂದ್ರಜ; ಸೃಷ್ಟಿ ಪುರಾಣ ಮತ್ತು ಪಿಥೋರೋ ಕಥೆಯ ಸಂಪರ್ಕದಲ್ಲಿ ಅತ್ಯಂತ ಪ್ರಮುಖ ದೇವರಾಗಿದ್ದಾನೆ. ಅವರು ಕೃಷಿ ಕಲ್ಯಾಣದ ಜೊತೆಗೆ ಸಂಬಂಧವನ್ನು ಹೊಂದಿದ್ದಾರೆ. ಅವನು ಪಿಥೋರೋನ ತಾಯಿಯ ಅಣ್ಣ. ಪಿಥೋರೋನಿಗೆ ಸೋದರಮಾವನಾಗಿದ್ದಾನೆ. ಒಂದು ಪುರಾಣದ ಪ್ರಕಾರ ಇಂದ್ರಜ 'ಡುಡೋ ರಾವಲ್'ನ ಮಗನಾಗಿದ್ದಾನೆ. ಅವನು ದೋಷಪೂರಿತ ತಲೆಯಿಂದ ಹುಟ್ಟಿದ ಕಾರಣದಿಂದ ಅವನನ್ನು ಪೋಷಕರು ಭೂಗತ ಸಮಾಧಿ ಮಾಡಿದರು. ಅವನು ಅಲ್ಲಿಯೇ ಹಲವಾರು ಸಸ್ಯಗಳ ಹಾಲನ್ನು ಹೀರಿಕೊಳ್ಳುವುದರ ಮೂಲಕ ಬದುಕುಳಿದನು. ಒಂದು ದಿನ ಪಾಟರ್ ಮಹಿಳೆಯು ಅವನನ್ನು ಆ ಭೂಗತ ಸಮಾಧಿಯಿಂದ ಹೊರತೆಗೆದು ಮನೆಗೆ ಕರೆತಂದಳು. ಅವನ ಪೂಜೆಯ ಕಾರಣದಿಂದಾಗಿ ಈ ಭೂಮಿಗೆ ಫಲವತ್ತತೆಯು ಬಂದಿತು. ಅವರ ಧಾರ್ಮಿಕ ಸಮಾಲೋಚನೆಯ ಕ್ರಿಯೆಯಲ್ಲಿ ಕಲಾವಲ್ ಮತ್ತು ಕ್ಯಾಡೋ ಮರಗಳ ಒಂಬತ್ತು ಶಾಖೆಗಳನ್ನು ಕತ್ತರಿಸುವುದು ಮತ್ತು ಮನೆಯ ಮುಂದೆ ಮರುಬಳಕೆ ಮಾಡುವುದು ಮತ್ತು ದೇವರಿಗೆ ಅರ್ಪಣೆ ಮಾಡಿ ಆರಾಧಿಸುವುದನ್ನು ಒಳಗೊಂಡಿರುತ್ತದೆ. ಅವನು ಯುವಕರಿಂದ ಪೂಜೆಗೆ ಹೆಚ್ಚು ಒಳಗಾಗುತ್ತಾನೆ.

ಮತ್ತೊಂದು ಪುರಾಣದ ಪ್ರಕಾರ, ಪಿಥೋರಾ ಮತ್ತು ಇಂದ್ರಜರು ಒಬ್ಬಳು ಹಳೆಯ ವಿಧವೆಯ ಮನೆಯಲ್ಲಿ ನೆಲೆಸಿದರು. ಏಕೆಂದರೆ ಆಕೆಯ ಬಳಿಯಲ್ಲಿದ್ದ ಆಹಾರವನ್ನು ತಿಂದುದಕ್ಕಾಗಿ ಅವಳು ಅವರನ್ನು ದೋಷಿಸಿದ್ದಳು. ಅಂದಿನಿಂದ ಆ ವಿಧವೆಯು ತೊಂದರೆ ಕೊಡಲು ಶುರುಮಾಡಿದಳು. ಇಂದ್ರಜ ಮತ್ತು ಪಿಥೋರೋನು ಆ ವಿಧವೆಯಿಂದ ತೊಂದರೆಗೆ ಒಳಗಾಗುತ್ತಿದ್ದನ್ನು ಬಡವಾ ಕಂಡುಹಿಡಿದನು. ಆಕೆಯಿಂದ ಆಗುತ್ತಿದ್ದ ತೊಂದರೆಗಳಿಂದ ದೇವತೆಗಳಿಗೆ ಪರಿಹಾರ ಮತ್ತು ಉಪಶಮನ ಮಾಡಲು ಪ್ರಯತ್ನಿಸಲಾಯಿತು. ಇದರಿಂದ ಬಡುವಾನಿಗೆ ಪಿಥೋರಾದಲ್ಲಿ ಪೂಜೆಯ ಪ್ರಮುಖ ಸ್ಥಾನವು ದೊರೆತಿದೆ. ಇಂದ್ರಜನಿಗೆ ಹಲವಾರು ಜನ ಸಹೋದರ–ಸಹೋದರಿಯರಿದ್ದಾರೆ. ಅಖಾಡೋ, ಖೇತರ್ಪಲೋ, ಹಮೋನಿಯೋ ಮತ್ತು ದಹಾರೋ ಎಂಬ ಸಹೋದರರು. ಕಾಲಿಕೋಯಲ್, ರಾಣಿ ಕಾಜೋಲ್ ಮತ್ತು ವಲನ್ ಎನ್ನುವ ಸಹೋದರಿಯರು ಇದ್ದಾರೆ.

ಪಿಥೋರಾ ಚಿತ್ರದಲ್ಲಿ ಬಾಬೋ ಇಂದ್ರನ ಯಾವುದೇ ಮಾನವಜನ್ಯ ಅಥವಾ ಮಾನಸಿಕ ಚಿತ್ರಣವಿಲ್ಲ. ಇಂದ್ರನನ್ನು ಪ್ರತಿನಿಧಿಸುವ ಕುದುರೆ ಸವಾರನಿಲ್ಲದೆ ಇರುವ ಹಸಿರು ಬಣ್ಣದ ಚಿತ್ರವಾಗಿದೆ. ಒಂದು ಪುರಾಣದ ಪ್ರಕಾರ ಅವನು ಹಸಿರು ಬಣ್ಣದ ಪೇಟವನ್ನು ಧರಿಸಿರುವ

ರಾಜನೆಂದು ಹೇಳುವುದಿದೆ. ಅಲ್ಲದೆ, ಕಡಿಮೆ ಉಡುಪನ್ನು ಧರಿಸಿದ ಹಾಗೂ ಕೈಯಲ್ಲಿ ಸಂಗೀತ ವಾದ್ಯವನ್ನು ಹೊಂದಿದ್ದನೆಂದು ತಿಳಿಸುತ್ತದೆ. ಪಿಥೋರೋದ ಕೆಳಭಾಗದಲ್ಲಿ ಚಿತ್ರಿಸಿದ ಆನೆಯ ಚಿತ್ರವನ್ನು ಸಾಮಾನ್ಯವಾಗಿ ರಾಜಾ ಬೋಜ ಎಂದು ವಿವರಿಸಲಾಗುತ್ತದೆ. ಆದರೆ ಕೆಲವೊಮ್ಮೆ ಅದು ಇಂದ್ರನನ್ನು ಪ್ರತಿನಿಧಿಸುತ್ತದೆ.

**ಡಂಡಿವಾಲೋ:** ಮದುವೆಯ ಮೆರವಣಿಗೆಯಲ್ಲಿ ಕಂಡುಬರುವ ಮೊದಲ ಕುದುರೆಯು ಇದಾಗಿದೆ. ಈ ಕುದುರೆಯ ಕಾರ್ಯವು ಧ್ವಜವನ್ನು ಮುನ್ನಡೆಸಿಕೊಂಡು ಹೋಗುವುದಾಗಿದೆ. ಈ ಡಂಡಿವಾಲೋನು ಪ್ರಮುಖವಾಗಿ ಮೆರವಣಿಗೆಗೆ ಕಾರಣವಾಗಿರುತ್ತಾನೆ. ಕೆಲವು ಪ್ರದೇಶಗಳಲ್ಲಿ ಅವನ ಚಿತ್ರವನ್ನು ಪಿಥೋರಾ ವರ್ಣಚಿತ್ರದಲ್ಲಿ ಕಾಣಲಾಗುವುದಿಲ್ಲ.

**ನಂಗರಿ–ನಿಸಾನಿ:** ಇದು ಆ ಮೆರವಣಿಗೆಯಲ್ಲಿ ಎರಡನೆಯ ಕುದುರೆಯಾಗಿದೆ. ಇದು ಡ್ರಮ್ಮರ್ ವಾದ್ಯವನ್ನು ನುಡಿಸುವುದಾಗಿದೆ. ಸಾಮಾನ್ಯವಾಗಿ ವರ್ಣಚಿತ್ರದಲ್ಲಿ ಡ್ರಮ್ಮಗಳನ್ನು ಕುದುರೆಯ ಕುತ್ತಿಗೆಗೆ ನೇತುಹಾಕಿ ಮತ್ತು ಉದ್ದನೆಯ ಕೋಲು ತುಂಡುಗಳಿಂದ ಬಡಿಯಲಾಗುತ್ತದೆ. ಆದರೆ ಕೆಲವು ಪ್ರದೇಶಗಳಲ್ಲಿ ಕುದುರೆಯ ಮೇಲೆ ಇಡದೇ, ದೊಡ್ಡದಾದ ಡ್ರಮ್ಮಗಳನ್ನು ಹೋರಿಗಳ ಮೇಲೆ ಇಟ್ಟು ಬಡಿಯುವ ದೃಶ್ಯಗಳು ಕಾಣುತ್ತವೆ.

**ಸೂರ್ಯ ಮತ್ತು ಚಂದ್ರ:** ರಾಥವಾ ಸಮುದಾಯದಲ್ಲಿನ ಸೃಷ್ಟಿ ಪುರಾಣಗಳಲ್ಲಿ ಸೂರ್ಯ ಮತ್ತು ಚಂದ್ರ ಗಮನಾರ್ಹ ಪಾತ್ರವನ್ನು ವಹಿಸುತ್ತಾರೆ. ಅವುಗಳನ್ನು ರಾಮ–ಲಕ್ಷ್ಮಣನಿಗೆ ಅವರು ಹೋಲಿಸುತ್ತಾರೆ. ಭೂಲೋಕದಲ್ಲಿ ವಸ್ತುಗಳನ್ನು ಸೃಷ್ಟಿಸುವ ಮೊದಲು ರಾಜಾ ರಾವಣ್ ಮತ್ತು ರಾಜಾಬೋಜನಂತಹ ರಾಜರು ಸ್ವರ್ಗದಲ್ಲಿ ಅಸ್ತಿತ್ವದಲ್ಲಿದ್ದರು. ಪಿಥೋರಾನ ವಧುವಾಗಿರುವ ಪಿಥೋರಿಯು ಸೂರ್ಯ ಮತ್ತು ಚಂದ್ರನ ಸೊಸೆಯಾಗಿದ್ದಾಳೆ.

ಪಿಥೋರಾ ವರ್ಣಚಿತ್ರದ ಚೌಕಟ್ಟಿನ ಮೇಲ್ಭಾಗದಲ್ಲಿ ಎಡಕ್ಕೆ ಸೂರ್ಯ–ಚಂದ್ರರನ್ನು ಚಿತ್ರಿಸಲಾಗುತ್ತದೆ. ಗಾಂತಿಯಾ ಹಳ್ಳಿಯಂತಹ ಕೆಲವು ಕಡೆ ಸೂರ್ಯನನ್ನು ಮೇಲ್ಭಾಗದ ಎಡಕ್ಕೆ, ಚಂದ್ರನನ್ನು ಬಲಕ್ಕೆ ಚಿತ್ರಿಸಲಾಗುತ್ತದೆ. ಸೂರ್ಯನನ್ನು ವೃತ್ತಾಕಾರದಿಂದ ಚಿತ್ರಿಸಿದ್ದು ಮತ್ತು ನೇರ ಕಿರಣಗಳನ್ನು ಹೊರಸೂಸುವಂತೆ ಚಿತ್ರಿಸಲಾಗಿದೆ. ಕೆಲವು ಕಡೆ ಸೂರ್ಯನನ್ನು ನಾಲ್ಕು ಭಾಗಗಳನ್ನಾಗಿ ವಿಭಜಿಸಿ ಪ್ರತಿಯೊಂದು ಭಾಗಕ್ಕೂ ಬೇರೆ ಬೇರೆ ಬಣ್ಣವನ್ನು ಲೇಪಿಸಲಾಗಿದೆ. ಚಂದ್ರನನ್ನು ಸಾಮಾನ್ಯವಾಗಿ ಅರ್ಧ ರೂಪದಲ್ಲಿ ಚಿತ್ರಿಸಿ ತೋರಿಸಲಾಗುತ್ತದೆ.

**ಎಕ್ಟಾಂಗ್ಯೊ–ಸುಪಡ್‌ಕನ್ನೊ:** ಎಕ್ಟಾಂಗ್ಯೊ ಎಂಬುವುದರ ಅರ್ಥ 'ಒಂಟಿ ಕಾಲಿನ ಮನುಷ್ಯ' ಮತ್ತು ಸೂಪಡ್‌ಕನ್ನೊ ಒಬ್ಬ ಅಭಿಮಾನಿ ಮನುಷ್ಯ ಅಥವಾ ಹಿತ್ತಾಳೆ ಕಿವಿಯವನಾಗಿದ್ದಾನೆ. ಈ ಎರಡು ಪಾತ್ರಗಳನ್ನು ಸಾಮಾನ್ಯವಾಗಿ ಚೌಕಟ್ಟಿನ ಮೇಲಿನ ಎಡದ ಮೂಲೆಯಲ್ಲಿ ಚಿತ್ರಿಸಲಾಗುತ್ತದೆ.

ಇದರ ಮೇಲ್ಭಾಗದಲ್ಲಿಯೇ ಸೂರ್ಯ-ಚಂದ್ರನ ಚಿತ್ರಗಳಿವೆ. ಅತಿ ಹೆಚ್ಚಿನ ಸಂದರ್ಭದಲ್ಲಿ ಅವುಗಳ ದೇಹಕ್ಕೆ ಕೆಂಪು ಬಣ್ಣವನ್ನು ತುಂಬಲಾಗುತ್ತದೆ. ನೀಲಿಯಿಂದ ಬಾಹ್ಯರೇಖೆಯನ್ನು ಎಳೆಯಲಾಗುತ್ತದೆ. ಮತ್ತೆ ಕೆಲವು ಪ್ರದೇಶಗಳಲ್ಲಿ ಹಸಿರು ಮತ್ತು ಹಳದಿಯಿಂದಲೂ ಬಿಡಿಸುತ್ತಾರೆ.

**ಹಾಲ್ಭೋನ್:** ಹಾಲ್ಭೋನ್ ಎಂದರೆ ಊಸರವಳ್ಳಿ ಎಂದರ್ಥ. ಈ ಜೀವಿಯನ್ನು ಸಾಮಾನ್ಯವಾಗಿ ಹಸಿರು ಬಣ್ಣದಲ್ಲಿ ಬಿಡಿಸುತ್ತಾರೆ. ಊಸರವಳ್ಳಿಯು ಸೌತೆಕಾಯಿಯ ಬಳ್ಳಿಯನ್ನು ಏರುತ್ತದೆ ಮತ್ತು ಹೊಲಗಳಲ್ಲಿ ತೆವಳುತ್ತ ಪ್ರವೇಶಿಸುತ್ತದೆಂಬ ನಂಬಿಕೆಯಿದೆ. ಇದು ಹಸಿರು ಬಣ್ಣದಲ್ಲಿ ಗೋಚರಿಸುವುದರಿಂದ ಅತಿ ಹೆಚ್ಚು ಕೃಷಿ ಇಳುವರಿಯ ಸಂಕೇತವಾಗಿದೆ.



**ಒಂಟೆ:** ಒಂಟೆಗೆ ಸಂಬಂಧಿಸಿದ ದೇವರನ್ನು 'ಉಟ್ಯೆರಾ' ಅಥವಾ 'ಒಂಟೆರಾಜ' ಎಂದು ಕರೆಯಲಾಗುತ್ತದೆ. ಅವನನ್ನು ಹದಾರ್ಭೋ ಬಾಮನ್ ಜೊತೆಗೆ ಬಡುವಾನಿಂದ ಗುರುತಿಸಲಾಗಿದೆ. ಚುಲಿ ಮತ್ತು ಗೊಡ್ಲಿಯ ಪ್ರದೇಶದ ಬಡುವಾನು ಹೇಳುವಂತೆ ಈ ಒಂಟೆಯು ರೆವಲೊ ರಂಬರಿಯನ್ನು ಪ್ರತಿನಿಧಿಸುತ್ತದೆ. ಗುಜರಾತ ಮತ್ತು ರಾಜಸ್ತಾನದ ಕೆಲವು ಸಮುದಾಯಗಳು ಒಂಟೆಗಳನ್ನು ಲಾಲನೆ-ಪಾಲನೆ ಮಾಡುತ್ತವೆ.

ಚುಲಿ, ಗೊಡ್ಲಿ ಮತ್ತು ಇತರ ಹಲವು ಹಳ್ಳಿಗಳಲ್ಲಿ ಕಂಡುಬರುವ ವರ್ಣಚಿತ್ರದಲ್ಲಿ ಚಿಕ್ಕದಾದ ಒಂದು ನರ್ಸರಿ ಮಾಡುವ ಹಳದಿ ಬಣ್ಣದ ಒಂಟೆಯನ್ನು ತೋರಿಸಲಾಗಿದೆ. ಗಾಂತಿಯಾ ಹಳ್ಳಿಯಲ್ಲಿ ಒಂಟೆಯ ಬಣ್ಣವು ಕೇಸರಿಯುಕ್ತವಾಗಿತ್ತು.

**ಗಣೇಶ:** ಅಶ್ವಾರೋಹಿಯಾಗಿ ಕೆಳಭಾಗದ ಬಲಮೂಲೆಯಲ್ಲಿ ಗಣೇಶನ ಚಿತ್ರವನ್ನು ತೆಗೆಯಲಾಗಿದೆ. ಪಿಥೋರಾ ಚಿತ್ರಗಳಲ್ಲಿಯೇ ಚಿತ್ರಕಾರನು ಮೊದಲು ತೆಗೆಯುವ ಚಿತ್ರ ಇದಾಗಿದೆ. ಈ ಗಣೇಶನಿಗೆ ರಾಥವಾದವರು ಹಿಂದೂ ಗಣೇಶನಿಗೆ ಆನೆಯ ತಲೆಯನ್ನು ಹಾಕಿರುವಂತೆ ಇವರ ಗಣೇಶನಿಗೆ ಆನೆ ತಲೆಯು ಇರುವುದಿಲ್ಲ. ಈ ಗಣೇಶನಿಗೆ ಹಿಂದೂ ಧರ್ಮದ ಗಣೇಶನಿಗಿರುವಂತೆ ಯಾವುದೇ ಪುರಾಣವಿರುವುದಿಲ್ಲ. ರಾಥವಾದ ಗಣೇಶನು ಕುದುರೆಯ ಮೇಲೆ ಸವಾರಿ ಮಾಡುವ ಮಾನವಕುಲದ ದೇವತೆಯಾಗಿದೆ. ಜೊತೆಗೆ ಹುಕ್ಕಾ ಧೂಮಪಾನವನ್ನು ಮಾಡುವವನಾಗಿದ್ದಾನೆ. ಸಾರ್ವತ್ರಿಕವಾಗಿ ಮತ್ತು ಪ್ರತಿಮಾತ್ಮಕವಾಗಿ



ರಾಥವಾದ ಚಿತ್ರಕಲೆಯಲ್ಲಿ ಅದು ಒಂದೇ ರೀತಿಯಾಗಿ ಕಂಡುಬರುತ್ತದೆ. ಕೆಲವು ಹಳ್ಳಿಗಳ ಪಿಥೋರಾದಲ್ಲಿ ಗಣೇಶ ಕುದುರೆಯು ಪ್ರಾಣಿಗಳೊಂದಿಗೆ ಲೈಂಗಿಕ ಸಂಭೋಗ ಹೊಂದಿರುವಂತೆ ತೋರಿಸಲಾಗಿದೆ. ಹಿಂದೂ ದೇವರು ಸಾಂಪ್ರದಾಯಿಕವಾಗಿ ಇಲಿಯನ್ನು ವಾಹನವಾಗಿ ಹೊಂದಿರುವ ಕಾರಣದಿಂದಾಗಿ ಕೆಲವು ಶಾಸ್ತ್ರಜ್ಞರು ಪಿಥೋರಾದಲ್ಲಿ ಕಂಡುಬರುವ ಇಲಿಯನ್ನು ಗಣೇಶನ ಇಲಿ ಎಂಬುದಾಗಿ ತಪ್ಪಾಗಿ ಗ್ರಹಿಸಿದ್ದಾರೆ. ಚುಲಿ ಹಳ್ಳಿಯಲ್ಲಿಯೂ ಗಾಂತಿಯಾ ಹಳ್ಳಿಯಲ್ಲಿ ಗ್ರಹಿಸಿರುವಂತೆಯೇ ಗ್ರಹಿಸಿದ್ದಾರೆ. ರಾಥವಾ ಗಣೇಶನಿಗೂ ಮತ್ತು ಹಿಂದೂ ದೇವತೆಯ ಗಣೇಶನಿಗೂ ಯಾವುದೇ ರೀತಿಯಾದ ಸಂಬಂಧವಿದೆಯೆಂದು ತೋರುತ್ತಿಲ್ಲ. ಆನೆಯ ದೇವರು, ಅಡೆತಡೆಗಳನ್ನು ನಿವಾರಿಸುವವನು ಎಂಬ ತಪ್ಪು ಕಲ್ಪನೆಯ ಅಭಿಪ್ರಾಯವಿದೆ. ಯಾಕೆಂದರೆ ಇಲ್ಲಿಯ ಗಣಪತಿಯು ಆನೆಯ ತಲೆಯನ್ನು ಹೊಂದಿಲ್ಲ ಮತ್ತು ವಿಘ್ನೇಶ್ವರನಾಗಿ ಅಡೆತಡೆಗಳನ್ನು ನಿವಾರಿಸುವನೆಂದು ನಂಬಿ ಪೂಜಿಸಲಾಗುವುದಿಲ್ಲ.

**ರಾಜಾ ರಾವಣ್**: ರಾಥವಾದವರು 'ಬಾರ್ ಮ್ಯಾಥನೋ ಧಣಿ' ಎಂದು ರಾವಣನಿಗೆ ಕರೆಯುತ್ತಾರೆ. ಇವನಿಗೆ ಹನ್ನೆರಡು ತಲೆಗಳಿರುತ್ತವೆ. ಅವನ ಹೆಸರು ರಾಮಾಯಣದ ಲಂಕಾದ ರಾಕ್ಷಸ ರಾಜನಂತೆಯೇ ಮತ್ತು ಅವನಂತೆಯೇ ಅನೇಕ ತಲೆಗಳನ್ನು ಹೊಂದಿರುವ ಚಿತ್ರವಿದಾಗಿದೆ. ಆದರೆ ಇವರಿಬ್ಬರ ನಡುವೆ ಸಂಪರ್ಕವಿಲ್ಲವೆಂದು ತೋರುತ್ತದೆ. ರಾಥವಾ ಪುರಾಣವು ರಾಮಾಯಣದ ಕಥೆಯ ಬಗ್ಗೆ ಯಾವ ಮಸುಕಾದ ಉಲ್ಲೇಖವನ್ನು ಹೊಂದಿಲ್ಲ. ಅವರು ಹೊರಗಿನ ಕಥೆಯನ್ನು ಸಹ ತಿಳಿದಿರುವುದಿಲ್ಲ.



ರಾಥವಾ ಜನರು ಹೇಳುವ ಪ್ರಕಾರ ಪ್ರಪಂಚ ಸೃಷ್ಟಿಯ ಸಮಯದಲ್ಲಿ ರಾಜಾ ರಾವಣನನ್ನು ಸೃಷ್ಟಿಸಿರಬಹುದೆಂಬುವುದನ್ನು ಹೇಳುತ್ತಾರೆ. ರಾವಣನಿಗೆ ಹದಿನಾರು ರಾಣಿಯರನ್ನು ಹೊಂದಿದ್ದನು ಎಂದು ಅವರ ಬುಡಕಟ್ಟು ಹಾಡುಗಳಲ್ಲಿ ವರ್ಣಿಸಲಾಗಿದೆ.

ಪಿಥೋರಾ ವರ್ಣಚಿತ್ರದಲ್ಲಿ ರಾಜಾ ರಾವಣನ ಬಗ್ಗೆ ಎರಡು ಪ್ರಮುಖ ವಿಧಗಳು ಕಂಡುಬರುತ್ತವೆ. ಒಂದು ವಿಧದಲ್ಲಿ ಹೇಳುವುದಾದರೆ, ಅವನು ಒಂದು ಮುಖ್ಯವಾದ ಮಾನವನ ತಲೆಯನ್ನು ಹೊಂದಿ ಆ ತಲೆಗೆ ಬೆಂಕಿ ಕಡ್ಡಿಗಳಂತೆ ಕಾಣುವ ಹನ್ನೊಂದು ತಲೆಗಳನ್ನು ನಿರ್ಮಿಸುತ್ತಾರೆ. ಪ್ರತಿಮಾತ್ಮಕವಾಗಿ ಗಮನಿಸಿ ನೋಡಿದಾಗ ಹನ್ನೊಂದು ಮತ್ತು ಮುಖ್ಯ ತಲೆ ಸೇರಿ ಹನ್ನೆರಡು ತಲೆಗಳ ಚಿತ್ರವನ್ನು ಬಿಡಿಸುತ್ತಾರೆ. ಮತ್ತೊಂದು ವಿಧದಲ್ಲಿ ಹೇಳುವುದಾದರೆ, ಅಲ್ಲಿ ಯಾವುದೇ ಮಾನವನ ತಲೆಯಿರುವುದಿಲ್ಲ. ಆದರೆ ಹನ್ನೆರಡು ಬೆಂಕಿಕಡ್ಡಿಗಳೋಪಾದಿಯಲ್ಲಿರುವ ಹನ್ನೆರಡು ತಲೆಗಳನ್ನು ಮುಂಡಕ್ಕೆ ಸಾಲಾಗಿ ಇರಿಸಲಾಗುತ್ತದೆ. ಈ ಎರಡೂ ರೀತಿಯಲ್ಲೂ, ರಾಜಾ ರಾವಣನು ತನ್ನ ಕೈಗಳನ್ನು ಮೇಲಕ್ಕೆತ್ತಿದ್ದಾನೆ. ತನ್ನ ಬಹು ಖಡ್ಗಗಳನ್ನು ತನ್ನ ಭುಜಗಳಲ್ಲಿ ನೇತುಹಾಕಿಕೊಂಡಿದ್ದಾನೆ. ಅಲ್ಲದೇ ಮೊಣಕೈ ಮತ್ತು ಸೊಂಟದಲ್ಲಿಯೂ ಕತ್ತಿಗಳನ್ನು ಇಟ್ಟುಕೊಂಡಿರುವಂತೆ ಚಿತ್ರದಲ್ಲಿ ತೋರಿಸಲಾಗಿದೆ. ಕೆಲವೊಂದು ಅಪರೂಪಕ್ಕೆಂಬಂತೆ ಎರಡು ಹಾವುಗಳನ್ನು ಕೈಯಲ್ಲಿ ಹಿಡಿದಿರುವಂತೆ ಚಿತ್ರಿಸಲಾಗಿದೆ.

**ರಾಜಾ ಭೋಜ:** ಸಾಮಾನ್ಯವಾಗಿ ಉತ್ತರ ಮತ್ತು ಕೇಂದ್ರಿಯ ಭಾರತೀಯ ಜಾನಪದದಲ್ಲಿ ರಾಜಾಭೋಜ ಪ್ರಮುಖ ಪಾತ್ರವೆಂದು ತೋರುತ್ತದೆ. ಐತಿಹಾಸಿಕವಾಗಿ ಹನ್ನೊಂದನೆಯ ಶತಮಾನದಲ್ಲಿ ಧಾರ್ ಪ್ರದೇಶವನ್ನು ಆಳಿದ ಭೋಜ್ ಎಂಬ ರಜಪೂತ ರಾಜನಿದ್ದನು. ಬಿಲ್‌ರಿಗೆ ಈ ಐತಿಹಾಸಿಕ ಅಥವಾ ಪೌರಾಣಿಕ ರಾಜನೊಂದಿಗೆ ಯಾವುದೇ ಸಂಪರ್ಕವಿರಬಹುದು ಅಥವಾ ಇಲ್ಲದೆ ಇರಬಹುದು. ರಾಥವಾದ ರಾಜಾಭೋಜನು ತಮ್ಮದೇ ಆದ ರಾಜನ ಗೌರವಾನ್ವಿತ ವ್ಯಕ್ತಿಯಾಗಿ ತೋರುತ್ತಾನೆ. ಆದ್ದರಿಂದ ಛೋಟಾ–ಉದಯಪುರ್ ಮತ್ತು ದೇವಗಾರ್ ಬರಿಯಾ ಪ್ರದೇಶಗಳ ರಾಥವಾಗಳು ತಮ್ಮ ರಾಜ್ಯಗಳ ರಾಜರನ್ನು ರಾಜಾಭೋಜ್ ಎಂದು



ಉಲ್ಲೇಖಿಸುತ್ತಾರೆ. ದಂತಕಥೆಯ ಸೃಷ್ಟಿಯೊಳಗೆ ರಾಜಾಭೋಜನು ಅವರಲ್ಲಿ ಕಾಣಿಸಿಕೊಳ್ಳಲು ಪ್ರಾರಂಭಿಸಿದನು. ಇಲ್ಲಿ ಭೋಜ ಬಹುವಚನ ರೂಪವು ಈ ರಾಜ್ಯಗಳ ರಾಜರ ಸಾರ್ವತ್ರಿಕ ಹೆಸರಾಗಿರುವುದನ್ನು ಸೂಚಿಸುತ್ತದೆ. ಗಾಂತಿಯಾ ಭಾಗದ ಬಡುವಾನು ಹೇಳಿದಂತೆ ರಾಜವಾಡು ಎಂಬುವುದು ಕುಟುಂಬದ ಯಜಮಾನನ ಹೆಸರಾಗಿದೆ. ಅವನನ್ನು ರಾಜ ಎಂದು ಸಂಬೋಧಿಸಲಾಗುವುದು ಎಂಬ ಅಭಿಪ್ರಾಯವನ್ನು ಹೇಳುತ್ತಾರೆ.

ಸೃಷ್ಟಿ ದಂತಕಥೆಗಳಲ್ಲಿ ರಾಜಾಭೋಜ ಪ್ರಮುಖ ಪಾತ್ರ ವಹಿಸಿದ್ದಾನೆ. ಅವನನ್ನು ರಾಥವಾರು ಜನಸಂಖ್ಯೆ ಸೃಷ್ಟಿಯಾದ ನಂತರ ತಕ್ಷಣವೇ ರಚಿಸಿದ್ದಾರೆಂದು ತೋರುತ್ತದೆ. ಅವನಿಂದ ಭೂಮಿಯನ್ನು ಸಂರಕ್ಷಿಸಿ, ಹಳ್ಳಿಗಳನ್ನು ಮತ್ತು ಪಟ್ಟಣಗಳನ್ನು ಜನಸಂಖ್ಯಾ ಆಧಾರಿತವಾಗಿ ಭೂಪ್ರದೇಶಗಳನ್ನು ಹಂಚಿ ಆಶ್ರಯ ಪಡೆದುಕೊಂಡರು. ಒಂದು ಕುತೂಹಲಕಾರಿಯಾದ ಅಂಶವೇನೆಂದರೆ, ಒಂದು ಬುಡಕಟ್ಟು ಹಾಡಿನಲ್ಲಿ ಇದನ್ನೆಲ್ಲವನ್ನು ರಾಜ ಭೋಜ ಸೃಷ್ಟಿಸಿದ್ದಾನೆಂದು ಉಲ್ಲೇಖಿತಗೊಂಡಿದೆ.

ಪಿಥೋರಾ ವರ್ಣಚಿತ್ರದಲ್ಲಿ ಒಂದು ಆನೆಯ ಚಿತ್ರದೊಂದಿಗೆ ಹೌಡಾದ ಚಿತ್ರಣವಿದೆ. ಸಾಮಾನ್ಯವಾಗಿ ಇದನ್ನು ಕಡುನೀಲಿ ಬಣ್ಣದಲ್ಲಿ ಚಿತ್ರ ಚೌಕಟ್ಟಿನ ಕೆಳಭಾಗದ ಬಲಪಕ್ಕದಲ್ಲಿ ಚಿತ್ರಿಸುತ್ತಾರೆ. ಇದನ್ನು ರಾಜಾಭೋಜನ ಆನೆ, ರಾಜಾಭೋಜನನ ಹಾತಿ ಎಂದು ವರ್ಣಿಸಲಾಗಿದೆ. ಹೌಡಾದೊಳಗೆ ಇಬ್ಬರು ಸಾಮಾನ್ಯ ವ್ಯಕ್ತಿಗಳು ಹುಕ್ಕಾವನ್ನು ಧೂಮಪಾನ ಮಾಡುತ್ತಿದ್ದಾರೆ. ಇವುಗಳನ್ನು ಕೆಲವೊಮ್ಮೆ ಪಿಥೋರೋ ಮತ್ತು ಇಂದ್ರದೇವ ಎಳೆಯಬಹುದೆಂದು ವಿವರಿಸಲಾಗಿದೆ. ಹೆಚ್ಚಿನ ವರ್ಣಚಿತ್ರಗಳಲ್ಲಿ, ಕೋತಿಗಳು ಹೌಡಾಕ್ಕೆ ಕಟ್ಟಿದ ಹಗ್ಗದ ಮೂಲಕ ಆನೆಯ ಮೇಲೆರುವಂತೆ ತೋರಿಸಲಾಗಿದೆ. ಅಲ್ಲದೆ ಬಾಲವನ್ನು ಎಳೆಯುವ ಹಾಗೇ ಜೋತುಬಿದ್ದಿರುವಂತೆ ಚಿತ್ರಿಸಲಾಗಿದೆ. ಈ ಹಗ್ಗದ ಮೂಲಕ ರಾಜಾ ಭೋಜನು ಮತ್ತು ಕೋತಿಗಳು ಸ್ವರ್ಗಕ್ಕೆ ಏರುವ ರೀತಿಯಲ್ಲಿ ರಚಿಸಿರಬಹುದೆಂದು ತಿಳಿಯಲು ಸಾಧ್ಯವಿದೆ. ಆನೆಯ ನಾಭಿಯ ನಾಳದ ಕೆಳಗೆ ಒಂದು ಸುಳಿಯಾಕಾರದ ಹಾವಿನ ಚಿತ್ರವನ್ನು ತೋರಿಸಲಾಗಿದೆ.

**ಅಭ್ ಕಾಂಬಿ:** ಅಭ್ ಕಾಂಬಿ ಒಬ್ಬ 'ಆಕಾಶ ರೈತ'. ರಾಥವಾ ಪ್ರಕಾರ ಇವನೇ ಮೊದಲ ರೈತನಾಗಿದ್ದಾನೆ. ಅವನು ಮತ್ತು ಅವನ ಹೆಂಡತಿ (ಧನಿ-ಧನಿಯಾನಿ) ರಾಥವಾ ಸೃಷ್ಟಿ ಪುರಾಣದ ಪ್ರಕಾರ ಮೊದಲ ದಂಪತಿಗಳಾಗಿದ್ದಾರೆ. ಪಿಥೋರೋ ಮತ್ತು ಇಂದ್ರನ ಮೊದಲ ಆಚರಣೆಗಳು ಕೃಷಿ ಮತ್ತು ಜಾನುವಾರುಗಳ ಸುಧಾರಣೆಯಾಗಿದೆ. ಈ ಸುಧಾರಣಾ ಕ್ರಮವು ಇತರ ಜನರಿಗೆ ದಾರಿ ತೋರಿಸುತ್ತದೆ. ರಾಥವಾರ ಕಸಬುಗಳಲ್ಲಿ ಕೃಷಿ ಪ್ರಧಾನವಾಗಿದೆ. ಏಕೆಂದರೆ ಅವರ ಚಿತ್ರಗಳಲ್ಲಿ ಎತ್ತು, ರೈತ, ಹೊಲ, ಬೆಳೆ, ಧಾನ್ಯಗಳ ಚಿತ್ರ ಅಪಾರವಾಗಿ ಬಂದಿದೆ. ಚಿತ್ರಗಳ ಸುತ್ತಲು ಇಡುವ ಬೊಟ್ಟುಗಳು ಧಾನ್ಯಗಳ ಸಂಕೇತವೇ ಆಗಿದೆ.

ವರ್ಣಚಿತ್ರದಲ್ಲಿ ಸಾಮಾನ್ಯವಾಗಿ ಅಭು ಕಾಂಬಿಯನ್ನು ಚೌಕಟ್ಟಿನ ಕೆಳಭಾಗದಲ್ಲಿನ ಎಡಕ್ಕೆ ಮೂಲೆಯಲ್ಲಿ ಚಿತ್ರಿಸಲಾಗಿದೆ. ಆ ಚಿತ್ರದಲ್ಲಿ ರೈತ ಭೂಮಿಯನ್ನು ಉಳುಮೆ ಮಾಡುತ್ತಿರುವುದು. ಎರಡು ಜೋಡಿ ಎತ್ತುಗಳು ಉಳುಮೆಗೆ ಪೂರಕವಾಗಿರುವುದು ಕಂಡು ಬರುತ್ತದೆ. ಸಾಮಾನ್ಯವಾಗಿ ಎತ್ತುಗಳನ್ನು ಕೆಂಪು ಬಣ್ಣದಲ್ಲಿ ಬಿಡಿಸಿರುತ್ತಾರೆ. ಭತರಿ ಎನ್ನುವ ಆ ರೈತನ ಹೆಂಡತಿ ಭತು (ಬುತ್ತಿ)ವನ್ನು ಹೊಲದಲ್ಲಿ ಕೆಲಸ ಮಾಡುತ್ತಿರುವ ಗಂಡನಿಗೆ ತಲೆಯ ಮೇಲೆ ಹೊತ್ತು ತರುತ್ತಾಳೆ. ಇನ್ನು ಕೆಲವು ಕಡೆಯ ಚಿತ್ರಗಳಲ್ಲಿ ಬುತ್ತಿ ಹೊತ್ತು ತರುತ್ತಿರುವ ಭತರಿಯನ್ನು ನಾಯಿಯೊಂದು ಹಿಂಬಾಲಿಸುತ್ತಿರುವ ಚಿತ್ರವನ್ನು ಬಿಡಿಸಿದ್ದಾರೆ.

**ಘೋಡವೆಲ್:** ಘೋಡವೆಲ್ ಎಂದರೆ ಕುದುರೆ ಸಾಗಣೆದಾರನೆಂದರ್ಥ. ಕೆಳಭಾಗದ ಎಡಕ್ಕೆ ರೈತನ ಚಿತ್ರದ ಮೇಲೆ ಈ ಚಿತ್ರವು ಕಂಡುಬರುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ಕುದುರೆಯ ಬಣ್ಣವು ಹಳದಿಯಾಗಿರುತ್ತದೆ. ಸಾಗಣೆಯ ಬಂಡಿಯೊಳಗೆ ಒಬ್ಬ ಅಥವಾ ಇಬ್ಬರು ಇರುವ ಪ್ರಯಾಣಿಕರನ್ನು ತೋರಿಸಲಾಗಿದೆ. ಬಹುತೇಕ ಹಳ್ಳಿಗಳಲ್ಲಿ ಈ ಸಾರೋಟ್‌ಗಳಿವೆ. ಅವುಗಳು ವಲ್ಯೋ ವನಿಯೋಗೆ ಸೇರಿದವಾಗಿವೆ. 'ಮರಳಿ ಬಾ' ಎನ್ನುವ ಸ್ವಾಗತವೂ ಅವನಿಗೆ ಇರುತ್ತದೆ. ಅವನಿಗೆ ಈ ರೀತಿಯಾಗಿ ಕರೆಯಲ್ಪಡುವ ಕಾರಣ ಸಾಲದ ಸೇವೆಯ ನೀಡುವುದರ ಮೂಲಕ ಸಾರೋಟಿನಲ್ಲಿ ಪ್ರಯಾಣಿಸುವಂತೆ ಅನುವು ಮಾಡಿಕೊಡುತ್ತಾನೆ. ಕೆಲವು ನಿಬಂಧನೆಗಳೊಂದಿಗೆ ಅವರಿಗೆ ಬನಿಯಾ ಹಣದ ರೂಪದಲ್ಲಿ ಸಾಲವನ್ನು ನೀಡುತ್ತಾನೆ. ಹೀಗೆ ಅವನು ಯಾವಾಗಲಾದರೂ ತನ್ನ ಬಾಕಿಗಳನ್ನು ವಸೂಲಿ ಮಾಡಲು ಹಿಂದಿರುಗುತ್ತಾನೆ. ಒಬ್ಬ ವ್ಯಕ್ತಿಯು ನಿರಂತರವಾಗಿ ಬನಿಯಾಕ್ಕೆ ಹಿಂದಿರುಗಬೇಕು ಏಕೆಂದರೆ ಅವರು ಹಿಂತಿರುಗುವಿಕೆಯ ಸಾಲವು ಕೊನೆಗೊಳ್ಳುವುದಿಲ್ಲ. ಅದಕ್ಕಾಗಿ ಅವರು ಬನಿಯಾ ಬಗ್ಗೆ ತುಂಬಾ ಆಸಕ್ತಿ ತೋರಿಸುತ್ತಾರೆ.

ಇನ್ನೂ ಕೆಲವು ಚಿತ್ರಕಲೆಯಲ್ಲಿ ಸಾರೋಟಿನೊಳಗೆ ಒಬ್ಬರು ಅಥವಾ ಇಬ್ಬರು ಮಾರುಕಟ್ಟೆಯಲ್ಲಿ ಖರೀದಿಸಿದ ಚೀಲ ಮತ್ತು ಪೊಟ್ಟಣಗಳನ್ನು ಹಿಡಿದುಕೊಂಡು ಕುಳಿತಿರುತ್ತಾರೆ. ರಾಥವಾ ಮನೆಗಳಲ್ಲಿ ಪಿಥೋರಾವನ್ನು ಆಚರಿಸುವ ಕಾರಣ, ವಲ್ಯೋ ವನಿಯೋನ ಸಾಲಗಳನ್ನು ಮರಳಿ ಆ ಸಂದರ್ಭದಲ್ಲಿ ಪಾವತಿಸುತ್ತಾರೆಂದು ಪುರಾಣವು ಹೇಳುತ್ತದೆ. ಮದುವೆಯ ಸಂದರ್ಭಗಳಲ್ಲಿ ಇಂದಿಗೂ ಸಹ ರಾಥವಾಗಳು ಸ್ಥಳೀಯ ಬನಿಯಾದಿಂದ ಕೆಲವು ನಿಬಂಧನೆಗಳೊಂದಿಗೆ ಬೆಳ್ಳಿಯ ಆಭರಣಗಳನ್ನು ಖರೀದಿಸುತ್ತಾರೆ. ಅವರಿಗೆ ವಲ್ಯೋ ವನಿಯೋನು ರಾಜಾ ಭೋಜ ಅಥವಾ ಅಬ್ ಕಂಬಿ ಅವರಂತೆಯೇ ಜಗತ್ ಸೃಷ್ಟಿಯ ಸಮಯದಲ್ಲಿ ಕಾಣಿಸಿಕೊಂಡವನು ಎಂಬ ನಂಬಿಕೆಯಿದೆ.

**ಲಖರಿ-ಜೋಖರಿ:** ಇವುಗಳು ಸ್ತ್ರೀ ದೇವತೆಗಳಾಗಿವೆ. ಭೂಮಿಯ ಮೇಲೆ ಜರುಗುವ ಎಲ್ಲ ಚಟುವಟಿಕೆಗಳ ಬಗ್ಗೆ ತೂಗಿ ನೋಡುವುದು ಮತ್ತು ಬರೆದಿಡುವ ಖಾತರಿಯ ಕೆಲಸವನ್ನು

ಮಾಡುತ್ತವೆ. ಹೆಕೆಲ್ ಮತ್ತು ತ್ರಿಪಾಠಿ ಅವರು ಈ ಪುಸ್ತಕವನ್ನು ಇಟ್ಟುಕೊಳ್ಳುವರು. ಇವರು ವಹಿಲಾಖರಿ ಎಂದು ಉಲ್ಲೇಖಿತರಾಗಿದ್ದಾರೆ. ಈ ದೇವತೆಗಳು ಪ್ರತಿ ವ್ಯಕ್ತಿಯ ಸಾಧಕ-ಬಾಧಕಗಳನ್ನು ಬರೆಯುವುದು ಮತ್ತು ಅವರ ಚಟುವಟಿಕೆಗಳ ದಾಖಲೆಗಳನ್ನು ಇಟ್ಟುಕೊಳ್ಳುವ ಕೆಲಸವಾಗಿದೆ.

ಪಿಥೋರಾ ಚಿತ್ರಕಲೆಯಲ್ಲಿ, ಐದು ಜನರಿರುವ ಒಂದು ಗುಂಪು ಕೆಲವು ಹಳ್ಳಿಗಳಲ್ಲಿ ಇರುತ್ತದೆ. ಆ ಗುಂಪು ಈ ರೀತಿಯಾಗಿ ವಿಭಜನೆಗೊಂಡಿರುತ್ತದೆ. ಇಬ್ಬರ ಎರಡು ಗುಂಪು, ಒಬ್ಬ ಒಂಟಿಯಾಗಿ ಇರುತ್ತಾರೆ. ಇನ್ನೂ ಕೆಲವು ಕಡೆ ಇಬ್ಬರ ಒಂದೇ ಗುಂಪು ಇರುತ್ತದೆ. ಇವರ ಕೈಯಲ್ಲಿ ಪುಸ್ತಕಗಳಿರುವುದನ್ನು ಚಿತ್ರದಲ್ಲಿ ತೋರಿಸಲಾಗಿದೆ. ಇವರನ್ನು ಲಖರಿ-ಜೋಖರಿ ಎನ್ನಬಹುದು.

**ಮಹೂಡೋ:** ಇದನ್ನು 'ಮಧುಕಾ ಇಂಡಿಕಾ' ವೃಕ್ಷವೆಂದು ಕರೆಯಲಾಗುತ್ತದೆ. ಇದನ್ನು ಜನಪ್ರಿಯವಾಗಿ ಮಹೂಡೋ ಎಂದು ಕರೆಯಲಾಗುತ್ತದೆ. ಇದರ ಹೂವುಗಳಿಂದ ಮದ್ಯವನ್ನು ಬೇರ್ಪಡಿಸಿ ತಯಾರಿಸಲು ಬಳಸುತ್ತಾರೆ. ಇದರ ಬೀಜಗಳಿಂದ ಖಾದ್ಯ ತೈಲವನ್ನು ಹೊರತೆಗೆಯುತ್ತಾರೆ.

ಪಿಥೋರಾ ಚಿತ್ರಕಲೆಯಲ್ಲಿ ಮಹುಡೋ ಮರದ ಪಾತ್ರ ಮುಖ್ಯವಾಗಿದೆ. ಇದು ರಾಥವಾದವರಿಗೆ ಸಾರಾಯಿಯನ್ನು ಒದಗಿಸುವಲ್ಲಿ ಪೂರಕವಾಗಿದೆ. ಹಾಗಾಗಿ ಅವರ ಚಿತ್ರಗಳಲ್ಲಿ ಬಹುತೇಕ ಕಡೆ ಮಹುಡೋ ಇರುತ್ತದೆ. ಈ ಮರವನ್ನು ವ್ಯಕ್ತಿಯೊಬ್ಬನು ಮಡಿಕೆಯನ್ನು ಹೆಗಲಿಗೆ ನೇತು ಹಾಕಿಕೊಂಡು ಮರವನ್ನು ಹತ್ತುತ್ತಿರುವಂತೆ ತೋರಿಸಲಾಗಿದೆ. ಸಾರಾಯಿಯನ್ನು ತೆಗೆಯಲು ಆ ಮರವನ್ನು ಏರಬೇಕಾಗುತ್ತದೆ. ಈ ವಿಧಾನವು ಇವರಿಗೆ ಕರಗತವಾಗಿತ್ತೆಂಬುವುದು ತಿಳಿದುಬರುತ್ತದೆ. ಸಾರಾಯಿ ಇಲ್ಲದೆ ಹೋದರೆ ಪಿಥೋರಾ ಚಿತ್ರಕಲೆಯು ಪರಿಪೂರ್ಣವಾಗುವುದಿಲ್ಲ. ಪೂಜೆಯು ಪೂರ್ಣವಾಗುವುದಿಲ್ಲ. ಏಕೆಂದರೆ ಬಡವಾ, ಚಿತ್ರಕಾರ ಮತ್ತು ನೆಂಟರಿಗೆ ಸಾರಾಯಿಯನ್ನು ಹಂಚಬೇಕು. ಅಲ್ಲದೆ ಪಿಥೋರಾ ಗೋಡೆಗೆ ಸಾರಾಯಿಯನ್ನು ಸಿಂಪಡಿಸಬೇಕು. ಬಣ್ಣಕ್ಕೆ ಸರಾಯಿ ಮಿಶ್ರಣ ಮಾಡಿಕೊಳ್ಳಬೇಕು. ದೇವರಿಗೆ ಸಾರಾಯಿಯನ್ನು ಅರ್ಪಿಸಬೇಕು. ಹೀಗಾಗಿ ಸಾರಾಯಿ ಅವರಿಗೆ ಮುಖ್ಯವಾದುದು. ಈ ದೃಷ್ಟಿಯಿಂದ ಮಹುಡೋ ವೃಕ್ಷವು ಅವರಿಗೆ ಉಪಯೋಗವಾಗಿದೆ.





**ವಾವ್ಡಿ (ಬಾವಿ):** ವಾವ್ಡಿ ಎಂದರೆ ಬಾವಿ ಅಥವಾ ಕೊಳ. ಇದು ಹೆಚ್ಚಾಗಿ ಪಿಥೋರಾದ ಚೌಕಟ್ಟಿನ ಕೆಳಭಾಗದ ಎಡ ಮೂಲೆಯಲ್ಲಿ ಚಿತ್ರಿಸಲಾಗುತ್ತದೆ. ಈ ಬಾವಿಯನ್ನು ಮೀನು ಮತ್ತು ಚೇಳುಗಳಿಂದ ತೋರಿಸಲಾಗಿದೆ. ಈ ಜೀವಿಗಳು ಸಾಮಾನ್ಯವಾಗಿ ಬಾವಿಗಳಲ್ಲಿ ಕಂಡುಬರುವುದರಿಂದ ಅಲ್ಲಿಯೇ ತೋರಿಸಲಾಗಿದೆ. ಸಾಮಾನ್ಯವಾಗಿ ಒಂದಿಬ್ಬರು ಮಹಿಳೆಯರು ನೀರನ್ನು ಬಳಕೆಗಾಗಿ ಹೊರುತ್ತಿರುವ ದೃಶ್ಯವನ್ನು ಬಾವಿಯ ಸಮೀಪದಲ್ಲಿಯೇ ಚಿತ್ರಿಸಲಾಗಿದೆ. ಬಾವಿಗಳ ಬಗೆಗಿನ ಧಾರ್ಮಿಕ ಮಹತ್ವವನ್ನು ಕುರಿತು ಅವರ ಬುಡಕಟ್ಟು ಹಾಡುಗಳಲ್ಲಿ ಕಂಡುಬರುತ್ತದೆ. ಪಿಥೋರಿ ಮತ್ತು ಪಿಥೋರೋ ಇಬ್ಬರೂ ಬಾವಿಯನ್ನು ಪೂಜಿಸುವ ಸಂದರ್ಭಗಳಿವೆ. ಬಾವಿಯ ಬಳಿ ರಂಗೋಲಿಯ ಧಾರ್ಮಿಕ ರೇಖಾಚಿತ್ರವನ್ನು ಬರೆದು ಅಕ್ಷತೆಯ ಅಕ್ಕಿಯನ್ನು ಎರಚುವ ಮೂಲಕ ಐದು ಬಾರಿ ಬಾವಿಯನ್ನು ಸುತ್ತುವ ಪದ್ಧತಿಯನ್ನು ಅನುಸರಿಸುತ್ತಾ ಬಂದಿದ್ದಾರೆ. ಹೀಗೆ ಪಿಥೋರಿಯು ಬಾವಿಯನ್ನು ಸುತ್ತುವ ಪ್ರತಿ ಸಲವು ಬಿಲ್ಲನ್ನು ಅಲ್ಲಿಡುತ್ತಾಳೆ. ನಂತರ ಅವಳು ಬಿಲ್ಲಿನ ಪ್ರತಿಯಾಗಿ ಗಂಡನ ಸಹೋದರಿಯಿಂದ ಬಂಗಾರದ ನಾಣ್ಯವನ್ನು ಪಡೆಯುತ್ತಾಳೆ. ಆ ಬಾವಿಯಿಂದ ಅವಳು ಐದು ಮಡಿಕೆಯಲ್ಲಿ ನೀರನ್ನು ತುಂಬಿಕೊಂಡು ಮನೆಗೆ ಹೋಗಿ ಪಿಥೋರಾನ ಸ್ನಾನಕ್ಕೆ ಕೊಡುತ್ತಾಳೆ.



**ಬೆಣ್ಣೆ ಕಡೆಯುವ ಜೋಡಿ:** ಈ ರೀತಿಯ ವಿಶಿಷ್ಟತೆಯು ಬಹುತೇಕ ಎಲ್ಲಾ ವರ್ಣಚಿತ್ರಗಳಲ್ಲಿ ಕಂಡುಬರುತ್ತದೆ. ಈ ದಂಪತಿಗಳು ಮೊದಲ ಕುರುಬ ಹೈನುಗಾರಿಕೆಯ ಹೆಣ್ಣು ಮಕ್ಕಳನ್ನು ಪ್ರತಿನಿಧಿಸುತ್ತಾರೆ. ಈ ಚಿತ್ರದಲ್ಲಿ ಮೊಸರು ಕಡೆಯುತ್ತಿರುವಾಗಲೇ ಇಲಿಯೊಂದು ಬಂದಿರುವುದನ್ನು ಕಾಣಬಹುದು.



**ಬಾಡ್ವಾ:** ವಿವಿಧ ದೇವತೆಗಳ ಆಮಂತ್ರಣ ಸಮಾರಂಭದ ಸಮಯದಲ್ಲಿ ಬಡುವಾನು ಪ್ರಮುಖ ಪಾತ್ರ ವಹಿಸುತ್ತಾನೆ. ಬಡುವಾನು ನೆಲದ ಮೇಲೆ ಮತ್ತು ಡ್ರಮ್ಮನ್ನು ಬಾರಿಸುವುದನ್ನು ತೋರಿಸಲಾಗುತ್ತದೆ. ಈ ನಿಲುವಿನಲ್ಲಿ ಬಡುವಾನನ್ನು ವರ್ಣಚಿತ್ರದಲ್ಲಿ ತೋರಿಸಲಾಗಿದೆ.

**ಸಂಭೋಗ ದೃಶ್ಯಗಳು:** ಪವಿತ್ರವಾದ ಪಿಥೋರಾ ಆವರಣದೊಳಗೆ ಈ ತರಹದ ಚಿತ್ರಗಳು ತುಂಬ ವಿರಳವಾಗಿದೆ. ಕೆಲವೊಂದು ಕಡೆ ಮಾತ್ರ ಬರೆಯುತ್ತಾರೆ. ಪದಾಲಿಯಾ ಎನ್ನುವ ಗ್ರಾಮದ ಚಿತ್ರಕಲೆಯಲ್ಲಿ, ಗಣೇಶನ ಕುದುರೆಯ ಮೇಲೆ ಅಂತಹ ಚಿತ್ರದೃಶ್ಯ ಇದೆ. ಪಿಥೋರಾದಲ್ಲಿ ಪುರುಷ ಮತ್ತು ಮಹಿಳೆಯ ಸಂಭೋಗದ ಚಿತ್ರವಿದೆ. ಈ ಚಿತ್ರದಲ್ಲಿ ಮಹಿಳೆಯು ಸಪಾಟವಾಗಿ ನೆಲದ ಮೇಲೆ ಮಲಗಿದ್ದು, ಅವಳ ಮೇಲೆ ಪುರುಷನು ಬಾಗಿದ ರೀತಿಯಲ್ಲಿ ಮಲಗಿರುವ ದೃಶ್ಯವಿದೆ.



ಪಿಥೋರಾ ಚಿತ್ರಕಲೆಯಲ್ಲಿ ವಿಮಾನದ ಚಿತ್ರ, ಬಾಗಿಲು ಕಾಯುವ ವ್ಯಕ್ತಿ ಚಿತ್ರ, ಎರಡು ಹುಲಿಗಳ ಚಿತ್ರ, ಅಡ್ಡೆಯ ಚಿತ್ರ, ಇಬ್ಬರು ವ್ಯಕ್ತಿಗಳನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಮತ್ತಿಬ್ಬರು ಹೊರುತ್ತಿರುವ ದೃಶ್ಯಗಳು ಅಲ್ಲಿ ಕಂಡು ಬರುತ್ತವೆ.

ಈ ಹಿನ್ನೆಲೆಯಲ್ಲಿ ಪಿಥೋರಾ ಚಿತ್ರಕಲೆಯನ್ನು ಗಮನಿಸಿದರೆ ಅಲ್ಲೊಂದು ದೃಶ್ಯ ವೈಭವವೊಂದು ಕಾಣುತ್ತದೆ. ಬಿಲ್ಲರು ಮತ್ತು ರಾಥವಾ ಬುಡಕಟ್ಟು ಜನರು ತಮ್ಮ ಸಾಂಪ್ರದಾಯಿಕ ಆಚರಣೆಯ ಜತೆಯಲ್ಲಿ ಕಲೆಯನ್ನು ನಡೆಸಿಕೊಂಡು ಬರುತ್ತಿದ್ದಾರೆ. ಇದು ಅವರ ಸಾಂಸ್ಕೃತಿಕ ಅನನ್ಯತೆ ಮತ್ತು ಪರಂಪರೆಯೊಂದನ್ನು ಮುಂದುವರೆಸಿಕೊಂಡು ಹೋಗಬೇಕೆನ್ನುವ ಅಪಾರ ಕಾಳಜಿ ಮತ್ತು ದೈವಭಕ್ತಿ ಎರಡು ಅಲ್ಲಿ ಮೈದೋರಿರುವುದು ಕಂಡುಬರುತ್ತದೆ. ಯಾವಾಗಲೂ

ಆಧುನಿಕ ಜಗತ್ತಿನಲ್ಲಿ ಸಂಪ್ರದಾಯಗಳು ವಿಘಟನೆಗೆ ಒಳಗಾಗುವುದೇ ಹೆಚ್ಚು. ಆದರೆ ಅವರು ಆಧುನಿಕತೆಯನ್ನು ಸ್ವೀಕರಿಸುತ್ತಾ ತಮ್ಮ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದಾರೆ. ಚಿತ್ರಕಲೆಯ ಮೂಲಕ ಮಾನವ ಜಗತ್ತು, ಸಸ್ಯ ಜಗತ್ತು, ಪ್ರಾಣಿ ಜಗತ್ತು ಮತ್ತು ಕೀಟ ಜಗತ್ತು ಬದುಕಿನ ಅಸ್ಮಿತೆಗೆ ಕಾರಣವೆಂಬುದನ್ನು ತೋರಿಸಿಕೊಡುತ್ತಿದ್ದಾರೆ.

**ಕೊನೆ ಟಿಪ್ಪಣಿ**

೧. ಎಸ್. ಸಿ. ಪಾಟೀಲ, ಕರ್ನಾಟಕ ಜಾನಪದ ಚಿತ್ರಕಲೆ, ಪು. ೧೭

೨. ರಮೇಶ ಕಟಾರ. ೩೯ ವಯಸ್ಸು, ತಾ. ೧೫-೮-೨೦೧೫, ಊರು: ಮೇಘನಗರದ, ಜಾಬುವಾ, ಮಧ್ಯಪ್ರದೇಶ

೩. ದಿಲೀಪ್ ಬಿಲ್, ೨೮, ವಯಸ್ಸು, ತಾ. ೧೫-೮-೨೦೧೫, ಊರು: ಮೇಘನಗರದ, ಜಾಬುವಾ, ಮಧ್ಯಪ್ರದೇಶ

೪. ಪೇಮಾ ಪತ್ಯಾ, ೮೭ ವಯಸ್ಸು, ತಾ. ೧೬-೮-೨೦೧೫, ಊರು: ಭಾಬರಾ, ಅಲಿರಾಜಪುರ, ಮಧ್ಯಪ್ರದೇಶ

೫. ಪೇಮಾ ಪತ್ಯಾ, ೮೭ ವಯಸ್ಸು, ತಾ. ೧೬-೮-೨೦೧೫, ಊರು: ಭಾಬರಾ, ಅಲಿರಾಜಪುರ, ಮಧ್ಯಪ್ರದೇಶ

## ಅಧ್ಯಾಯ ಆರು

## ಪಿಥೋರಾ ಚಿತ್ರಕಲೆ: ರೂಪಾಂತರ ಮತ್ತು ಸೌಂದರ್ಯ ಪ್ರಜ್ಞೆ

೬.೧ ಪಿಥೋರಾ ಚಿತ್ರಕಲೆ: ಚಿತ್ರಕಾರರು ಮತ್ತು ರೂಪಾಂತರಗಳು

೬.೧.೧ ಸುಭಾಷ್ ಬಿಲ್ ಚಿತ್ರಕಲೆ: ರೂಪಾಂತರ (Visit the Bhil Carnival)

೬.೧.೨ ಶೇರ ಸಿಂಗ್ ಬಿಲ್ ಚಿತ್ರಕಲೆ: ರೂಪಾಂತರ (A Bhil Story)

೬.೧.೩ ಗಂಗೂ ಬಾಯಿ ಚಿತ್ರಕಲೆ: ರೂಪಾಂತರ (Tree Matters)

೬.೧.೪ ಬೂರಿಬಾಯಿ ಚಿತ್ರಕಲೆ : ರೂಪಾಂತರ (Seventy Feet Wall Paintings)

೬.೨ ಪಿಥೋರಾ ಚಿತ್ರಕಲೆ: ಸೌಂದರ್ಯ ಪ್ರಜ್ಞೆ

# ಅಧ್ಯಾಯ ೬

# ಪಿಥೋರಾ ಚಿತ್ರಕಲೆ: ರೂಪಾಂತರ ಮತ್ತು ಸೌಂದರ್ಯ ಪ್ರಜ್ಞೆ

## ೬.೧ ಪಿಥೋರಾ ಚಿತ್ರಕಲೆ: ಚಿತ್ರಕಾರರು ಮತ್ತು ರೂಪಾಂತರಗಳು

ಸಾಂಪ್ರದಾಯಿಕ ಆಚರಣೆಯ ಭಾಗವಾಗಿದ್ದ ಪಿಥೋರಾ ಚಿತ್ರಕಲೆಯನ್ನು ಹೊಸ ತಲೆಮಾರಿನ ಬಿಲ್ ಬುಡಕಟ್ಟು ಜನರು ಅದರ ಸಾಂಸ್ಕೃತಿಕ ಅನನ್ಯತೆಯನ್ನು ಮತ್ತೊಂದು ಮಗ್ಗುಲಿಗೆ ತಿರುಗಿಸಿದರು. ಆಧುನಿಕ ಕಾಲಘಟ್ಟದಲ್ಲಿ ಪಿಥೋರಾವನ್ನು ಪೂಜೆಯ ಕಾರ್ಯದ ಜೊತೆಗೆ ಅದು ಬದಲಾಗಬೇಕಾದ ಅನಿವಾರ್ಯತೆಯನ್ನು ಚಿತ್ರಗಳ ಮೂಲಕವೇ ಸಾಬೀತು ಪಡಿಸಿದರು. ಇದೊಂದು ಬುಡಕಟ್ಟು ಅಥವಾ ಜನಪದ ಶೈಲಿಯ ಚಿತ್ರಣವೆಂದುಕೊಂಡು ಅನೇಕ ಕಲಾವಿದರು ಚಿತ್ರಗಳನ್ನು ಬಿಡಿಸತೊಡಗಿದರು. ಬಿಲ್ ಜನಾಂಗದ ಪಿಥೋರಾ ಕಲೆ ಕೇವಲ ಕಲೆಯಲ್ಲ. ಅವರ ಸಮೃದ್ಧಿಯ ಸಂಕೇತ. ಅದು ಅವರ ದೃಢವಾದ ಭಕ್ತಿಪೂರ್ವಕ ದೇವರ ಕೆಲಸವಾಗಿ ಹೊರಹೊಮ್ಮುತ್ತದೆ. ಬಿಲ್‌ರು ಆಧುನಿಕ ಲೋಕಕ್ಕೆ ಎಷ್ಟೇ ತೆರೆದುಕೊಂಡರು ತಮ್ಮ ಸಂಸ್ಕೃತಿ ಅಥವಾ ಧಾರ್ಮಿಕ ನಂಬಿಕೆಯ ಭಾಗವಾಗಿರುವ ಪಿಥೋರಾವನ್ನು ತಮ್ಮ ಮನೆಯ ಗೋಡೆಯ ಮೇಲೆ ಬಿಡಿಸದೇ ಇರುವುದಿಲ್ಲ. ಈ ವಿಚಾರದಲ್ಲಿ ಅವರು ಆಧುನಿಕವಾದರೂ ವರ್ಷಕ್ಕೊಮ್ಮೆ ಅಥವಾ ಮೂರು ವರ್ಷಕ್ಕೊಮ್ಮೆ ಸಾಂಪ್ರದಾಯಿಕ ಪಿಥೋರಾವನ್ನು ಆಚರಿಸದೇ ಬಿಡುವುದಿಲ್ಲ. ಈಚೀನ ಎರಡು ತಲೆಮಾರಿನ ಪಿಥೋರಾ ಕಲಾವಿದರು ಮಾತ್ರವೇ ತಮ್ಮ ಚಿತ್ರಕಲೆಯಲ್ಲಿ ನವ್ಯತೆಯನ್ನು ಹುಡುಕತೊಡಗಿದ್ದಾರೆ. ಈ ಎರಡು ತಲೆಮಾರಿನವರೇ ಪಿಥೋರಾವನ್ನು ರೂಪಾಂತರಗೊಳಿಸಿದ್ದಾರೆ.

ಬಿಲ್‌ರು ಗೋಡೆಯ ಮೇಲೆ ಮಾತ್ರವೇ ಪಿಥೋರಾವನ್ನು ರಚಿಸುತ್ತಿದ್ದರು. ಪ್ರಸ್ತುತದಲ್ಲಿ ಕಾಗದ ಮತ್ತು ಕ್ಯಾನವಾಸ್ ಮೇಲೆಯೂ ಸಣ್ಣ ಪಟ್ಟ ಚಿತ್ರಗಳನ್ನು ರಚಿಸುತ್ತಿದ್ದಾರೆ. ಕೇವಲ ಮೂಲ ರೂಪವೊಂದನ್ನು ಇಟ್ಟುಕೊಂಡು ಅದರಲ್ಲಿ ಮಾಡಿಕೊಳ್ಳಬಹುದಾದ ಸಾಕಷ್ಟು ಬದಲಾವಣೆಗಳನ್ನು ಇಂದು ಜಾರಿಗೆ ತಂದುಕೊಂಡಿದ್ದಾರೆ. ಸಾಂಸ್ಕೃತಿಕವಾಗಿಯೂ ಮತ್ತು ತಾಂತ್ರಿಕವಾಗಿಯೂ ಬದಲಾವಣೆಯನ್ನು ಕಂಡುಕೊಂಡಿದ್ದಾರೆ. ಬಣ್ಣಗಳ ಸಹಾಯದಿಂದ ಪಿಥೋರಾದಲ್ಲಿ

ದೃಶ್ಯ ವೈಭವವನ್ನು ಮಾಡಿದ್ದಾರೆ. ಚುಕ್ಕಿಗಳ ಸಹಾಯದಿಂದ ಚಿತ್ರಗಳು ಸೌಂದರ್ಯವನ್ನು ಹೆಚ್ಚಿಸಿಕೊಂಡಿವೆ. ಇದೆಲ್ಲವೂ ಅವರಿಗೆ ಸಾಧ್ಯವಾಗಿದ್ದು ಕೊಡುಕೊಳುವಿಕೆಯಿಂದಾಗಿ, ಬೇರೆ ಬೇರೆ ಕಲಾವಿದರ ಜೊತೆಗೆ ಬೆರೆಯುವಿಕೆಯಿಂದಾಗಿ ಅವರ ಚಿತ್ರಗಳಲ್ಲಿ ಸಾಕಷ್ಟು ಬದಲಾವಣೆಯಾಗಿದೆ.

ಕಲಾ ಜಗತ್ತಿನ ಕೆಲವು ಹಿರಿಯ ಕಲಾವಿದರು ಪಿಥೋರಾ ಕಲೆಯನ್ನು ಮೆಚ್ಚಿ ಅದರಲ್ಲಿ ಅನೇಕ ಬದಲಾವಣೆಗಳಿಗೆ ಮಾರ್ಗದರ್ಶನವನ್ನು ನೀಡುತ್ತಿದ್ದಾರೆ. ಚಿತ್ರಕಲಾ ಕಮ್ಮಟಗಳಲ್ಲಿ ಹಾಗೂ ಶಿಬಿರಗಳಲ್ಲಿ ಬಿಲ್ ಕಲಾವಿದರು ಭಾಗವಹಿಸುವುದರಿಂದ ಮೂಲ ಪಿಥೋರಾದಿಂದ ರೂಪಾಂತರಗೊಳ್ಳಲು ಸಾಧ್ಯವಾಗಿದೆ. ಅಲ್ಲದೇ ಸಾಂಪ್ರದಾಯಿಕ ಪಿಥೋರಾ ಕಲೆಯಲ್ಲಿ ನವ್ಯತೆಯು ಮೂಡಲು ಸಹಕಾರಿಯಾಗಿದೆ. ಪಿಥೋರಾ ಕಲೆಯಲ್ಲಿ ಬರುವ ಚಿತ್ರರೂಪಗಳೆಲ್ಲಾ ತುಂಬ ಸರಳವಾಗಿವೆ. ಮಾನವ, ಪ್ರಾಣಿ, ಪಕ್ಷಿ ಮುಂತಾದ ಚಿತ್ರಗಳಲ್ಲಿ ಮುಖಚರ್ಯೆ ಯಥಾವತ್ತಾಗಿಲ್ಲ. ಅಮೂರ್ತ ಮತ್ತು ಅರ್ಧ ಅಮೂರ್ತ ರೂಪದಲ್ಲಿವೆ. ಇದು ಇಂದಿನ 'ಪೋಸ್ಟ್ ಮಾಡರ್ನಿಸಂ'ನ ನೆಲೆಯಿಂದ ಬರುತ್ತಿರುವಂತೆ ಕಾಣುತ್ತದೆ. ಮೊದಮೊದಲು ನೋಡುಗರಿಗೆ ಜನಪದ ಕಲೆಗಿಂತ ಭಿನ್ನವಾಗಿರುವ ನವ್ಯಕಲೆಯೆಂದು ಭಾಸವಾಗುತ್ತದೆ.

ಪಿಥೋರಾ ಕಲೆಯ ಪ್ರಸ್ತುತ ಚಿತ್ರಕಲೆಯನ್ನು ನೋಡಿದರೆ ನಮಗೆ ಪಾಶ್ಚಾತ್ಯ ಕಲಾವಿದ ಪಾಬ್ಲೋ ಪಿಕಾಸೋ ಮತ್ತು ಭಾರತೀಯ ಹೆಸರಾಂತ ಕಲಾವಿದ ಜೋಗೆನ್ ಚೌಧರಿ ಅವರ ನವ್ಯ ಕಲಾ ಪಂಥದ ಕಲಾಕೃತಿಗಳ ಮಾದರಿಯ ಚಿತ್ರಗಳೆನಿಸುತ್ತವೆ. ಇಂದಿನ ಪಿಥೋರಾ ಕಲಾವಿದರು ಹಿಂದಿನ ಹಳೆಯ ವಿಷಯವನ್ನು ತೆಗೆದುಕೊಂಡರೂ ಸಂಪೂರ್ಣವಾದ ಪಿಥೋರಾ ಸನ್ನಿವೇಶದ ಯಥಾವತ್ತನ್ನು ತರುವುದಿಲ್ಲ. ಅದರಲ್ಲಿನ ಬಿಡಿ ಬಿಡಿ ಭಾಗಗಳನ್ನು ವಿಂಗಡಿಸಿಕೊಂಡು ಯಾವುದಾದರೊಂದು ಭಾಗವನ್ನು ಕಲೆಯಲ್ಲಿ ಉಪಯೋಗಿಸಿ ಚಿತ್ರ ರಚಿಸುತ್ತಾರೆ. ಆ ಚಿತ್ರಗಳಲ್ಲಿ ಬಣ್ಣಗಳನ್ನು ಕೂಡಾ ಬದಲಾಯಿಸುತ್ತಾರೆ. ಬೇರೆ ಯಾವುದಾದರೂ ಕಲ್ಪನೆಯ ಅಥವಾ ತಾವು ನೋಡಿದ ಜಾತ್ರೆಯ ಸನ್ನಿವೇಶಗಳನ್ನು ಚಿತ್ರಗಳಲ್ಲಿ ತರುತ್ತಾರೆ.

ನಿರ್ದಿಷ್ಟವಾದ ಗೋಡೆಗಳ ಮೇಲೆ ರೂಪ, ಬಣ್ಣಗಳಿಂದ ರಚನೆಯಾಗುತ್ತಿದ್ದ ಭಿತ್ತಿಚಿತ್ರಗಳು ಇಂದು ಕಾಲಕ್ಕೆ ತಕ್ಕಂತೆ ಕೆಲವೊಂದು ಬದಲಾವಣೆಗಳನ್ನು ಅನುಸರಿಸಿಕೊಂಡಿವೆ. ಗೋಡೆಯ ಮೇಲೆ ಮಾತ್ರವಲ್ಲದೆ, ಕಾಗದ ಮತ್ತು ಕ್ಯಾನವಾಸ್ ಮೇಲೆ ಬರೆದು ಮಾರಾಟವನ್ನು ಮಾಡುತ್ತಿದ್ದಾರೆ. ಹಾಗೆಯೇ ಬಣ್ಣ ತಯಾರಿ ಮಾಡಿಕೊಂಡು ಕುಂಚಗಳನ್ನು ಬಳಸಿ ಕಲಾಕೃತಿಗಳನ್ನು ರಚಿಸುತ್ತಾರೆ. ಈ ಬದಲಾವಣೆ ಜನಾಂಗದ ಆರ್ಥಿಕ ಸ್ಥಿತಿಯನ್ನು ಬದಲಾಯಿಸಿಕೊಳ್ಳಲು ತುಂಬ ಸಹಕಾರಿಯಾಗಿದೆ. ತಮ್ಮ ಆರ್ಥಿಕ ಸ್ಥಿತಿಯನ್ನು ಬಲಪಡಿಸಿಕೊಳ್ಳುವ ನಿಟ್ಟಿನಲ್ಲಿಯೂ ಪಿಥೋರಾ ರೂಪಾಂತರದ ಅಗತ್ಯತೆ ಇದೆ. ಸಾಂಪ್ರದಾಯಿಕ ಚಿತ್ರಕಲೆಯ ಸಂದರ್ಭದಲ್ಲಿ ಆರ್ಥಿಕವಾದ ಸದೃಢತೆಯನ್ನು ಪಿಥೋರಾ ಪೂಜೆಯ ಆಚರಣೆಯನ್ನು ಮಾಡುತ್ತಿದ್ದರು ಈಗ ಅದೇ ಪಿಥೋರಾ ಆರ್ಥಿಕ ಜೀವನ ಸುಧಾರಣೆಗೆ ಸಹಕಾರಿಯಾಗಿದೆ ಎಂಬುವುದು ಗಮನಾರ್ಹವಾದ ರೂಪಾಂತರವಾಗಿದೆ.

ಬಿಲ್‌ರ ಅನೇಕ ಚಿತ್ರಕಲಾವಿದರು ಸಾಂಪ್ರದಾಯಿಕ ಪಿಥೋರಾ ಆಚರಣೆಯ ಜೊತೆಗೆ ಆಧುನಿಕವಾದ ಪಿಥೋರಾ ಮಾದರಿಯ ಚಿತ್ರಗಳನ್ನು ಬರೆಯುತ್ತಿದ್ದಾರೆ. ಈ ಚಿತ್ರಗಳು ಸಾಮಾನ್ಯವಾಗಿ ತಮ್ಮ ಬದುಕಿನ ವಿವಿಧ ಕಾಲಘಟ್ಟದ ಸನ್ನಿವೇಶಗಳನ್ನೋ ಜಾತ್ರೆಗಳ ಸನ್ನಿವೇಶಗಳನ್ನೋ ಮುಂತಾಗಿ ಚಿತ್ರಗಳನ್ನು ರಚಿಸುತ್ತಾರೆ. ಪಿಥೋರಾದ ಪ್ರಮುಖ ಕಲಾವಿದರೆಂದರೆ ಗಂಗೂಬಾಯಿ, ಬೂರಿಬಾಯಿ, ಪೇಮಾ ಪತ್ಯಾ, ರಮೇಶ ಕತಾರಿಯಾ, ಹರಿಸಿಂಗ್, ಲಾಡುಬಾಯಿ, ಸುಭಾಷ ಬಿಲ್, ಅನಿತಾ ಬಾರಾಯಾ ಮುಂತಾದವರು.

ಈ ಕಲಾವಿದರೆಲ್ಲರೂ ಸಾಂಪ್ರದಾಯಿಕವಾದ ಬಣ್ಣ ಮತ್ತು ಕುಂಚಗಳನ್ನು ಪ್ರಸ್ತುತದಲ್ಲಿ ಬಳಸುವುದಿಲ್ಲ. ಆಧುನಿಕವಾದ ರಾಸಾಯನಿಕ ಬಣ್ಣ ಮತ್ತು ಬ್ರಷ್‌ಗಳನ್ನು ಬಳಸುತ್ತಾರೆ. ಮೂಲ ಪಿಥೋರಾ ರಚಿಸುವಾಗ ಸಾಂಪ್ರದಾಯಿಕವಾದ ಮತ್ತು ರಾಸಾಯನಿಕವಲ್ಲದ ಬಣ್ಣಗಳನ್ನು ಕೆಲವರು ಬಳಸುವುದಿಲ್ಲ. ಆಧುನಿಕ ಕಾಲಕ್ಕೆ ತೆರೆದುಕೊಂಡ ಕೆಲವರು ಮಾತ್ರವೇ ರಾಸಾಯನಿಕ ಬಣ್ಣಗಳನ್ನು ಬಳಸುವುದಿದೆ. ಅವರ ಚಿತ್ರಗಳನ್ನು ಗಮನಿಸಿದಾಗ 'ಬಾಬಾ ಪಿಥೋರಾ'ನ ಮೇಲೆ ಇರುವ ನಂಬಿಕೆಯನ್ನು, ಭಕ್ತಿ-ಭಾವವನ್ನು ದೃಢಪಡಿಸಲು ಅವರು ಸಾಂಪ್ರದಾಯಿಕವಾಗಿಯೂ ಇದ್ದಾರೆ. ಪೂರ್ವಜರಿಂದ ಹಿಡಿದು ಇಂದಿನವರೆಗೂ ಯಾವುದೇ ಬದಲಾವಣೆಗಳನ್ನು ಮಾಡಿಕೊಳ್ಳದೇ ಬರೆದವರೂ ಇದ್ದಾರೆ. ಅವರು ಆ ಚಿತ್ರಗಳನ್ನು ಕೇವಲ ಚಿತ್ರವೆಂದು ಭಾವಿಸದೇ ಅದನ್ನು ದೈವದ ಸಂಕೇತವೆಂದು ಭಾವಿಸಿದ್ದಾರೆ. ಅವರ ಸಾಂಪ್ರದಾಯಿಕ ಚಿತ್ರದ ಉದ್ದೇಶ ದೇವರ ಪ್ರತಿಷ್ಠಾಪನೆಯೆಂದು ನಂಬಿರುವುದೇ ಹೆಚ್ಚು. ಇದರಿಂದ ಕೆಲವರು ಸಾಂಪ್ರದಾಯಿಕ ಪಿಥೋರಾ ಕಲಾವಿದರಾಗಿಯೇ ಉಳಿದಿದ್ದಾರೆ. ಆದರೆ ಇವರಲ್ಲಿ ಇನ್ನೂ ಕೆಲವು ಚಿತ್ರಕಾರರು ಬಿಲ್‌ರ ನಂಬಿಕೆ, ಪುರಾಣ, ಇತಿಹಾಸ ಹೊಂದಿದ ಈ ಕಲೆಯನ್ನು ಉನ್ನತೀಕರಿಸಲು ಪ್ರಯತ್ನಿಸುತ್ತಿದ್ದಾರೆ.

ಪಿಥೋರಾ ಚಿತ್ರಕಾರರ ಪರಿಚಯ ಮತ್ತು ಅವರು ಪಿಥೋರಾ ಚಿತ್ರಕಲೆಯಲ್ಲಿ ಮಾಡಿಕೊಂಡ ರೂಪಾಂತರಗಳನ್ನು ಒಟ್ಟಿಗೆ ವಿಶ್ಲೇಷಣೆ ಮಾಡುವ ಪ್ರಯತ್ನವನ್ನು ಮಾಡಲಾಗಿದೆ. ಚಿತ್ರಕಾರರು ಮತ್ತು ರೂಪಾಂತರಗಳು ಎಂಬ ಎರಡು ಶೀರ್ಷಿಕೆಯ ಅಡಿಯಲ್ಲಿ ಚರ್ಚಿಸುವ ಸಾಧ್ಯತೆ ಇದ್ದರೂ ಹಾಗೇ ಮಾಡಲಾಗಿಲ್ಲ. ಕಾರಣವೇನೆಂದರೆ, ಪ್ರತಿಚಿತ್ರಕಲಾವಿದರು ವೈಯಕ್ತಿಕವಾಗಿ ಭಿನ್ನತೆಯನ್ನು ಪಿಥೋರಾದಲ್ಲಿ ಮಾಡಿದ್ದಾರೆ. ತಮ್ಮದೇ ಆದ ಕೆಲವು ಥೀಮ್ (ಆಶಯ) ಗಳನ್ನು ಬಳಸಿಕೊಂಡು ವಿಭಿನ್ನವಾಗಿ ಪಿಥೋರಾ ಶೈಲಿಯನ್ನು ಬೆಳೆಸಿದ್ದಾರೆಂಬ ನೆಲೆಯಿಂದ ಒಟ್ಟಿಗೆ ಚರ್ಚಿಸಲಾಗಿದೆ.

## ೬.೧.೧ ಸುಭಾಷ್ ಬಿಲ್ ಚಿತ್ರಕಲೆ: ರೂಪಾಂತರ

ಸುಭಾಷ್ ಬಿಲ್ ಹೊಸ ತಲೆಮಾರಿನ ಪಿಥೋರಾ ಚಿತ್ರಕಲಾವಿದ. ಅವರು ಬಿಲ್ ಜನಾಂಗದ ಸಾಂಪ್ರದಾಯಿಕ ಪಿಥೋರಾ ಚಿತ್ರಕಲೆಯನ್ನು ತನ್ನ ಕಾಲಕ್ಕೆ ಬೇಕಾದ ಹಾಗೆ ಹೊಂದಿಸಿಕೊಂಡು ಬಿಡಿಸುವ ಕಲಾವಿದರಾಗಿದ್ದಾರೆ. ಮಧ್ಯಪ್ರದೇಶದ ಜಾಬುವಾದ ಮೇಘನಗರದ ಪಂಚಕುಯಿಯೆಂಬ ಬುಡಕಟ್ಟು ಗ್ರಾಮವೊಂದರಲ್ಲಿ ಜೂನ್ ೪, ೧೯೮೫ ರಂದು ಜನಿಸುತ್ತಾರೆ. ಪ್ರಸ್ತುತದಲ್ಲಿ ಮಧ್ಯಪ್ರದೇಶದ ಭೂಪಾಲದಲ್ಲಿನ ಬಾಣಗಂಗಾದಲ್ಲಿ ನೆಲೆಸಿದ್ದಾರೆ.

೨೦೧೧ರ ಧಾರವಾಡ ಉತ್ಸವದಲ್ಲಿ ಕ್ಯಾನವಾಸ್ ಮೇಲೆ ಬಿಡಿಸಿರುವ ನೂರಕ್ಕೂ ಹೆಚ್ಚು ಪಿಥೋರಾ ಚಿತ್ರಗಳನ್ನು ಪ್ರದರ್ಶನಕ್ಕೆ ಇಟ್ಟಿದ್ದರು. ಅಲ್ಲದೇ ಧಾರವಾಡದ ಜಿಲ್ಲಾಧಿಕಾರಿಗಳ ಕಛೇರಿಯ ಕೆಲವು ಗೋಡೆಗಳಿಗೆ ಅವರಿಂದ ಪಿಥೋರಾ ಚಿತ್ರಗಳನ್ನು ಅದೇ ವೇಳೆಯಲ್ಲಿ ಬರೆಸಲಾಯಿತು.

ಸುಭಾಷ್ ಅವರು ೨೦೧೩ರ ಅಕ್ಟೋಬರ್‌ನಲ್ಲಿ ಉತ್ತರಖಾಂಡದಲ್ಲಿ ವಿರಸಾತ್ ಜಾತ್ರೆಯಲ್ಲಿ ರಾಷ್ಟ್ರೀಯ ಚಿತ್ರಕಲಾವಿದರ ಶಿಬಿರದಲ್ಲಿ ಭಾಗವಹಿಸಿದ್ದಾರೆ. ಮೂಡಬಿದರೆಯಲ್ಲಿ ನಡೆದ ೨೦೧೨ರ ಆಳ್ವಾಸ್ ವರ್ಣವಿರಸಾತ್‌ನಲ್ಲಿ ಭಾಗವಹಿಸಿರುವರು.

ಬಿಲ್ ಚಿತ್ರಕಲೆಯನ್ನು ಪ್ರಚಾರ ಪಡಿಸುವ ಕೆಲಸವನ್ನು ಅವರು ಮಾಡುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಅವರು ಕೇರಳ ಲಲಿತಕಲಾ ಅಕಾಡೆಮಿ ವತಿಯಿಂದ ನಡೆದ ಶಿಬಿರದಲ್ಲಿಯೂ ೨೦೦೯ ರಲ್ಲಿ ಭಾಗವಹಿಸಿದ್ದಾರೆ. ಓಡಿಸ್ಸಾ ಸರ್ಕಾರವು ಎಸ್.ಸಿ. ಮತ್ತು ಎಸ್.ಟಿ ರಿಸರ್ಚ ಆಂಡ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್‌ನ ಟ್ರೈಬಲ್ ಆರ್ಟ್ ಆಂಡ್ ಕ್ರಾಫ್ಟ್ಸ ಆಂಡ್ ಫೇರ ನಲ್ಲಿ ಭಾಗವಹಿಸಿದ್ದಾರೆ. ಟಾಟಾ ಸ್ಟೀಲ್ ಕಲ್ಚರಲ್ ಸೊಸೈಟಿಯ 'ಸಂವಾದ-ಆದಿವಾಸಿ ಸಮ್ಮೇಳನ'ದಲ್ಲಿಯೂ ೨೦೧೫ರಲ್ಲಿ ಭಾಗವಹಿಸಿರುವರು. 'ಸೌತ್ ಸೆಂಟ್ರಲ್ ಜೋನ್ ಕಲ್ಚರಲ್ ಸೆಂಟರ್ ನಾಗಪುರ ಇವರು ನಡೆಸಿದ "ಮಧ್ಯಪ್ರದೇಶ ಕಲಾಕೃತಿ" ಕಮ್ಮಟದಲ್ಲಿ ೨೦೦೭ ರಲ್ಲಿ ಭಾಗವಹಿಸಿದರು. 'ವಿರಸಾತ್ ೨೦೧೩'ರಲ್ಲಿ ಡೆಹರಾಡುನ್‌ನಲ್ಲಿ ಪೇಟಿಂಗ್ಸ ಕ್ಯಾಂಪ್‌ನಲ್ಲಿ ಭಾಗವಹಿಸಿರುವರು. ಅವರು ಬಿಡಿಸಿರುವ ಅನೇಕ ಚಿತ್ರಗಳನ್ನು ಗ್ರೀಟಿಂಗ್ ಕಾರ್ಡ್‌ಗಳಾಗಿ ಶುಭ ಕೋರಲು ಬಳಸುವ ಜನರಿದ್ದಾರೆ.

ಸುಭಾಷ್ ಬಿಲ್ ಅವರು ಭೂಪಾಲನಲ್ಲಿರುವ ಇಂದಿರಾ ಗಾಂಧಿ ರಾಷ್ಟ್ರೀಯ ಮಾನವ ಸಂಗ್ರಹಾಲಯ ನಡೆಸುವ ಅನೇಕ ಶಿಬಿರಗಳಲ್ಲಿ ಭಾಗವಹಿಸಿದ್ದಾರೆ. ಈ ಮೂಲಕ ಭಾರತದಾದ್ಯಂತ ಅವರು ಸುತ್ತಾಡಿದ್ದಾರೆ. ಅಲ್ಲದೇ ಪಿಥೋರಾ ಕಲೆಯಲ್ಲಿನ ಅನೇಕ ಬದಲಾವಣೆಗೆ ಈ ಸುತ್ತಾಟವೂ ಕಾರಣವಾಗಿದೆ.

ಮಧ್ಯಪ್ರದೇಶದ ಬಿಲ್ ಆದಿವಾಸಿಗಳು ಪ್ರತಿವರ್ಷವು 'ಭಗೋರಿಯಾ' ಎಂಬ ಜಾತ್ರೆಯನ್ನು ಆಚರಿಸುತ್ತಾರೆ. ಬಿಲ್ ಜನಾಂಗದಲ್ಲಿನ ಈ ಜಾತ್ರೆಯ ಸನ್ನಿವೇಶಗಳನ್ನು ಇಟ್ಟುಕೊಂಡು ಸುಭಾಷ್ ಬಿಲ್ ಚಿತ್ರಕಥಾ ಪಯಣವನ್ನು ಕಟ್ಟಿಕೊಡುತ್ತಾರೆ. ಅವರು 'Visit the Bhil Carnival' ಎಂಬ ಹೆಸರಿನಲ್ಲಿ ಚಿತ್ರಗಳನ್ನು ಬಿಡಿಸಿದ್ದಾರೆ. ಬಿಲ್ ಸಾಂಪ್ರದಾಯಿಕ ಪಿಥೋರಾವು ಕಟ್ಟಿಕೊಡುವ ಕಥೆಯ ಹೆಣಿಗೆಗಳು ಪ್ರತ್ಯೇಕ ಕಥೆಯನ್ನು, ಪುರಾಣವನ್ನು ಹೇಳುತ್ತವೆ. ಆದರೆ ರೂಪಾಂತರ ಕಾಲಘಟ್ಟದ ಪಿಥೋರಾ ಚಿತ್ರಗಳು ಸಮಗ್ರತೆಯನ್ನು ಚಿತ್ರಿಸುತ್ತವೆ. 'ತಾರಾ ಬುಕ್ಸ್' ಪ್ರಕಾಶನದವರು ಸುಭಾಷ್ ಬಿಲ್ ಅವರ ಚಿತ್ರಗಳನ್ನು ಬಳಸಿಕೊಂಡು ವಿಶೇಷ ರೂಪದ ಫೋಲ್ಡಿಂಗ್ ಕಥಾ ಪುಸ್ತಕವನ್ನು ಬಿಡುಗಡೆ ಮಾಡಿದ್ದಾರೆ.

ಸಾಂಪ್ರದಾಯಿಕ ಪಿಥೋರಾ ಹುಕ್ಕಾ ಗಣೇಶ, ಸೂರ್ಯ ಮತ್ತು ಚಂದ್ರನ ಚಿತ್ರಗಳೊಂದಿಗೆ ಆರಂಭವಾಗುತ್ತದೆ. ಆಧುನಿಕ ಚಿತ್ರಕಾರರು ಪಿಥೋರಾದ ಶೈಲಿಯ ಚಿತ್ರಗಳನ್ನು ಅನುಸರಿಸಿದರೂ ವಿಭಿನ್ನವಾಗಿ ಕಥಾ ಚಿತ್ರವನ್ನು ಹೆಣೆದಿರುವುದು ಕಾಣುತ್ತದೆ. ಆ ಕಥಾ ಚಿತ್ರಕ್ಕೆ ನೀಲಾ ಮತ್ತು ಪೀಲಾ ಎಂಬ ಇಬ್ಬರು ಅಕ್ಕ-ತಂಗಿಯರೇ ನಾಯಕಿಯರು. ಅವರು ಜಾತ್ರೆಯಲ್ಲಿ ನಡೆದುಕೊಂಡ ರೀತಿಗಳನ್ನು ಮತ್ತು ಸನ್ನಿವೇಶಗಳನ್ನು ಸುಭಾಷ್ ಬಿಲ್ ಚಿತ್ರಿಸಿದ್ದಾರೆ.

ನೀಲಾ ಮತ್ತು ಪೀಲಾ ಜಾತ್ರೆ ನಡೆಯುವ ಸ್ಥಳಕ್ಕೆ ಪ್ರವೇಶವಾಗುವ ರೀತಿಯನ್ನು ಚಿತ್ರಿಸಿದ್ದಾರೆ. ಸಾಂಪ್ರದಾಯಿಕ ಪಿಥೋರಾದಲ್ಲೂ ಇದೇ ರೀತಿಯಾದ ಪ್ರವೇಶ ದ್ವಾರವನ್ನು ಮಾಡಿರುವುದು ಕಂಡುಬರುತ್ತದೆ. ಈ ಪ್ರವೇಶದಿಂದಲೇ ಪಿಥೋರಾ ಚಿತ್ರ ಜಗತ್ತಿನ ವೈವಿಧ್ಯತೆ ಕಾಣುವುದು. ಅದನ್ನೇ ಇಲ್ಲಿ ಸುಭಾಷ್ ಬಿಲ್ ಅವರು ಈ ರೀತಿಯಾಗಿ ರೂಪಾಂತರಿಸಿಕೊಂಡು ಬಿಡಿಸಿದ್ದಾರೆಂದು ಅನ್ನಿಸುತ್ತದೆ. ಈ ಚಿತ್ರದ ಸನ್ನಿವೇಶ ಈ ರೀತಿಯಾಗಿದೆ. "ನೀಲಾ ಮತ್ತು ಪೀಲಾ ಅಕ್ಕ ತಂಗಿಯರು. ಅವರು ಭಗೋರಿಯಾ ಜಾತ್ರೆ ನೋಡಲು ಬರುತ್ತಾರೆ. ಈ ಜಾತ್ರೆಯು ಪ್ರತಿ ವರ್ಷವೂ ನಡೆಯುತ್ತದೆ. ಅವರಿಗೆ ಈ ವರ್ಷ ಮಹತ್ವದ್ದು, ಏಕೆಂದರೆ ಅವರು ಬೆಳೆದು ದೊಡ್ಡವರಾಗಿದ್ದರಿಂದ ತುಂಬ ಆನಂದಭರಿತರಾಗಿ ಜಾತ್ರೆಯ ಮಜವನ್ನು ಆಸ್ವಾದಿಸಲು ತಾವೇ ಸ್ವತಃ ಇಬ್ಬರೇ ಬಂದಿದ್ದಾರೆ.

ಆ ಅಕ್ಕ ತಂಗಿಯರು ಜಾತ್ರೆಯ ಸ್ಥಳಕ್ಕೆ ಪ್ರವೇಶ ಪಡೆದ ತಕ್ಷಣಕ್ಕೆ ಅವರ ಕಣ್ಣಿಗೆ ಬೀಳುವ, ಬಿದ್ದಿರಬಹುದಾದ ಸನ್ನಿವೇಶಗಳನ್ನು ಚಿತ್ರಕಾರನು ಕಲ್ಪನೆಯಲ್ಲಿ ಬರೆದಿದ್ದಾನೆ. ಅಲ್ಲಿ ಜನರು ಸಂತೋಷದಿಂದ ಮಾತನಾಡುತ್ತಿರುವುದು, ತಿನ್ನುವುದು, ಕುಡಿಯುವುದು, ಗಾಳಿಪಟ ಹಾರಿಸುತ್ತಿರುವುದು, ಆಟ ಆಡುತ್ತಿರುವುದು ಇಂತಹ ಸಾಮಾನ್ಯವಾಗಿ ಕಾಣಬರುವ ಸನ್ನಿವೇಶಗಳನ್ನು ಬರೆಯಲಾಗಿದೆ. ಮೂಲ ಪಿಥೋರಾ ದೃಶ್ಯ ವೈಭವವು ಇಲ್ಲಿ ಬೇರೆ ರೀತಿಯಲ್ಲಿದೆ. ಅಲ್ಲಿನ ಲೋಕವೇ ಬೇರೆ, ಇಲ್ಲಿಯ ಲೋಕವೇ ಬೇರೆ ಎನ್ನುವಷ್ಟು ಬದಲುಗೊಂಡ ಚಿತ್ರಗಳನ್ನು ಬರೆಯುವ ಶೈಲಿಯೂ ಅವರಿಗೆ ಸಿದ್ಧಿಸಿದೆ.




ನೀಲಾ ತನ್ನವಾರಿಗೆ ಸ್ನೇಹಿತೆಯರು ಜಾತ್ರೆಗೆ ಬಂದಿರುವುದನ್ನು ನೋಡುತ್ತಾಳೆ. ಅವರ ಸ್ನೇಹಿತೆಯರು ಸಹ ಅವಳನ್ನು 'ಇಲ್ಲಿಗೆ ಬಾ ಬಾ' ಎಂದು ಕರೆಯುವ ಸನ್ನಿವೇಶವನ್ನು ಸುಭಾಷ್ ಬಿಲ್ ಅವರು ಚಿತ್ರಿಸಿದ್ದಾರೆ. ಬಾಲವಾಡಿಯ ಮಕ್ಕಳಿಗೆ ಕಲಿಕೆಯ ಭಾಗದಂತೆ ಈ ಚಿತ್ರಗಳು ಕಂಡುಬರುತ್ತವೆ. ಪಿಥೋರಾವನ್ನು ಈ ರೀತಿಯಲ್ಲಿ ಬಳಸಿರುವುದು ಸುಭಾಷ್ ಅವರ ಸೃಜನಶೀಲತೆಗೆ ಸಾಕ್ಷಿಯಾಗಿದೆ. ಚುಕ್ಕಿಗಳ ಜೊತೆಗಿನ ಸಂಪರ್ಕವನ್ನು ಹೊಂದಿ ಈ ಚಿತ್ರಗಳನ್ನು ಬಿಡಿಸಿರುವುದು ವಿಶೇಷವಾಗಿದೆ. ಮೂಲ ಪಿಥೋರಾದಲ್ಲಿಯೂ ಪ್ರಮುಖ ಪಾತ್ರ ವಹಿಸುತ್ತವೆ ಈ ಚುಕ್ಕಿಗಳು. ಚುಕ್ಕಿಗಳನ್ನು ಧಾನ್ಯ ಹಾಗೂ ಪೂರ್ವಜರ ಆತ್ಮಗಳೆಂದು ಅವರು ಪರಿಭಾವಿಸಿಕೊಂಡಿದ್ದಾರೆ.

ಈ ಚಿತ್ರಗಳಲ್ಲಿ ಬಣ್ಣಗಳ ವೈವಿಧ್ಯವಂತೂ ತುಂಬ ಮೆಚ್ಚಿಕೊಳ್ಳಬಹುದಾದ್ದು, ಇಡೀ ಕಥಾಚಿತ್ರ ಪುಸ್ತಕದಲ್ಲಿ ನೀಲಾ ಮತ್ತು ಪೀಲಾ ಅವರು ಧರಿಸಿರುವ ಬಟ್ಟೆಗಳ ಬಣ್ಣಗಳಲ್ಲಿ ಯಾವುದೇ ಬದಲಾವಣೆಯನ್ನು ಮಾಡಿಲ್ಲ. ಅಲ್ಲದೇ ಜಾತ್ರೆಯಲ್ಲಿ ನಡೆಯುವ ಚಟುವಟಿಕೆಗಳನ್ನು ಸಹ ವಿವಿಧತೆಯಲ್ಲಿ ಬಿಡಿಸಿ ತೋರಿಸಲಾಗಿದೆ. ಜಾತ್ರೆ ಎಂದರೇನೆ ಬಹು ಸಂಸ್ಕೃತಿಯ ಸಂಕೇತ. ಹಾಗಾಗಿ ಅಲ್ಲಿನ ಜನರು ಒಂದೇ ರೀತಿಯಲ್ಲಿ ಶಿಸ್ತಿನ ನಡಿಗೆ ಇರುವುದಿಲ್ಲ ಎಂಬುವುದನ್ನು ಇಡೀ ಚಿತ್ರಗಳು ತೋರಿಸುತ್ತವೆ. ಉದಾಹರಣೆಗೆ, ಈ ಮೊದಲ ಚಿತ್ರದಲ್ಲಿ ಗಮನಿಸಬಹುದು. ಇಬ್ಬರು ವ್ಯಕ್ತಿಗಳು ಉಭಯ ಕುಶಲೋಪಾದಿಯಲ್ಲಿರಬಹುದು, ಏನನ್ನೋ ಕುಡಿಯುತ್ತಿರುವಂತೆಯೂ ಕಾಣುತ್ತಾರೆ. ಇನ್ನೊಬ್ಬ ವ್ಯಕ್ತಿಯು ಒಂದು ಕೈಯಲ್ಲಿ ಹಾವನ್ನೊ ಅಥವಾ ಖಡ್ಗವನ್ನೋ ಹಿಡಿದಿದ್ದಾನೆ. ಇನ್ನೊಂದು ಕೈಯಲ್ಲಿ ಕೋಳಿ ಆಕಾರದ ಪಕ್ಷಿಯನ್ನು ಹಿಡಿದಿದ್ದಾನೆ. ಈ ಚಿತ್ರಗಳು ಚುಕ್ಕಿಗಳಿಂದ ಕುಡಿದ್ದು, ಹಸಿರು



ಬಣ್ಣದಲ್ಲಿವೆ. ಕೆಂಪು ಬಣ್ಣದಿಂದ ರಚಿಸಿರುವ ಇನ್ನೊಬ್ಬ ವ್ಯಕ್ತಿಯ ಚಿತ್ರ ಎರಡು ಕೈಗಳನ್ನು ಮೇಲೆತ್ತಿ ನಿಂತಿದ್ದಾನೆ. ಮತ್ತೊರ್ವನು ಗಾಳಿಪಟವನ್ನು ಹಿಡಿದಿದ್ದಾನೆ. ಇನ್ನೊಬ್ಬನು ಯಾರನ್ನೋ ಕೈಬೀಸಿ ಕರೆಯುತ್ತಿದ್ದಾನೆ. ಮತ್ತೊರ್ವನು ನೆಗೆಯುತ್ತಿರುವ ದೃಶ್ಯಚಿತ್ರವಿದೆ. ನವಿಲಿನ ಚಿತ್ರವು ದ್ವಾರ ಬಾಗಿಲ ಮೇಲಿದೆ. ದ್ವಾರಕ್ಕೆ ಆಂಗ್ಲ ಭಾಷೆಯಲ್ಲಿ "Entrance" ಎಂದು ಬರೆದಿದೆ.

ಬಲೂನು ಮಾರುವ ಸನ್ನಿವೇಶದ ಚಿತ್ರಣವನ್ನು ಚಿತ್ರಕಲಾವಿದರು ತಂದಿದ್ದಾರೆ. ಪೀಲಾಳು ಸೈಕಲ್ಲಿನಲ್ಲಿ ಬಲೂನು ಮಾರುವವನನ್ನು ನೋಡಿ ಕೈ ಬೀಸಿ ಕರೆಯುತ್ತಿರುವ ಚಿತ್ರಣವಾಗಿದೆ. ಆದರೆ ನೀಲಾ 'ಇಲ್ಲಿ ಬೇಡ, ಬಾ' ಎಂದು ಅವಳ ಕೈಯನ್ನು ಜಗ್ಗಿ ಕರೆಯುತ್ತಿರುವಂತೆ ಈ ಚಿತ್ರಣವು ಕಾಣುತ್ತದೆ. ಮೂಲ ಪಿಥೋರಾದಲ್ಲಿ ಕುದುರೆಗಳ ಪಯಣದ ದೃಶ್ಯ ವೈಭವವೇ ಹೆಚ್ಚು ಕಾಣುತ್ತಿತ್ತು. ಅಲ್ಲದೇ ಅದು ಪಾರಂಪರಿಕವಾಗಿಯೂ ನಡೆದು ಬರುತ್ತಿತ್ತು. ಆದರೆ ಸುಭಾಷ್ ಬಿಲ್‌ರ ಈ ಜಾತ್ರೆಯ ವಿವಿಧ ಸನ್ನಿವೇಶಗಳ ಚಿತ್ರಗಳಲ್ಲಿ ಮತ್ತೊಂದು ಲೋಕವು ಕಾಣುತ್ತದೆ. ಹಾಗಾಗಿಯೇ ಸಂಪ್ರದಾಯದಿಂದ ಹೊರಳಿ ರೂಪಾಂತರಕ್ಕೆ ಬದಲಾಗುವ ಸಾಧ್ಯತೆಯನ್ನು ಹೊಸ ತಲೆಮಾರಿನ ಕಲಾವಿದರು ಮಾಡಿದ್ದಾರೆ. ಈ ದೃಷ್ಟಿಯಿಂದ ಬಿಲ್‌ರಲ್ಲಿ ಹೊಸ ಪಿಥೋರಾ ಯುಗವೊಂದು ಈ ತಲೆಮಾರಿನಿಂದ ಶುರುವಾಗುತ್ತಿದೆ ಎಂಬುವುದರಲ್ಲಿ ಯಾವ ಅನುಮಾನವು ಬೇಕಿಲ್ಲ.



ರಾಟೆಯ ಚಕ್ರದ ಹತ್ತಿರ ನೀಲಾ ಮತ್ತು ಪೀಲಾ ಹೋಗುವ ಸನ್ನಿವೇಶಗಳ ಚಿತ್ರಗಳನ್ನು ಬಿಡಿಸಲಾಗಿದೆ. ಆಧುನಿಕ ಮಾದರಿಯಲ್ಲಿ ಸಾಲಿನಲ್ಲಿ ನಿಂತು 'ಟಿಕೇಟ್' ಪಡೆದುಕೊಳ್ಳುವ ಸನ್ನಿವೇಶವನ್ನು ಚಿತ್ರಿಸಿದ್ದಾರೆ. ಚಿತ್ರಕಲಾವಿದನು ಅಲ್ಲಿ 'Queue' ಎಂಬ ಶೀರ್ಷಿಕೆಯ ಫಲಕವನ್ನು ನೆಟ್ಟಿರುವುದನ್ನು ಕಾಣಬಹುದು. ಒಂದಷ್ಟು ಜನ ಸಾಲಿನಲ್ಲಿ ನಿಂತಿರುವುದನ್ನು ಗಮನಿಸಬಹುದು. ಇಬ್ಬರು ವ್ಯಕ್ತಿಗಳು ತಿರುಗಿಸುತ್ತಿರುವ ರಾಟೆಯ ಬಳಿ ಬಂದು ಏರುವ ದೃಶ್ಯವನ್ನು ಕಾಣಬಹುದು. ಜಾತ್ರೆಯ ದೃಶ್ಯಗಳನ್ನು ಕಣ್ಣು ತುಂಬಿಕೊಂಡಿರುವ ಕಲಾವಿದನಿಂದ ಮಾತ್ರ ಇಂತಹ ಚಿತ್ರಗಳನ್ನು



ಬಿಡಿಸಲು ಸಾಧ್ಯ. ಆಧುನಿಕ ಕಾಲಘಟ್ಟದಲ್ಲಿ ಸಂಪ್ರದಾಯ ಮತ್ತು ಆಧುನಿಕತೆಯ ಮಿಶ್ರಣ, ದೇಸಿ ಮತ್ತು ವಿದೇಶಿ ಮಿಶ್ರಣ, ಶಿಷ್ಟ ಮತ್ತು ಪರಿಶಿಷ್ಟದ ಮಿಶ್ರಣ ಎಲ್ಲವೂ ಸಾಧ್ಯ ಎಂಬುದನ್ನು ಇಲ್ಲಿ ಬಳಸಿರುವ ಚಿತ್ರಗಳೇ ಸಾಕ್ಷಿಯಾಗಬಲ್ಲವು. ಈ ದೃಷ್ಟಿಯಿಂದ ನೋಡಿದಾಗ ಬಿಲ್ ಚಿತ್ರಕಲಾವಿದರು ಸಂಪ್ರದಾಯವನ್ನು ಉಳಿಸಿಕೊಳ್ಳುತ್ತಾ, ಆಧುನಿಕತೆಗೂ ತೆರೆದುಕೊಳ್ಳುವ ರೂಪಾಂತರದ ಘಟ್ಟದಲ್ಲಿದ್ದಾರೆಂಬುವುದು ಮಾತ್ರವೇ ಸತ್ಯ.

"ಗಂಡಸರೆ, ಹೆಂಗಸರೆ, ಹುಡುಗರೆ, ಹುಡುಗಿಯರೆ ಜಗತ್ತಿನ ಅತೀ ದೊಡ್ಡದಾದ ರಾಟೆಯನ್ನು ಹತ್ತಿರಿ ಆನಂದಿಸಿರಿ" ಎನ್ನುವುದಿದೆ. "ಸಾಲಾಗಿ ಬನ್ನಿ, ಟಿಕೇಟ್ ಕೌಂಟರ್‌ನಲ್ಲಿ ಹಣ ಕೊಟ್ಟು ಟಿಕೇಟ್ ಪಡೆಯಿರಿ" ಎಂಬುವುದು ಇದೆ. ಈ ಮಾತುಗಳನ್ನು ಗಮನಿಸಬಹುದು. ಅಲ್ಲದೇ ಚಿತ್ರದಲ್ಲಿಯೂ ಅದನ್ನು ಗಮನಿಸಬಹುದು. ಈ ಕಾರಣಕ್ಕೆ ಬಿಲ್‌ರು ರೂಪಾಂತರದ ಕಾಲಘಟ್ಟದಲ್ಲಿ ಉತ್ತಮವಾದ ಕ್ರಿಯಾತ್ಮಕ ಮತ್ತು ಸೃಜನಶೀಲಾತ್ಮಕ ಚಿತ್ರಗಳನ್ನು ಬರೆಯುತ್ತಿದ್ದಾರೆ.



ಟಿಕೇಟ್ ಪಡೆದುಕೊಂಡು ರಾಟೆಯಲ್ಲಿ ಹತ್ತುತ್ತಾರೆ. ಗಂಡಸರು ಕುಣಿಯುತ್ತಿರುವ, ಜಗಿಯುತ್ತಿರುವ ಮತ್ತು ರಾಟೆಯನ್ನು ಗೋಲಾಕಾರವಾಗಿ ನೂಕುತ್ತಿರುವಂತೆ ಚಿತ್ರಿಸಲಾಗಿದೆ. ಅಲ್ಲಿರುವ ಪೀಲಾ ಮತ್ತು ನೀಲಾ ಮೇಲ್ತುದಿಗೆ ಹೋಗಿರುವ ದೃಶ್ಯವನ್ನು ಚಿತ್ರಿಸಿದ್ದಾರೆ. ನೈಜ ಚಿತ್ರಣದ ಸೊಗಸುಗಾರಿಕೆ ಎದ್ದು ಕಾಣುತ್ತದೆ. ಮೇಲೆ ಹೋದ ಮೇಲೆ ಪೀಲಾ ಕೈಲಿದ್ದ ಬಲೂನನ್ನು ಬಿಟ್ಟಿರುವುದು ಕಾಣುತ್ತದೆ. ಹೀಗಾಗಿ ಅವಳಿಗೆ ಗಾಬರಿಯಾಗಿರಲು ಸಾಧ್ಯವಿದೆ ಎಂಬುವುದನ್ನು ತಿಳಿದುಕೊಳ್ಳಬಹುದು. ರಾಟೆಯ ಸೂತ್ತಲೂ ನವಿಲು ಮತ್ತು ವ್ಯಕ್ತಿ ಚಿತ್ರಗಳನ್ನು ಬಿಡಿಸಲಾಗಿದೆ.

ಒಂದು ಕಡೆ ಚಿತ್ರ ಮತ್ತೊಂದು ಕಡೆ ಚಿತ್ರದ ಕಥೆ ಎರಡೂ ಒಟ್ಟೊಟ್ಟಿಗೆ ಈ ಫೋಲ್ಡಿಂಗ್ ಕೃತಿಯಲ್ಲಿ ಕಾಣುತ್ತದೆ. ಹೀಗಾಗಿ ಪಿಥೋರಾ ಚಿತ್ರಗಳು ಹೊರಳುದಾರಿಗೆ ಬಂದು ಆಧುನಿಕವಾಗುತ್ತಿದೆ ಎನ್ನಬಹುದು.

ಡ್ರಮ್ ಬಾರಿಸುತ್ತ ಕುಣಿಯುತ್ತಿರುವ ಗುಂಪಿನ ದೃಶ್ಯ, ಪೀಲಾ ಮತ್ತು ನೀಲಾ ಇಬ್ಬರೂ ಕಾಣುವಂತೆ ಚಿತ್ರಗಳನ್ನು ತೆಗೆಯಲಾಗಿದೆ. ಅವರಿಬ್ಬರು ಆ ಗುಂಪಿನತ್ತ ಓಡುತ್ತಿರುವಂತೆ



ಚಿತ್ರಿಸಲಾಗಿದೆ. ಅವರೊಟ್ಟಿಗೆ ನಾಯಿಯೊಂದು ಹಿಂಬಾಲಿಸುತ್ತಿದೆ. ಆ ನಾಯಿಯನ್ನು ಅವರು ಡಾಗಿ (Doggy) ಎಂದು ಸಂಬೋಧಿಸುತ್ತಿದ್ದಾರೆ ಎನ್ನುವುದನ್ನು ಆ ಕೃತಿಯಲ್ಲಿ ಹೇಳಲಾಗಿದೆ. ಒಂದು ವೃತ್ತಾಕಾರದಲ್ಲಿ ಜನರು ಕುಣಿಯುತ್ತಿರುವಂತೆ ಚಿತ್ರಿಸಲಾಗಿದೆ. ಆ ಗುಂಪಿನ ಮಧ್ಯದಲ್ಲಿ ಡ್ರಮ್‌ಗಳನ್ನು ಬಾರಿಸುವ ಚಿತ್ರವಿದೆ. ಆ ಗುಂಪಿನ ಬಳಿ ಹೋಗಿ ನೀಲಾ ಮತ್ತು ಪೀಲಾ ನಿಂತಿರುವಂತೆ ಚಿತ್ರವಿದೆ.



ನೃತ್ಯದ ಗುಂಪಿನಿಂದ ಹೊರಬಂದ ಮೇಲೆ ಅವರಿಗೆ ಬಣ್ಣ ಬಣ್ಣದ ಅಂಗಡಿಗಳಿರುವ ರಸ್ತೆಯು ಕಾಣುತ್ತದೆ. ಒಂದು ಅಂಗಡಿಗೆ 'ToyShop' ಎಂದು ಬರೆಯಲಾಗಿದೆ. ಈ ಅಂಗಡಿಯಲ್ಲಿ ಗೊಂಬೆಗಳು ಅನೇಕ ಬಗೆಯಲ್ಲಿ ಇರುವುದು ಚಿತ್ರದ ಮೂಲಕ ತೋರಿಸಲಾಗಿದೆ. ಹೆಣ್ಣು ಗೊಂಬೆಗಳು, ಆನೆ, ಕುದುರೆ, ಮೀನು, ಆಮೆ ಮುಂತಾದ ಗೊಂಬೆಗಳನ್ನು ಅಂಗಡಿಯಲ್ಲಿ ನೇತುಹಾಕಿರುವುದನ್ನು ಗಮನಿಸಬಹುದು. ಮತ್ತೊಂದು ಅಂಗಡಿಯಲ್ಲಿ ಸಿಹಿತಿಂಡಿಗಳಿರುವ ಚಿತ್ರಗಳಿವೆ. ನೀಲಾಳಿಗೆ ಸಿಹಿ ತಿಂಡಿಯ ಅಂಗಡಿ ಇಷ್ಟವೆಂಬಂತೆ ಆ ಕಡೆ ಕೈ ಬೀಸಿ ತೋರಿಸುತ್ತಿರುವ ಚಿತ್ರವಿರುವುದನ್ನು ಕಾಣಬಹುದು.

ಪೀಲಾಳಿಗೆ ಐಸ್ ಕ್ರೀಂ ಇಷ್ಟವೆಂದು, ಐಸ್ ಕ್ರೀಂ ಮಾರುವವನನ್ನು ಹುಡುಕುತ್ತಾರೆ. ಹಾಗೆ ಹುಡುಕುವಾಗ ಒಂದು ದೊಡ್ಡ ಮರದ ಹತ್ತಿರ ಬರುತ್ತಿರುವಾಗ ಹಾವೊಂದು ಕಾಣಿಸುವ ಚಿತ್ರವನ್ನು ತೆಗೆಯಲಾಗಿದೆ. ಹಾವು ಮರದ ಬುಡದ ಬಿಲದೊಳಗೆ ಹೋಗುತ್ತಿರುವ ಚಿತ್ರವನ್ನು ಬಿಡಿಸಲಾಗಿದೆ.



ನೀಲಾ ಮತ್ತು ಪೀಲಾ ಐಸ್ ಕ್ರೀಂ ಮಾರುವವನ ಹತ್ತಿರ ಬರುತ್ತಾರೆ. ಈ ಚಿತ್ರದಲ್ಲಿ ಅನೇಕ ಮಕ್ಕಳು ಐಸ್ ಕ್ರೀಂ ತೆಗೆದುಕೊಂಡು ತಿನ್ನುತ್ತಿರುವ ದೃಶ್ಯವನ್ನು

ಕಾಣಬಹುದು. ಐಸ್ ಕ್ರೀಂ ಮಾರುವವನು "ಚೋಕೋ ಬಾರ್, ಕೋನ್ ಐಸ್ ಕ್ರೀಂ, ಪೈನಾಪಲ್, ಪಿಸ್ತಾ ಐಸ್ ಕ್ರೀಂ" ಎಂದು ಕೂಗುತ್ತಾನೆ. ಪೀಲಾ ಚಾಕಲೇಟ್ ಹಾಗೂ ನೀಲಾ ಚೋಕೋ ಬಾರ್ ಐಸ್ ಕ್ರೀಂ ನ್ನು ತೆಗೆದುಕೊಂಡು ತಿನ್ನುತ್ತಾರೆಂದು ಈ ಕೃತಿಯಲ್ಲಿ ಹೇಳಲಾಗಿದೆ.



ಜಾತ್ರೆಗೆ ಹೋದಾಗ ಫೋಟೋ ತೆಗೆಸಿಕೊಳ್ಳುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಪೀಲಾ ಫೋಟೊ ತೆಗೆಸಿಕೊಳ್ಳುವ ಬಯಕೆಯನ್ನು ಅಭಿವ್ಯಕ್ತಿಸಿ ಸ್ಟುಡಿಯೋದಲ್ಲಿ ಮೊದಲು ಹೋಗಿ ನಿಲ್ಲುತ್ತಾಳೆ.



ಈ ಚಿತ್ರದಲ್ಲಿ ಫೋಟೋ ತೆಗೆಸಿಕೊಳ್ಳುವ ಮೊದಲು ಶೃಂಗಾರ ಮಾಡಿಕೊಳ್ಳಬೇಕಾದ ಕನ್ನಡಿ ಮತ್ತೀತರ ಅಲಂಕಾರಿಕ ವಸ್ತುಗಳನ್ನು ಇಟ್ಟಿರುವುದನ್ನು ಕಾಣಬಹುದು. ಅವರಿಬ್ಬರು ಫೋಟೋ ತೆಗೆಸಿಕೊಂಡು ಹೊರಗೆ ಬರುತ್ತಾರೆ.

ಇಬ್ಬರು ಮಕ್ಕಳು ತಮ್ಮ ಕಣ್ಣಿನ ನೋಟದಲ್ಲಿ ಕಂಡದ್ದನ್ನು ಅನುಭವಿಸುವ ಖುಷಿಯನ್ನು ಈ ಚಿತ್ರಗಳಲ್ಲಿ ಕಾಣಬಹುದು.



ಈ ಚಿತ್ರದಲ್ಲಿ ಬಿಲ್ಲು ಬಾಣಗಳನ್ನು ಹಿಡಿದಿರುವ ಜನರನ್ನು ಕಾಣಬಹುದು. ಕೆಲವರು ಕತ್ತಿಗಳನ್ನು ಹಿಡಿದುಕೊಂಡು ನಿಂತಿದ್ದಾರೆ. ಮತ್ತೋರ್ವನು ಚಾಕುವಿನಿಂದ ಎದುರಿಗೆ ಇರುವವನಿಗೆ ತಿವಿಯುತ್ತಿರುವ ಚಿತ್ರಣವಿದೆ. ಈ ಚಿತ್ರಗಳನ್ನು ನೋಡಿದಾಗ ಏನೋ ಗಲಾಟೆಯು ಜರುಗುತ್ತಿರುವಂತೆ ಕಾಣುತ್ತದೆ. ಇದನ್ನು ನೀಲಾ ಮತ್ತು ಪೀಲಾ ನೋಡುತ್ತಿದ್ದಾರೆ ಎನ್ನುವಂತೆ ಚಿತ್ರಿಸಲಾಗಿದೆ. ಜಾತ್ರೆಯು ಖುಷಿಯಿಂದ ಆರಂಭವಾಗಿ ಗಲಾಟೆಯ ದೃಶ್ಯದೊಂದಿಗೆ ಮುಕ್ತಾಯವಾಗುತ್ತಿರುವುದು ಸೋಜಿಗದ ಸಂಗತಿಯಾಗಿದೆ. ಅನೇಕ ಜಾತ್ರೆಗಳಲ್ಲಿ ಇದು ಸಹಜವಾಗಿ ಬಿಟ್ಟಿದೆ. ಈ ಚಿತ್ರದಲ್ಲಿ ತಾವು ತೆಗೆಸಿದ ಫೋಟೋಗಳನ್ನು ಇಬ್ಬರೂ ಕೈಯಲ್ಲಿ ಹಿಡಿದುಕೊಂಡು ಹೋಗುತ್ತಿರುವದನ್ನು ಕಾಣಬಹುದು.





ನೀಲಾ ಮತ್ತು ಪೀಲಾ ಮನೆಯ ಕಡೆಗೆ ಹೊರಡುತ್ತಿರುವ ದೃಶ್ಯವನ್ನು ಕಾಣಬಹುದು. ಜಾತ್ರೆಯ ಕಡೆಗೆ ಹಿಂದಿರುಗಿ 'ಮತ್ತೇ ಸಿಗೋಣ ಜಾತ್ರೆಯೆ, ಮುಂದಿನ ವರ್ಷ' ಎಂದು ಕೂಗಿ ಹೇಳುತ್ತಾರೆ.

ಈ ಚಿತ್ರಗಳನ್ನೆಲ್ಲ ಗಮನಿಸಿದಾಗ ಸಾಮಾನ್ಯದವರಿಗೆ ಇವು ಮೇಜರ ಚಿತ್ರಗಳಲ್ಲ ಎಂದು ಅನಿಸಬಹುದು. ಇವು ಮೈನರ್ ಚಿತ್ರಗಳಾಗಿರುವುದರಿಂದಲೇ ಈ ಚಿತ್ರಗಳಿಗೆ ಮಹತ್ವವಿರುವುದು. ಸುಭಾಷ್ ಬಿಲ್ ಈ ಚಿತ್ರಗಳನ್ನು ಬರೆಯುವಾಗ ಮಹತ್ತರವಾದ ಉದ್ದೇಶವೇನನ್ನು ಇಟ್ಟುಕೊಳ್ಳದೆ ಇರಬಹುದು ಅಥವಾ ನಾನು ಹೊಸರೂಪದಲ್ಲಿ ಬಿಲ್ ಚಿತ್ರಗಳನ್ನು ಬರೆಯಬೇಕೆಂದು ಸಹ ಅನಿಸದೇ ಇರಬಹುದು. ಆದರೆ ಬರೆದ ಮೇಲೆ ಈ ಚಿತ್ರಗಳಿಗೊಂದು ಮಹತ್ವವಂತು ಇದ್ದೇ ಇದೆ. ಈ ಚಿತ್ರಗಳನ್ನು ನೋಡಿದರೆ, ಒಂದು ಕಥಾ ವೃತ್ತವನ್ನು ಹೆಣೆಯುವಷ್ಟು ಶಕ್ತಿದಾಯಕವಾದವು ಎಂದು ಅನಿಸದೆ ಇರಲಾರದು.

ಸಾಂಪ್ರದಾಯಿಕ ಪಿಥೊರಾದಿಂದ ರೂಪಾಂತರವಾದ ಮೇಲೆ ಬಿಲ್‌ರ ಚಿತ್ರಗಳಿಗೆ ಮಹತ್ವವು ಒದಗಿ ಬಂದಿದೆ. ತಾರಾ ಬುಕ್ಸ್ ಪ್ರೈವೆಟ್ ಲಿಮಿಟೆಡ್, ಇಂಡಿಯಾ ಮತ್ತು ತಾರಾ ಪಬ್ಲಷಿಂಗ್ ಲಿಮಿಟೆಡ್, ಯು. ಕೆ. ಇವು ಸುಭಾಷ್ ಅವರ ಬಳಿ ಚಿತ್ರಗಳನ್ನು ಬರೆಸಿ ಪುಸ್ತಕ ರೂಪವಾಗಿ ತಂದಿದ್ದಾರೆ. ಇಂತಹ ಹೊಸ ಪ್ರಯತ್ನಗಳಿಂದಾಗಿಯೇ 'ಬೆಸ್ಟ್ ಚಿಲ್ಡ್ರನ್ ಪಬ್ಲಿಷ್ ಆಫ್ ದ ಇಯರ್ ಇನ್ ಏಶಿಯಾ ೨೦೧೩' ರಲ್ಲಿ ಬೋಲೊಗ್ನಾ ಬಹುಮಾನ ದೊರೆತಿದೆ. ಅಲ್ಲದೇ ೨೦೧೪ ರ 'ಇಂಟರ ನ್ಯಾಷನಲ್ ಬುಕ್ ಇಂಡಸ್ಟ್ರಿ ಎಕ್ಸಲೆನ್ಸ್ ಆವಾರ್ಡ್' ಕೂಡ ಬಂದಿದೆ. ಈ ಬಹುಮಾನಗಳಿಗೆ ಅವರ ಪಿಥೋರಾ ಶೈಲಿಯಂತಹ ವಿವಿಧ ಸಾಂಪ್ರದಾಯಿಕ ಚಿತ್ರ ಶೈಲಿಗಳನ್ನು ಮಾರುಕಟ್ಟೆಗೆ ಪರಿಚಯಿಸುತ್ತಿರುವ ಕಾರಣವೂ ಎಂಬುದನ್ನು ಮರೆಯುವಂತಿಲ್ಲ. ಈ ಹಿನ್ನೆಲೆಯಲ್ಲಿ ಸುಭಾಷ್ ಬಿಲ್ ಹೊಸ ತಲೆಮಾರಿನ ಪಿಥೋರಾ ಚಿತ್ರಕಲಾವಿದರಲ್ಲಿ ಭರವಸೆಯ ಕಲಾವಿದರಾಗಿದ್ದಾರೆ.

### ೬.೧.೨ ಶೇರ ಸಿಂಗ್ ಬಿಲ್ ಚಿತ್ರಕಲೆ: ರೂಪಾಂತರ

ಪಿಥೋರಾ ಚಿತ್ರಕಲೆಯ ರೂಪಾಂತರಕ್ಕೆ ಕೆಲವು ಶಿಕ್ಷಣ ಸಂಸ್ಥೆಗಳು ಮತ್ತು ಸರ್ಕಾರಿ ಸಂಸ್ಥೆಗಳು ಕಾರಣವಾಗಿವೆ. ಅದರಲ್ಲಿ ಶೇರಸಿಂಗ್‌ನ ಚಿತ್ರಕಲೆಯನ್ನು ಟಾಟಾ ಸೆಂಟರ್, ಟೆಕ್ನಾಲಜಿ ಮತ್ತು ಡಿಸೈನ್, ಐಐಟಿ, ಬಾಂಬೆ ಅವರು ಅಭಿವೃದ್ಧಿ ಪಡಿಸುವ ಹಿನ್ನೆಲೆಯನ್ನು ಹೊಂದಿದ್ದಾರೆ. ಹಾಗಾಗಿಯೇ ಸಾಂಪ್ರದಾಯಿಕ ಪಿಥೋರಾದ ಪ್ರಭಾವದಿಂದ ಬರೆಯಲು ಹೇಳಿಸಿ ಬಿಡಿಸಿರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿಯೇ ಬಂದ ಚಿತ್ರಕಲಾಕೃತಿಯೇ 'ಎ ಬಿಲ್ ಸ್ಟೋರಿ'. ಬಿಲ್‌ರ ಚಿತ್ರಕಲೆಗಳಿಗೆ ಮಾನವ ಸಂಗ್ರಹಾಲಯ, ಭೂಪಾಲನವರು ಹಿಂದಿನಿಂದಲೂ ಬೆಂಬಲಿಸುತ್ತಾ ಬಂದಿದ್ದಾರೆ. ಇವರ ಬೆಂಬಲವೂ ಪಿಥೋರಾದಲ್ಲಿ ಅನೇಕ ಬದಲಾವಣೆಗಳು ಆಗಲು ಕಾರಣವಾಗಿದೆ.

ಶೇರ ಸಿಂಗ್‌ನಿಗೆ ಜಂಬು, ಬೂರಿಬಾಯಿ, ರಾಮಸಿಂಗ್, ರಮೇಶ ಕತ್ತಾರ ಮತ್ತು ಸುಭಾಷ್ ಬಿಲ್ ಅವರು 'ಎ ಬಿಲ್ ಸ್ಟೋರಿ' ಬರೆಯಲು ಸಹಕರಿಸಿದ್ದಾರೆ. ಅಲ್ಲದೆ ಈ ಕಲಾವಿದರೆಲ್ಲರೂ ಪಿಥೋರಾ ಪ್ರಭಾವದಿಂದಾಗಿ ಹೊಸ ಮತ್ತು ವಿಭಿನ್ನವಾಗಿ ಚಿತ್ರಗಳನ್ನು ಬರೆಯಲು ಶುರು ಮಾಡಿದ್ದಾರೆ. ಇದು ಪಿಥೋರಾದಲ್ಲಾಗುತ್ತಿರುವ ಹೊಸ ಶಕೆ ಎಂದು ಬೇಕಾದರೂ ಭಾವಿಸಬಹುದು. ಅವರೆಲ್ಲರೂ ಒಟ್ಟುಗೂಡಿಕೊಂಡು ಚಿತ್ರಕಲೆಯನ್ನು ಪೋಷಿಸುತ್ತಿದ್ದಾರೆ. ವರ್ಷಕ್ಕೊಮ್ಮೆ ಅಥವಾ ಮೂರು ವರ್ಷಕ್ಕೊಮ್ಮೆ ತಮ್ಮ ಊರುಗಳಲ್ಲಿ ನಡೆಯುವ ಮೂಲ ಪಿಥೋರಾದ ಆಚರಣೆಯನ್ನು ನಡೆಸಿಕೊಂಡು ಬರುತ್ತಾರೆ.

ಶೇರಸಿಂಗ್‌ನ 'ಎ ಬಿಲ್ ಸ್ಟೋರಿ'ಯು ಇಂಗ್ಲೀಷ್ ಭಾಷೆಯಲ್ಲಿ ಪ್ರಕಟಗೊಂಡಿದೆ. ಇದನ್ನು 'ತುಲಿಕಾ' ಪಬ್ಲೀಷರ್ಸ್ ಅವರು ೨೦೧೫ ರಲ್ಲಿ ಹೊರತರುತ್ತಾರೆ. ಹೀಗೆ ಪಿಥೋರಾ ಚಿತ್ರಕಲೆಯ ಬಗೆಗೆ ಹೊರಗಿನ ಆಸಕ್ತಿಗಳು ಸಾಕಷ್ಟು ಕೆಲಸ ಮಾಡಿವೆ. ಸಾಂಪ್ರದಾಯಿಕ ಪಿಥೋರಾದಿಂದ ಹೊರಳಿದರೂ ಪಿಥೋರಾದ ಸಾಂಸ್ಕೃತಿಕ ಅನನ್ಯತೆಗೆ ಯಾವುದೇ ಮಾರಕವಾಗಿಲ್ಲ. ಬಿಲ್‌ರು ಎರಡನ್ನೂ ಅಷ್ಟೇ ಪ್ರೀತಿಯಿಂದ ಪೋಷಿಸಿಕೊಂಡು ಹೋಗುತ್ತಿದ್ದಾರೆ. ಇದರ ಪ್ರತಿಫಲವಾಗಿ ಅವರ ಆರ್ಥಿಕ ಸ್ಥಿತಿ ಕೂಡ ಸ್ವಲ್ಪ ಸುಧಾರಿಸಿದೆ. ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದ ಕಮ್ಮಟಗಳಿಗೆ ಹೋಗುತ್ತಿರುವುದರಿಂದ ಅವರ ಚಿತ್ರಕಲೆಗೆ ಹೊಸ ಹೊಸ ವಸ್ತು ವೈವಿಧ್ಯಗಳು ಬಂದು ಸೇರಿಕೊಳ್ಳುತ್ತಿವೆ. ಅನೇಕ ಚಿತ್ರಪ್ರದರ್ಶನಗಳನ್ನು ಮಾಡುವ ಮೂಲಕ ಕಲಾಕೃತಿಗಳನ್ನು ಮಾರಾಟ ಮಾಡುತ್ತಿದ್ದಾರೆ.

ಆಕಾಶದಲ್ಲಿ ನಕ್ಷತ್ರಗಳು ಮಿನುಗುತ್ತಿವೆ. ಆ ನಕ್ಷತ್ರಗಳು ಮಸುಕಾಗಿ ಕೆಳಗೆ ಬೀಳುತ್ತಿವೆ ಎಂದು ಭಾಸವಾಗುತ್ತದೆ. ಆ ನಕ್ಷತ್ರ ಪುಂಜಗಳ ನಡುವೆ ಚಂದ್ರನು ಪ್ರಕಾಶಮಾನವಾಗಿ

ಬೆಳಗುತ್ತಿದ್ದಾನೆ. ಹುಂಜವು ಮಲಗಿರುವ ಜಗತ್ತನ್ನು ಎಬ್ಬಿಸಲು ಕುಕ್ಕು..ಕ್ಕು..ಕುಕ್ಕೂ... ಎಂದು ಕೂಗಲು ಸಜ್ಜಾಗುತ್ತಿದೆ. ಆದರೆ ಹುಂಜವು ತನ್ನ ಧ್ವನಿಯನ್ನು ಕಳೆದುಕೊಂಡು, ಕೂಗಲು ಅಶಕ್ತವಾಗಿದೆ.

ಈ ಚಿತ್ರವನ್ನು ಸೂಕ್ಷ್ಮವಾಗಿ ಗಮನಿಸಿ ನೋಡಿದರೆ, ಚಿತ್ರದಲ್ಲಿ ಕೆಲವು ನಕ್ಷತ್ರಗಳು ಹತ್ತಿರದಲ್ಲಿರುವಂತೆ ಕಾಣುತ್ತವೆ. ಕೆಲವು ಸ್ವಲ್ಪ ದೂರದಲ್ಲಿವೆ. ಇನ್ನೂ ಕೆಲವು ತುಂಬಾ ದೂರದಲ್ಲಿವೆ. ಬಿಲ್‌ರಿಗೆ ಚಿತ್ರ ಬರೆಯಬೇಕಾದರೆ ದೂರಗಾಮಿತ್ವವನ್ನು ಅಳವಡಿಸಿಕೊಂಡು ಬರೆದಿರುವುದನ್ನು ಕಾಣಬಹುದು. ಅರ್ಧ ಚಂದ್ರನು, ಸೂಸುವ ಬೆಳಕಿಗೆ ಹುಂಜವು ತನ್ನ ಬಾಯಿ ತೆರೆದಿರುವುದನ್ನು ಕಾಣಬಹುದು.



ಈ ಚಿತ್ರದಲ್ಲಿ ಸೂರ್ಯೋದಯವಾಗಿ ಸುಡು ಬಿಸಿಲಿಗೆ ತಿರುಗಿರುವುದನ್ನು ಕಾಣಬಹುದು. ಸುಡು ಬಿಸಿಲನ್ನು ಪ್ರತಿನಿಧಿಸಲು ಸೂರ್ಯನ ಸುತ್ತಲೂ ಪ್ರಕಾಶಿಸುವ ಗೆರೆಗಳನ್ನು ಬಿಡಿಸಿರುವುದನ್ನು ಕಾಣಬಹುದು. ಈ ಸುಡು ಬಿಸಿಲಿನಿಂದಾಗಿ ಹುಂಜದ ಗಂಟಲು ಒಣಗಿ, ತುಂಬಾ ನಿರಡಿಕೆಯಾಗಿರುವುದರಿಂದ ನೀರನ್ನು ಹುಡುಕಲು ಪ್ರಯತ್ನ ಮಾಡುತ್ತಿರುವುದನ್ನು ಚಿತ್ರದ ಕಥೆಯು ಅಭಿವ್ಯಕ್ತಿಸುತ್ತದೆ. ಎಲೆಯಿಲ್ಲದ ಮರವು ನೀರಿನ ಕೊರತೆಯಿಂದ ಒಣಗಿದೆ, ಬಿಲ್ ಮನೆಗಳನ್ನು ದಿಬ್ಬದ ಮೇಲೆ ಕಟ್ಟಿರುವಂತೆ ಚಿತ್ರಿಸಲಾಗಿದೆ. ಈ ಗುಡ್ಡದ ದಿಬ್ಬಗಳಿಗೆ ಹೊರ ರೇಖೆಯನ್ನು ಚಿತ್ರಿಸಿರುವುದರಿಂದ ಚಿತ್ರವು ಸಮರ್ಥವಾಗಿ ಕಾಣುತ್ತದೆ. ಬಿಲ್‌ರ ಮನೆಯ ಮುಂದೆ





ಯಾವಾಗಲೂ ಒಂದು ಕಟ್ಟಿಗೆಯಿಂದ ಮಾಡಿದ ಚಿಕ್ಕ ಸ್ಟ್ಯಾಂಡ್ ಇರುತ್ತದೆ. ಅವರು ಅದರ ಮೇಲೆ ತಮ್ಮ ಮನೆಯಲ್ಲಿಯ ಅಡುಗೆ ಮಾಡುವ ಮಡಿಕೆ, ಪಾತ್ರೆಗಳನ್ನು ಇಟ್ಟಿರುತ್ತಾರೆ. ಅದೇ ರೀತಿಯಲ್ಲಿ ಚಿತ್ರದಲ್ಲಿಯೂ ಕೂಡ ಹುಂಜ ಕುಳಿತಿರುವ ಮನೆಯ ಮುಂದೆ ನೀರಿನ ಮಡಿಕೆಗಳನ್ನು ಕೂಡ ಚಿತ್ರಿಸಲಾಗಿದೆ. ಅಲ್ಲದೇ ಅಲ್ಲಿ ಒಣಗಿದ ಮರವನ್ನು ನೀರಿನ ಅಭಾವದ ಸಂಕೇತದಂತೆ ಚಿತ್ರಿಸಲಾಗಿದೆ.

ಪಿಥೋರಾ ಚಿತ್ರಕಲೆಯ ಈ ಮೇಲಿನ ಚಿತ್ರಗಳಲ್ಲಿ ಒಂದಂಶವನ್ನು ಗುರುತಿಸಬಹುದು. ಮೊದಲಿನ ಚಿತ್ರದಲ್ಲಿ ಚಂದ್ರ, ಎರಡನೆಯ ಚಿತ್ರದಲ್ಲಿ ಸೂರ್ಯನ ಚಿತ್ರಗಳನ್ನು ಬಿಡಿಸಲಾಗಿದೆ. ಈ ಸೂರ್ಯ-ಚಂದ್ರರ ಚಿತ್ರಗಳು ಮೂಲ ಪಿಥೋರಾದಲ್ಲಿಯೂ ಇವೆ. ಇದರ ಪ್ರಭಾವದಿಂದಾಗಿಯೇ ಈ ಚಿತ್ರಗಳಲ್ಲಿಯೂ ಸೂರ್ಯ-ಚಂದ್ರನ ಚಿತ್ರಗಳಿವೆ ಎಂಬುವುದನ್ನು ಗಮನಿಸಬಹುದು. ಮುಂದಿನ ಚಿತ್ರಗಳನ್ನು ಗಮನಿಸಿದಾಗ ಆ ಪ್ರದೇಶದಲ್ಲಿ ನೀರಿಲ್ಲದೇ ಜನರು ಕಾದಾಡುತ್ತಿರುವುದು ಕಂಡು ಬರುತ್ತದೆ.

ಆ ಗ್ರಾಮದಲ್ಲಿ ಎಲ್ಲರಿಗೂ ಸೇರಿದ ಒಂದೇ ನೀರಿನ ಕೊಳವಿದೆ. ಅದರಲ್ಲಿ ಕೂಡ ಸ್ವಲ್ಪವೇ ನೀರು ಉಳಿದಿದೆ. ಆ ನೀರಿಗಾಗಿ ಅಲ್ಲಿನ ಜನರೆಲ್ಲರೂ ಕಾದಾಡುತ್ತಿದ್ದಾರೆ. ಹುಂಜನಿಗೂ ಅದರಲ್ಲಿಯೇ ಸ್ವಲ್ಪ ನೀರು ಕುಡಿಯಲು ಬೇಕಾಗಿತ್ತು. ಆದರೆ ಆ ಹುಂಜವನ್ನು ಹೊರಗೆ ತಳ್ಳಲಾಗಿದೆ. ಕೆಲವೇ ಕ್ಷಣಗಳಲ್ಲಿ ಎಲ್ಲ ನೀರು ಖಾಲಿಯಾಗಿ ಕೊನೆಯ ಮೀನುಗಳು ಕೂಡ ತನ್ನ ಪ್ರಾಣವನ್ನು ಉಳಿಸಿಕೊಳ್ಳಲು ಸಾಧ್ಯವಾಗದೆ ಹೋಗಿರುವುದನ್ನು ಕಾಣಬಹುದು. ಏಡಿ, ಆಮೆ, ಜರಿಗಳು ಹೊರಬರುತ್ತಿವೆ.



ಈ ಚಿತ್ರವು ಭೀಕರ ಬರಗಾಲದ ಸನ್ನಿವೇಶದ ಚಿತ್ರಣವನ್ನು ಕೊಡುತ್ತದೆ. ಕಲಾವಿದ ಶೇರ ಸಿಂಗ್‌ನ ಕಲಾ ವೈವಿಧ್ಯತೆಯನ್ನು ಇಲ್ಲಿ ಗಮನಿಸಬಹುದು. ಹುಂಜವು ಆ ಕೊಳದಿಂದ ಬಹುದೂರ ನಿಂತು ನೀರಿಗಾಗಿ ಜನ-ಜಾನುವಾರುಗಳು ಪಡುತ್ತಿರುವ ಪಾಡನ್ನು ತನ್ನ ಕಣ್ಣುಗಳಿಂದ ನೋಡುತ್ತಿದೆ. ಪ್ರಾಣಿಗಳಲ್ಲಿ ಕೆಲವು ಕೊಳಕ್ಕೆ ವಿಮುಖವಾಗಿ ಚಲಿಸುತ್ತಿರುವಂತೆ ಚಿತ್ರಿಸಲಾಗಿದೆ. ಇನ್ನೂ ಕೆಲವು ಪ್ರಾಣಿಗಳು ನೀರನ್ನು ನೋಡುತ್ತ ನಿಂತಿರುವಂತೆ ಕಾಣುತ್ತದೆ. ನೀರಿಗಾಗಿ ಪರಿತಪಿಸುತ್ತಿರುವ ಈ ಆಧುನಿಕ ಯುಗವನ್ನು ಚಿತ್ರಕಾರ ಯಥಾರ್ಥವಾಗಿ ಚಿತ್ರಿಸುರುವಂತೆ ಕಾಣುತ್ತದೆ. ಹನಿ ನೀರು ಎಷ್ಟು ಅಮುಲ್ಯವಾದದ್ದು ಎನ್ನುವುದು ಹುಂಜಕ್ಕೆ ಮನವರಿಕೆಯಾದಂತಿದೆ.

ಬಿಲ್‌ರ ಈ ಹಳ್ಳಿಯಾದ ಝೇರ್ ಗ್ರಾಮದಲ್ಲಿ ಬೂರಿಬಾಯಿಯು ಎಲ್ಲರಿಗಿಂತ ಬುದ್ಧಿವಂತ ಹೆಣ್ಣು ಮಗಳು. 'ನಮಗೆ ಸಹಾಯದ ಅವಶ್ಯಕತೆಯಿದೆ, ನಡೆಯಿರಿ ಹೋಗೋಣ, ಬಡವಾನನ್ನು ಹುಡುಕೋಣ' ಎಂದು ಅವಳು ಎಲ್ಲರಿಗೂ ಹೇಳುತ್ತಾಳೆ. ಗೋಳಿಡುವುದನ್ನು ಬಿಡಿ ಎಂದಾಗ ಹುಂಜವು "ಇಲ್ಲ.....! ಬಡವಾನಿಗೆ ನನ್ನನ್ನು ಕೊಂದು ತಿನ್ನಬೇಕಿದೆ" ಎಂದಿತು. ಇದು ಸಾಕಿದ ಹುಂಜವಾಗಿದೆ.

ಈ ಚಿತ್ರದಲ್ಲಿ ಬೂರಿಬಾಯಿ ಚಿತ್ರವು ಗಮನ ಸೆಳೆಯುತ್ತದೆ. ಅವಳ ಚಿತ್ರವು ಅವಳು ಧರಿಸಿರುವ ದಿರಿಸನ್ನು ಗಮನಿಸಬಹುದು. ಕಾಲಿಗೆ ಬೂಟು ಮತ್ತು ಕಾಲು ಚೀಲಗಳನ್ನು ಧರಿಸಿದ್ದಾಳೆ. ಮೂಲ ಪಿಥೋರಾದಲ್ಲಿಯೂ ಪಿಥೋರಾ ಬಾಬಾನ ಬೂಟು ಮತ್ತು ಕಾಲು ಚೀಲಗಳನ್ನು ಧರಿಸಿರುವ ಚಿತ್ರಗಳನ್ನು ಕಾಣಬಹುದು. ಅದೇ ರೀತಿ ಇಲ್ಲಿಯೂ ಕೂಡ ಶೇರಸಿಂಗ್‌ನು ತನ್ನ ತಾಯಿಗೆ ಬೂಟು ಮತ್ತು ಕಾಲು ಚೀಲಗಳನ್ನು ಚಿತ್ರಿಸಿದ್ದಾನೆ.



ಈ ಚಿತ್ರಕಥಾ ರೂಪದಲ್ಲಿ ಕಲಾವಿದರೇ ಪಾತ್ರಗಳಾಗಿ ಬಂದಿವೆ. ಆ ಹುಂಜವು ತನ್ನ ಅಳಲನ್ನು ಬೂರಿಬಾಯಿಯ ಬಳಿಗೆ ಬಂದು ಹೇಳಿಕೊಳ್ಳುತ್ತದೆ. ಅದಕ್ಕೆ ಶೇರ ಸಿಂಗ್ ಒಂದು ಉಪಾಯ ಮಾಡಿ ಆ ಹುಂಜವನ್ನು ಉಳಿಸಲು ಆಲೋಚಿಸುತ್ತಾನೆ. ಅದು ಹೀಗಿದೆ :



ಶೇರ ಸಿಂಗ್‌ನಲ್ಲಿ ಒಂದು ಉಪಾಯವಿತ್ತು. ಅವನು ಹುಂಜಕ್ಕೆ ಒಣಗಿದ ಎಲೆಗಳಿಂದ ಮುಚ್ಚತೊಡಗಿದನು. "ಆ ಹುಂಜವು ಏನು ಮಾಡುತ್ತಿರುವೆ ಶೇರ್ ಸಿಂಗ್‌ಜೀ" ಎಂದು ಹುಂಜವು ಕೇಳಿತು. ಆಗ ಅವನು "ಅರೇ... ಹೀಗೆ ಎಲೆ ಮುಚ್ಚುವುದರಿಂದ ನಿನ್ನನ್ನು ಯಾರೂ ಗುರುತು ಹಿಡಿಯಲು ಸಾಧ್ಯವಿಲ್ಲ" ಎಂದು ಶೇರ ಸಿಂಗ್

ಹೇಳಿದನು. ಪ್ರತಿ ಚಿತ್ರಗಳು ಸಹ ಚುಕ್ಕಿಗಳ ಸಹಾಯದಿಂದಲೇ ಮಾಡಿದ್ದಾರೆ. ಆದರೆ ಅಲ್ಲಿ ಎಲೆಗಳಿಗೆ ಚುಕ್ಕಿಗಳನ್ನು ಬಳಸಿಲ್ಲ. ಈ ರೀತಿ ಮಾಡಿರುವುದು ಆ ಚಿತ್ರಕ್ಕೆ ಪುಷ್ಟಿ ಕೊಟ್ಟಿರುತ್ತದೆ. ಆ ಎಲೆಗಳನ್ನು ಚುಕ್ಕಿಗಳಿಂದ ಮಾಡಿದ್ದರೆ, ಹುಂಜವನ್ನು ಎಲೆಗಳಿಂದ ಮುಚ್ಚುವಾಗ ಚಿತ್ರಕ್ಕೆ ಸ್ಪಷ್ಟತೆ ಬರುತ್ತಿರಲಿಲ್ಲ. ಅವರ ಚಿತ್ರಕಲೆಯು ತಾಂತ್ರಿಕವಾಗಿಯೂ ಮಹತ್ತರವಾದದ್ದು. ಅಲ್ಲದೆ ಅವರು ಎಷ್ಟು ಆಲೋಚಿಸಿ ಬರೆದಿರಬಹುದು ಎಂಬುವುದನ್ನು ಗಮನಿಸಬಹುದು.



ಶೇರ ಸಿಂಗ್ ಮುಂದಾಳತ್ವದಲ್ಲಿ ಬಡವಾನನ್ನು ಹುಡುಕಲು ಹೊರಟರು. ತಕ್ಷಣ ನಿಂತು, ದೂರದ ಮರವೊಂದರ ಕೆಳಗೆ ಕುಡಿಯುತ್ತಾ, ಹಾಡುತ್ತಾ ಕುಳಿತಿದ್ದ ಮನುಷ್ಯನನ್ನು ಅವನು ತೋರಿಸುತ್ತಾ " ಅಲ್ಲಿ ನೋಡಿ ಬಡವಾ" ಎಂದನು.

ಈ ಚಿತ್ರದಲ್ಲಿ ಬಡವಾನ ಹುಡುಕಾಟಕ್ಕೆ ದಿಬ್ಬಣವೇ ಹೊರಟಂತೆ ಚಿತ್ರ ರಚಿಸಲಾಗಿದೆ. ಮೂಲ ಪಿಥೋರಾ ಚಿತ್ರಗಳನ್ನು ಇದು ನೆನಪಿಸುತ್ತದೆ. ರಾಥವಾ ಬುಡಕಟ್ಟಿನ ಚಿತ್ರಗಳಲ್ಲಿ ಕುದುರೆಗಳು ಹೊರಟಿರುತ್ತವೆ. ಇಲ್ಲಿಯೂ ಎತ್ತಿನ ಬಂಡಿ, ಕುದುರೆ, ಮಡಿಕೆ ಹೊತ್ತ ಮಹಿಳೆಯರು, ನವಿಲು, ಎಲೆಯಿಂದ ಮೈಯನ್ನು ಮುಚ್ಚಿಕೊಂಡಿರುವ ಹುಂಜ, ಬೂರಿಬಾಯಿ, ಶೇರ ಸಿಂಗ್ ಎಲ್ಲರೂ ಇರುವುದನ್ನು ಕಾಣಬಹುದು.

ಶೇರ ಸಿಂಗ್ ಬಡವಾನಲ್ಲಿಗೆ ಹೋಗಿ "ಬಡವಾಜೀ ನಮಗೆ ನಿಮ್ಮ ಸಹಾಯದ ಅಗತ್ಯವಿದೆ ಎಂದನು" ಆಗ ಆ ಮನುಷ್ಯ ಮೋಸದ ಮುಖಲಕ್ಷಣಗಳಿಂದ "ನನ್ನಿಂದ ಏನು ಸಹಾಯವಾಗಬೇಕಿದೆ?" ಎಂದನು. ಶೇರ ಸಿಂಗ್ ಅವನೇ ಬಡವಾ ಇರಬಹುದೆಂದು ಸಂತೋಷದಿಂದ "ನಮ್ಮ ಹಳ್ಳಿಯಲ್ಲಿ ನೀರೆ ಇಲ್ಲ ದಯವಿಟ್ಟು ಮಂತ್ರದ ಶಕ್ತಿಯಿಂದ ನಮಗೆ ಸಹಕರಿಸು, ನಿನ್ನ ಮಾತನ್ನು ದೇವರು ಕೇಳುತ್ತಾನೆ" ಎಂದನು.



ಭಾರಿ ಉದ್ದದಲ್ಲಿ ಮೀಸೆ ಬಿಟ್ಟಿರುವ, ಸೊಂಟದಲ್ಲಿ ಡ್ರಮ್ ಕಟ್ಟಿಕೊಂಡಿರುವ ವ್ಯಕ್ತಿಯನ್ನು ಈ ಚಿತ್ರದಲ್ಲಿ ಕಾಣಬಹುದು.

"ಅದು ಕೂಡ ಸತ್ಯ, ತಾಳು ದೇವರನ್ನು ಕರೆಯುತ್ತೇನೆ" ಎನ್ನುತ್ತಾ, ಜೋರಾಗಿ ಏನನ್ನೋ ಮಂತ್ರಿಸುತ್ತ, ಕೈಯಲ್ಲಿ ಒಂದು ಬಡಿಗೆಯನ್ನು ತೆಗೆದುಕೊಂಡು ಅದನ್ನು ತಿರುಗಿಸುತ್ತ ಕುಣಿದಾಡತೊಡಗಿದನು ಎಂದು ಚಿತ್ರದ ಕಥೆಯು ಹೇಳುತ್ತದೆ. ಕೊರಳಿಗೆ ಒಂದು ಡ್ರಮ್ ವಾದ್ಯವನ್ನು ನೇತು ಹಾಕಿಕೊಂಡಿದ್ದಾನೆ.



ಕೋಲು ಹಾರಿ ಹೋಗಿ ಗುಂಪಿನಲ್ಲಿದ್ದ ಒಬ್ಬ ವ್ಯಕ್ತಿಗೆ ಬಡಿಯುತ್ತದೆ. ಅವನು ಹಿಂದೆ ಮುಗ್ಗರಿಸಿ ಹುಂಜದ ಮೇಲೆ ಕಾಲಿಟ್ಟನು. ಹುಂಜವು ಆ ತಕ್ಷಣವೇ ಮೇಲೆ ಜಿಗಿದು ಹಾರುತ್ತದೆ. ಆಗ ಅದರ ಮೇಲಿನ ಎಲೆಗಳು ಅದರ ದೇಹದಿಂದ ಕೆಳಗೆ ಉದುರಿದವು. ಆಗ ಆ ಹುಂಜವು ಅಳತೊಡಗಿತು.



ಈ ಚಿತ್ರದಲ್ಲಿ ಮಂತ್ರಿಸಿ ಎಸೆದ ದಂಡವು ಒಬ್ಬ ವ್ಯಕ್ತಿಗೆ ಬಿದ್ದಿರುವುದು ಹಾಗೂ ಹುಂಜದ ಸುತ್ತ ಎಲೆಗಳು ಬಿದ್ದಿರುವುದನ್ನು ಅತೀ ನೈಜವಾಗಿ ಚಿತ್ರಿಸಲಾಗಿದೆ.

ಆಹಾ! ಎಂದು, ಆ ಮನುಷ್ಯ ದುಷ್ಟ ರೀತಿಯಲ್ಲಿ ನಕ್ಕು "ಎಲ್ಲವೂ ಸರಿಯಾಗುತ್ತದೆ. ಈ ಹುಂಜವನ್ನು ಬಲಿಕೊಡಬೇಕು ನೋಡಿ ಹೇಳಿದನು. ಭಯಗೊಂಡ ಹುಂಜವು ಓಡಿ ಬಂದು ಬೂರಿಬಾಯಿಯ ಸೀರೆಯ ಹಿಂದೆ ಅವಿತು ಕುಳಿತುಕೊಂಡಿತು.

"ಚಿಂತೆ ಮಾಡಬೇಡ" ಮೊದಲು ಆ ಬಡವಾ ನಿಜವಾದವನೆ ಅಥವಾ ಅಲ್ಲವೆ. ಎಂಬುವುದನ್ನು ಖಚಿತ ಮಾಡಿಕೊಳ್ಳಬೇಕು ಎಂದು ಹುಂಜಕ್ಕೆ ಸಾವಕಾಶವಾಗಿ ಬೂರಿಬಾಯಿ ಹೇಳಿದಳು. ಬೂರಿಬಾಯಿ ಸ್ವಲ್ಪ ಮುಂದೆ ಹೋಗಿ "ಬಡವಾಜೀ ದಯವಿಟ್ಟು ಈ ಗಡಿಗೆಯ ಮೇಲೆ ನಿಲ್ಲಿರಿ",



ಆಗ ಬಡವಾ ಚಿಂತಿತನಾಗಿ, ಅದರ ಮೇಲೆ ನಿಲ್ಲಲು ನಿರಾಕರಿಸುತ್ತಾ, ತಲೆಯನ್ನು ಅಲುಗಾಡಿಸುತ್ತಾ ಚಡಪಡಿಸಿದನು. ಜನರೆಲ್ಲ ಸಂಶಯದಿಂದ ಅವನು ಗಡಿಗೆಯ ಮೇಲೆ ನಿಲ್ಲಲು ಒತ್ತಾಯ ಮಾಡತೊಡಗಿದರು. ಅದು ಒಡೆದು ತುಂಡು ತುಂಡಾಯಿತು.



ಈ ಮೇಲಿನ ಮೂರು ಚಿತ್ರಗಳು ಒಂದಕ್ಕೊಂದು ಪೂರಕವಾಗಿ ಕಥೆಗೂ ಮತ್ತು ಚಿತ್ರಕ್ಕೂ ಸಂಬಂಧವಿದೆ. ಈ ಚಿತ್ರಗಳಲ್ಲಿ ಇಬ್ಬರು ಭಾರೀ ಮೀಸೆಯ ಇಬ್ಬರು ವ್ಯಕ್ತಿಗಳ ಚಿತ್ರಗಳು ಕಾಣುತ್ತವೆ. ಆದರೆ ಇವರು ನಿಜವಾಗಿಯೂ ಬಡವಾರೇ ಅಥವಾ ಬೇರೆ ಯಾರಾಗಿರಬಹುದೆಂಬ ಪರೀಕ್ಷೆಯು ನಡೆಯುತ್ತದೆ. ಹುಂಜವು ಇವರ ಬಲಿ ವಿಚಾರಕ್ಕೆ ಹೆದರಿ ಬೂರಿಬಾಯಿಯ ಬಳಿ ಹೋಗಿ ಅವಿತುಕೊಳ್ಳುತ್ತದೆ. ಮಡಿಕೆಯ ಮೇಲೆ ನಿಂತರೆ ಅದು ಒಡೆದು ಹೋಗುವುದು ಸಹಜ. ಇಲ್ಲಿರುವ ದ್ವಂದ್ವ ವ್ಯಂಗವನ್ನು ಗಮನಿಸಬಹುದು. "ನೀರು ಇಲ್ಲದ ಹಳ್ಳಿಗೆ ನೀರನ್ನು ತರಿಸಲು ಹುಂಜದ ಬಲಿ ಕೇಳುತ್ತಿರುವ ಆ ಮಂತ್ರವಾದಿಗಳು" ಒಂದು ಕಡೆ, 'ನೀನು ನಿಜವಾಗಿಯೂ ಬಡವಾನೋ ಅಥವಾ ಅಲ್ಲವೋ ಎಂಬುವುದನ್ನು ಪರೀಕ್ಷಿಸಲು ಮಡಿಕೆಯ ಮೇಲೆ ನಿಲ್ಲಿಸುವುದು' ಕಂಡು ಬರುತ್ತದೆ.



ನಿಜವಾದ ಬಡವಾ ಆಗಿದ್ದರೆ ಮಡಿಕೆಯು ಒಡೆಯುತ್ತಿರಲಿಲ್ಲವೆಂದು ಜನರು ಬಡವಾನನ್ನು ಕಲ್ಲಿನಿಂದ ಒಗೆದು, ಕೋಲಿನಿಂದ ಹೊಡೆಯುತ್ತಾ ಹೋದರು. ಕಳ್ಳ ಬಡವಾ ಅಲ್ಲಿಂದ ಕಾಲ್ಕಿತ್ತನು. ಈ ಚಿತ್ರದಲ್ಲಿ ಜನರು ಬಡವಾನನ್ನು ಓಡಿಸಿಕೊಂಡು ಹೋಗುತ್ತಿರುವ ದೃಶ್ಯಗಳು ಕಾಣುತ್ತವೆ.

ಶ್ !! ಕೇಳಿ, ನಿಮಗೇನಾದರೂ ಕೇಳಿತಾ? ಎಂದನು ಶೇರ ಸಿಂಗ್, ಬೂರಿಬಾಯಿ ನಗುತ್ತಾ " ಅದು ಸಾಡಿ ಚಡಿಯಾ ಹಕ್ಕಿಯ ಹಾಡು. ಇದು ಒಳ್ಳೆಯ ಶಕುನ. ನಾವು ಅವಳನ್ನು ಹಿಂಬಾಲಿಸೋಣ ಎನ್ನುತ್ತಾಳೆ. ಆಗ ಹಳ್ಳಿಗರೆಲ್ಲರೂ ಪಕ್ಷಿಯನ್ನು ಹಿಂಬಾಲಿಸಿಕೊಂಡು ಪೊದೆಯಿಂದ ಪೊದೆಗೆ ಜಿಗಿಯುತ್ತಾ ಸಾಗಿದರು.



ಅವರಿಗೆ ಅಷ್ಟರಲ್ಲಿ ದೂರದಲ್ಲಿ ಡ್ರಮ್ ಬಾರಿಸುವ ಸದ್ದು ಕೇಳಿಸಿತು. ಪಕ್ಷಿಯು ಡ್ರಮ್ ಬಾರಿಸುವವನ ಹತ್ತಿರ ಅವರನ್ನು ಕರೆದುಕೊಂಡು ಹೋಯಿತು. ನಂತರ ಸಾಡಿ ಚಡಿಯಾ ನಿಂತಿತು. ಅಲ್ಲಿಯೇ ನೆಲದ ಮೇಲೆ ನೀರಿನ ಜಾಡು ಅವರಿಗೆ ಕಾಣಿಸಿತು. ಅದು ಎಲ್ಲಿಂದ ಬರುತ್ತಿದೆ?

ಈ ಬೂರಿಬಾಯಿ, ಶೇರ ಸಿಂಗ್ ಜೊತೆಯಲ್ಲಿ ಹುಂಜವು ಪ್ರತಿ ಚಿತ್ರದಲ್ಲಿಯೂ ಕಾಣಿಸಿಕೊಂಡಿರುವುದನ್ನು ಕಾಣಬಹುದು. ಬರದ ಬೇಗೆಯಲ್ಲಿ ಬೆಂದ ಜನರು ನೀರಿಗಾಗಿ ಹಪ-ಹಪಿಸುವ ಚಿತ್ರಣವನ್ನು ಇಲ್ಲಿ ಕಥೆ ಮತ್ತು ಚಿತ್ರಗಳು ಅಭಿವ್ಯಕ್ತಿಸುತ್ತಿವೆ.



ಸಾಡಿ ಚಡಿಯಾ ಮತ್ತು ಜನರು ನೀರಿನ ಜಾಡನ್ನು ಹಿಡಿದು ಸಾಗುತ್ತಿದ್ದಾರೆ. ಅವರಿಗೆ ಕೊನೆಗೂ ನೀರಿನ ಗಡಿಗೆ ಸಿಕ್ಕಿತು. ಗಡಿಗೆಯ ಮೇಲೆ ಒಬ್ಬ ಮನುಷ್ಯ ನಿಂತು ಡ್ರಮ್‌ನ್ನು ಬಾರಿಸುತ್ತಿದ್ದನು. ಆ ಗಡಿಗೆಯ ಬಾಯಿಯಿಂದ ನೀರು ಹರಿಯುತ್ತಿತ್ತು. ಅಲ್ಲಿ ಹಳ್ಳಿಗರು ತಮ್ಮ ಬಡವಾನನ್ನು ನೋಡಿದರು.



ಈ ಚಿತ್ರದಲ್ಲಿ ಮೀನು, ಆಮೆ ಕೊಳದಲ್ಲಿರುವುದನ್ನು ಕಾಣಬಹುದು. ಕೊಳದ ನೀರು ಮಡಿಕೆಯ ಮೂಲಕ ಹೊರ ಚಲ್ಲುತ್ತಿರುವುದನ್ನು ನೋಡಬಹುದು. ಶೇರ ಸಿಂಗ್‌ನ ಚಿಕ್ಕ ಮಡಿಕೆಯಲ್ಲಿ ನೀರನ್ನು ಸಂಗ್ರಹಿಸುತ್ತಿರುವುದನ್ನು ಗಮನಿಸಬಹುದು.

ಬೂರಿಬಾಯಿಯು ಬಡವಾನ ಹತ್ತಿರ ಹೋಗಿ " ಬಡವಾಜೀ, ದಯವಿಟ್ಟು ನಮ್ಮ ಹಳ್ಳಿಗೂ ನೀರನ್ನು ತನ್ನಿರಿ. ನಮ್ಮ ಹೊಲಗದ್ದೆಗಳು ಒಣಗಿವೆ, ನೀರಿಲ್ಲದೇ ಪ್ರಾಣಿಗಳು ಸೊರಗಿವೆ, ಮರಗಳು ಒಣಗಿವೆ" ಎನ್ನುತ್ತಾಳೆ.

ಅವಳು ಅವನ ಹತ್ತಿರ ಮಾತನಾಡುತ್ತಿರುವಾಗಲೇ ಜನರು ಬಾಯಾರಿಕೆ ತಾಳಲಾರದೇ ನೀರನ್ನು ಕುಡಿಯಲು ಹೋಗುತ್ತಾರೆ.



ಇದರಿಂದ ಕೋಪಗೊಂಡ ಬಡವಾನು ಆ ಮಡಿಕೆಯಿಂದ ಕೆಳಗಿಳಿಯುತ್ತಾನೆ ಮತ್ತು ಅವನು ಕೆಳಗಿಳಿದ ಮೇಲೆ ಅಲ್ಲಿಂದ ನೀರು ಬರುವುದು ನಿಲ್ಲುತ್ತದೆ. ಆಗ ಆ ಮಡಿಕೆಯನ್ನು ತೆಗೆದುಕೊಂಡು ನೆಲದ ಮೇಲೆ ಒಗೆಯುತ್ತಾನೆ. ಅದು ಚೂರು ಚೂರಾಗುತ್ತದೆ. ಆಗ ಅಲ್ಲಿ ಆಶ್ಚರ್ಯ ಹಾಗೂ ಮೌನವಾದ ವಾತಾವರಣ ಸೃಷ್ಟಿಯಾಗುತ್ತದೆ.

ಏನಾಯಿತು ಬಡವಾಜೀ? ನಮ್ಮಿಂದ ಏನಾದರೂ ತಪ್ಪಾಯಿತೇ ಎಂದಳು ಬೂರಿಬಾಯಿ. "ನಾವು ಹುಂಜವನ್ನು ಬಲಿ ಕೊಡಲಿಲ್ಲವೆಂದು ನಿಮಗೆ ಸಿಟ್ಟು ಬಂದಿತೆ" ಎಂದು ಗುಂಪಿನವರಲ್ಲಿದ್ದವನೊಬ್ಬ ಕೇಳಿದ.

ಜನರು ಹುಂಜವನ್ನು ಬಡವಾನ ಕಡೆಗೆ ನೂಕಿದರು. ಹುಂಜವು ಹೆದರುತ್ತ, ನಡಗುತ್ತ " ನೀನು ನನ್ನನ್ನು ತಿನ್ನಲಾರೆ, ಎಂದಿತು.

ಬಡವಾ ನಗುತ್ತ ಮಡಿಕೆಯ ಒಂದು ಚೂರನ್ನು ಕೈಯಲ್ಲಿ ತೆಗೆದುಕೊಂಡು ಅದರ ಮೇಲೆ ಚಿತ್ರ ಬರೆಯಲು ಆರಂಭಿಸಿದನು. ನಂತರ ಹುಂಜದ ಮುಂದೆ ಅದನ್ನು ಇಟ್ಟನು. ಹುಂಜವು ಅದನ್ನು ನೋಡಿದಾಗ ಆ ಚೂರಿನ ಮೇಲೆ ಒಂದು ಗಿಡವನ್ನು ಚಿತ್ರಿಸಿದ್ದನು.



ಈ ಚಿತ್ರಗಳು ಪಿಥೋರಾ ಚಿತ್ರಕಲೆಯ ಆರಂಭ ಮತ್ತು ನೀರಿನ ಬರವನ್ನು ನಿಲ್ಲಿಸಿ ಸಮೃದ್ಧಿಯ ಮಳೆಗಾಗಿ ಪುರಾಣ ಕಲ್ಪಿತವಾದ ಕಥೆಯನ್ನು ರೂಪಾಂತರಿಸಿಕೊಂಡು ಜೊತೆಗೆ ಚಿತ್ರಕಲೆಯೂ ಆರಂಭವಾದುದರ ಚಿತ್ರಣವಾಗಿದೆ. ಹುಂಜದಿಂದ ಆರಂಭವಾದ ನೀರಿನ ಬೇಗೆಯು ಅಲ್ಲಿನ ಜನರನ್ನು ಆವರಿಸುತ್ತಾ, ಅಲ್ಲಿನ ಕಾಡನ್ನು ಆವರಿಸುತ್ತಾ, ಅಲ್ಲಿನ ಪಶು-ಪಕ್ಷಿ ಪ್ರಾಣಿಗಳನ್ನು ಆವರಿಸುತ್ತಾ ಹೋಗಿರುವುದನ್ನು ಗಮನಿಸಬೇಕಾಗುತ್ತದೆ. ನಿಜವಾದ ಬಡವಾನು ನೀರಿಗಾಗಿ ದೇವರನ್ನು ಪ್ರಾರ್ಥಿಸುತ್ತಿದ್ದಾನೆ. ಅವನಿಗೆ ಈ ಭೂಮಿಗೆ ಮಳೆ ತರಲು ಮರದಡಿ ತಪಸ್ಸಿಗೆ ನಿಂತಿದ್ದಾನೆ. ಅದು ಒಂದು ಮಡಕೆಯ ಮೇಲೆ ನಿಂತು ತಪಸ್ಸನ್ನು ಮಾಡುತ್ತಿರುವ ಹಾಗೆ ಚಿತ್ರಿಸಲಾಗಿದೆ. ಬಿಲ್‌ರ ಕಲಾಕೌಶಲ್ಯವನ್ನು ಮೆಚ್ಚಬೇಕಾದದ್ದು ಇಲ್ಲಿಯೇ.

ಇಲ್ಲಿಯವರೆಗೆ ಬರದಿಂದ ತತ್ತರಿಸಿ ಹೋದಂತಹ ಆ ಹಳ್ಳಿಗೆ ಇನ್ನು ಮುಂದೆ ಸುಗ್ಗಿಯ ಕಾಲ ಆರಂಭವಾಗಬಹುದೆಂಬ ಮುನ್ಸೂಚನೆಯಾಗಿ ಬಡವಾನ ದರ್ಶನವಾಗಿದೆ.



ಜನರೆಲ್ಲರೂ ಗಿಡಗಳ ಚಿತ್ರವನ್ನು ಬರೆಯಬೇಕೆಂಬುದು ಬಡವಾನ ಆಸೆಯಾಗಿತ್ತು. ಈ ಆಸೆಯಿಂದಾಗಿ ಅಲ್ಲೊಂದು ನಂಬಿಕೆಯ ಆಚರಣೆಯೊಂದು ಶುರುವಾಗಲು ಸಾಧ್ಯವಾಯಿತು. ಅಲ್ಲಿದ್ದ ಹುಂಜವು ಜೋರಾಗಿ ಒದರುತ್ತ ಹೀಗೆ ಹೇಳಿತು "ನಡೆಯಿರಿ, ನಮ್ಮ ಮನೆಯ ಗೋಡೆಗಳ ಮೇಲೆ ಗಿಡಗಳ ಚಿತ್ರಣವನ್ನು ಮಾಡೋಣ" ಎಂದಿತು. ಸಾಡಿ ಚಡಿಯಾ ಮತ್ತೇ ಹಾಡಲು ಶುರು ಮಾಡಿತು. ಮತ್ತೇ ಶುಭ ಶಕುನ ಆರಂಭವಾಯಿತು ಎಂಬಂತೆ ಅಲ್ಲಿ ಚಿತ್ರಿಸಲಾಗಿದೆ.



ಅಲ್ಲಿ ನೆರೆದ ಎಲ್ಲರೂ ಮೆಚ್ಚುಗೆಯಿಂದ ಹುಂಜದ ಕಡೆ ನೋಡಿದರು. ಅಷ್ಟರಲ್ಲಿ ಬಡವಾ ಹೋಗಿಬಿಟ್ಟಿದ್ದನು.



ಜನರು ಮರಳಿ ತಮ್ಮ ಮನೆಗಳಿಗೆ ಹೋಗಿ ಗೋಡೆಗಳನ್ನು ಸಾರಿಸಿ, ಅದರ ಮೇಲೆ ಗಿಡಗಳನ್ನು ಚಿತ್ರಿಸಿದರು. ಆ ದಿನ ರಾತ್ರಿಯೇ ಮೋಡಗಳಾಗಿ, ಗುಡುಗು-ಸಿಡಿಲುಗಳಿಂದ ಕೂಡಿದ ಮಳೆಯಾಯಿತು.



ಇಡೀ ರಾತ್ರಿಯೆಲ್ಲ ಮಳೆಯಾಗುತ್ತದೆ. ಹಳ್ಳ ಕೊಳ್ಳಗಳು ತುಂಬಿ ಹರಿಯುತ್ತವೆ. ಮುಂಜಾನೆ ಜನರೆಲ್ಲ ನೀರು ಸಂಗ್ರಹಕ್ಕೆ ಓಡಿ ಹೋದರು.

ಹಾವು ಮತ್ತು ಆಮೆಗಳು ಸಹ ನೀರಿಗಾಗಿ ಭೂಮಿಯಲ್ಲಿ ತೂತುಗಳನ್ನು ಮಾಡುತ್ತಿದ್ದವು. ಹಾವು ಸುಳಿಯಾಕಾರದಲ್ಲಿ ತಿರುಗುತ್ತಾ ನೀರಿನ ಇಂಗು ಗುಂಡಿಗಳನ್ನು ಮಾಡುತ್ತಿತ್ತು. ಆ

ಗುಂಡಿಯಲ್ಲಿ ನೀರು ಬೇಗನೆ ತುಂಬಬೇಕೆಂದು ಅದರ ಅಪೇಕ್ಷೆಯಾಗಿತ್ತು.

ಬೂರಿಬಾಯಿ ಹೇಳಿದಳು "ಅವುಗಳು ನೀರನ್ನು ಹೇಗೆ ಉಳಿಸಿಕೊಳ್ಳಬಹುದೆಂದು ನಮಗೆ ತೋರಿಸುತ್ತಿವೆ. ನಾವೂ ಕೂಡ ಅವುಗಳ ಹಾಗೆ ದೊಡ್ಡ ದೊಡ್ಡ ಇಂಗು ಗುಂಡಿಗಳನ್ನು ಮಾಡಬೇಕಿದೆ" ಎಂದಳು.

ಅದೇ ರೀತಿ ಜನರು ಬಾವಿ ಮತ್ತು ಹೊಂಡಗಳನ್ನು ತೋಡಿದರು. ನಂತರ ಬಹುಬೇಗನೆ ಬಾವಿಗಳು ತುಂಬಿ ಹರಿಯಲು ಆರಂಭಿಸಿದವು.

ದಿನಕಳೆದಂತೆ ಕಾಡು ಹಸಿರಾಗಿ, ಹೊಲಗಳು ಹಸಿಯಾದವು, ಬೆಳೆಗಳು ಬೆಳೆದು, ಹೂಗಳು ಅರಳಿದವು. ಹುಂಜವು ಪ್ರತಿದಿನದಂತೆ ಜೋರಾಗಿ ಮೇಲು ಧ್ವನಿಯಲ್ಲಿ ಕೂಗಿತು.

ಈ ಚಿತ್ರಗಳನ್ನು ವಿಶ್ಲೇಷಣೆಗೆ ಒಳಪಡಿಸಿಕೊಂಡು ಮೌಲ್ಯಮಾಪನ ಮಾಡಬೇಕಾಗುತ್ತದೆ. "ಎ ಬಿಲ್ ಸ್ಟೋರಿ' ಕೃತಿಯಲ್ಲಿರುವ ಚಿತ್ರಗಳು ಎರಡು ಅಂಶಗಳನ್ನು ಹೊರಹಾಕುತ್ತಿವೆ. ಒಂದು, ಪಿಥೋರಾ ಚಿತ್ರಕಲೆಯ ಆರಂಭದ ಹಿನ್ನೆಲೆ. ಎರಡು, ಪಿಥೋರಾ ಚಿತ್ರವನ್ನು ಗೋಡೆಗಳ ಮೇಲೆ ಬಿಡಿಸಿದ ಮೇಲೆ ಬಿಲ್ ಬುಡಕಟ್ಟು ಜನರ ಸಮೃದ್ಧಿಯ ಸೂಚನೆಯನ್ನು ಹೇಳುತ್ತಿರುವುದು. ಈ ಹಿನ್ನೆಲೆಯಿಂದಾಗಿಯೇ ಬಿಲ್‌ರು ತಮ್ಮ ಮನೆಗಳಲ್ಲಿ ಇಂದಿಗೂ ಚಿತ್ರಗಳನ್ನು ಬರೆಯುತ್ತಿರುವುದು.

ಜಾನಪದ ಲೋಕದಲ್ಲಿ ಮಳೆಗಾಗಿ ಕೆರೆಗಳಲ್ಲಿ ಪರೇವು ಮಾಡುವುದು. ಮಳೆ ಮಲ್ಲಪ್ಪನನ್ನು ಮಾಡುವುದು. ಕತ್ತೆ ಮತ್ತು ಕಪ್ಪೆಗಳ ಮದುವೆಗಳನ್ನು ಶಾಸ್ತ್ರೋಕ್ತವಾಗಿ ಮಾಡುವುದು. ಶಿಷ್ಟ ಪರಂಪರೆಯಲ್ಲಿ ವಿರಾಟ ಪರ್ವವನ್ನು ಓದಿಸುವುದು, ಯಾವುದಾದರೂ ಪುರಾಣವನ್ನು ಓದಿಸುವುದು ವಾಡಿಕೆಯಿಂದ ಬಂದಿದೆ. ಇದು ಅವರು ಮಳೆಗಾಗಿ ಪ್ರಾರ್ಥಿಸುತ್ತಿರುವ ಬಗೆ. ಇದರಿಂದ ಮಳೆ ಬರುತ್ತದೆಂಬುವುದು ಅವರ ನಂಬಿಕೆ. ಈ ನೆಲೆಯಲ್ಲಿಯೇ ಬಿಲ್‌ರು ಸಹ ಮಳೆಗಾಗಿ 'ಎ ಬಿಲ್ ಸ್ಟೋರಿ'ಯಲ್ಲಿ ಪಿಥೋರಾ ಚಿತ್ರಗಳನ್ನು ಗೋಡೆಗಳ ಮೇಲೆ ಬರೆಯುವುದನ್ನು ಕಾಣಬಹುದು.

ಬಿಲ್‌ರ ಪುರಾಣದ ಪ್ರಕಾರ ಪಿಥೋರಾ ಚಿತ್ರಕಲೆಗೊಂದು ಪೌರಾಣಿಕವಾದ ಕಲ್ಪನೆಯಿರುವುದನ್ನು ಈ ಹಿಂದೆಯೇ ಚರ್ಚಿಸಲಾಗಿದೆ. ಬಡವಾ ಅವರು ನಂಬಿರುವ ಪಿಥೋರಾ ಬಾಬಾನ ಪೂಜಾರಿಯಾಗಿದ್ದಾನೆ. ಆದುದರಿಂದಲೇ ಈ ಮೇಲಿನ ಚಿತ್ರಗಳಲ್ಲಿ ಬಡವಾ, ಹುಂಜ, ಚಿತ್ರಕಲಾವಿದರಾದ ಬೂರಿಬಾಯಿ, ಶೇರ ಸಿಂಗ್‌ನಂತ ಪಾತ್ರಗಳನ್ನು ಕಲಾವಿದನು ತನ್ನ ಕಲ್ಪನೆಯಲ್ಲಿ ಚಿತ್ರಗಳ ಜೊತೆಗೆ ಕಥೆಯನ್ನು ಕಟ್ಟಿದ್ದಾನೆ. ಮೂಲ ಸಾಂಪ್ರದಾಯಿಕ ಪಿಥೋರಾದ ಒಂದು ಪೌರಾಣಿಕ "ಬರದ ಕಥೆಯಷ್ಟೆ" ಒಂದು ಚಿತ್ರ ಪಯಣವಾಗಿ ಸಾಗುತ್ತಿರುವುದು ಕಲಾವಿದನ ಸೃಜನ ಶೀಲತೆಯನ್ನು ಅಭಿವ್ಯಕ್ತಿಸುತ್ತಿರುವುದನ್ನು ಕಾಣಬಹುದು.

### ೬.೧.೩ ಗಂಗೂ ಬಾಯಿ ಚಿತ್ರಕಲೆ: ರೂಪಾಂತರ

ಪಿಥೋರಾ ಚಿತ್ರಕಲಾವಿದರು ಹೊಸತಲೆಮಾರಿನಲ್ಲಿ ಒಂದೊಂದು ನೆಲೆಯ ವಸ್ತುಗಳನ್ನು ಇಟ್ಟುಕೊಂಡು ಚಿತ್ರಗಳನ್ನು ಬರೆಯಲು ಶುರುಮಾಡಿದ್ದಾರೆ. ಬಹುತೇಕ ಪಿಥೋರಾ ಚಿತ್ರಕಲಾವಿದರು ಬಿಲ್ ಜನಾಂಗಕ್ಕೆ ಸೇರಿದವರು. ಅವರಲ್ಲಿ ಗಂಗೂಬಾಯಿ ಅವರು 'ಟ್ರೀ ಮ್ಯಾಟರ್ಸ್' ಬಗ್ಗೆ ಮೌಖಿಕವಾಗಿ ಕಥೆಯೊಂದನ್ನು ಹೆಣೆಯುತ್ತಾರೆ. ಅವರೊಟ್ಟಿಗೆ ಕಥೆಗೆ ಪೂರಕವಾಗಿ ಆ ಕೃತಿಯಲ್ಲಿ ಚಿತ್ರಗಳನ್ನು ಬರೆದಿದ್ದಾರೆ. ಅವರು ಮಾತ್ರವಲ್ಲದೆ, ಶೇರ ಸಿಂಗ್–'ಎ ಬಿಲ್ ಸ್ಟೋರಿ' ಯನ್ನು, ಸುಭಾಷ್ ಬಿಲ್ – 'ಜಾತ್ರೆ' ಯನ್ನು ಕುರಿತು ಚಿತ್ರ ಮತ್ತು ಚಿತ್ರಕ್ಕೆ ಪೂರಕವಾದ

ಕಥೆಯನ್ನು ಬರೆದಿದ್ದಾರೆ. ಇಲ್ಲಿನ ಪಿಥೋರಾ ಚಿತ್ರಗಳು ಸ್ಥಗಿತ ಅಥವಾ ತಟಸ್ಥವಾಗಿರುವ ಪರಂಪರೆಯವಲ್ಲ. ಆ ಚಿತ್ರಗಳಿಗೆ ಜೀವನ ಪಯಣವಿದೆ. ಬಿಲ್‌ರ ಎಲ್ಲಾ ಚಿತ್ರಗಳು ಪಯಣವನ್ನು ಬೆಳೆಸಿವೆ. ಒಂದೆಡೆ ನಿಲ್ಲದೆ ನಿರಂತರವಾಗಿ ಚಲಿಸುತ್ತವೆ. ಮೂಲ ಪಿಥೋರಾದಲ್ಲಿ ಪಿಥೋರಾ–ಪಿಥೋರಿಯ ಮದುವೆಯ ದಿಬ್ಬಣ, ಪಿಥೋರಾ ಬಾಬಾ, ಪೂಜಾರಿಯಾಗಿರಬಹುದು ಅಲ್ಲೆಲ್ಲ ಕಥೆಗೆ ಪೂರಕವಾದ ಪಯಣವಿರುವುದನ್ನು ಗಮನಿಸಬಹುದು.

ಗಂಗೂಬಾಯಿ ಅವರ 'ಟ್ರೀ ಮಾರ್ಸ್' ಚಿತ್ರಕೃತಿಯು ಬಿಲ್‌ರ ಜೀವನ ಕಥೆಯನ್ನು ಹೇಳುತ್ತದೆ. ಗಂಗೂಬಾಯಿ ಅವರು ತಮ್ಮ ಜೀವನದಲ್ಲಿ ಕಂಡುಕೊಂಡ ಅನೇಕ ನೆನಪುಗಳನ್ನು ಈ ಚಿತ್ರಕೃತಿಯಲ್ಲಿ ಬಿಡಿಸಿದ್ದಾರೆ. ಗುಡ್ಡ ಕಾಡುಗಳ ಮೂಲೆಯೊಂದರ ಗುಡಿಸಲುಗಳಲ್ಲಿ ದೇವರ ಪೂಜೆ ಅಥವಾ ಹಬ್ಬಗಳ ಸಂದರ್ಭಗಳಲ್ಲಿ ಜರುಗುತ್ತಿದ್ದ ಪಿಥೋರಾವು ಇಂದು ಕಲೆಯಾಗಿ ಮಾರ್ಪಾಡಾಗಿರುವುದಕ್ಕೆ ಕಾರಣ ಆ ಕಲಾವಿದರ ಪರಿಶ್ರಮ. ಅಲ್ಲದೆ ಅನೇಕ ಸಂಘ ಸಂಸ್ಥೆಗಳು. ಗಂಗೂಬಾಯಿ ಕೂಡ ಪಿಥೋರಾ ಕಲೆಯನ್ನು ರೂಪಾಂತರಿಸುವಲ್ಲಿ ತಮ್ಮ ಸೃಜನಶೀಲತೆ ಮತ್ತು ಕ್ರಿಯಾಶೀಲತೆಯನ್ನು ಪಿಥೋರಾಕ್ಕಾಗಿ ಧಾರೆಯೆರೆದಿದ್ದಾರೆ. ದೇವರ ಪ್ರಾರ್ಥನೆ, ಭಕ್ತಿ, ನಿಸರ್ಗ, ಪ್ರಾಣಿ–ಪಕ್ಷಿಗಳನ್ನೊಳಗೊಂಡ ಅನೇಕ ಬಗೆಯ ಚಿತ್ರಗಳು ಅವರ ಕಲೆಯಲ್ಲಿ ಪ್ರವೇಶ ಪಡೆಯುತ್ತವೆ. ರೂಪಾಂತರದ ಸಂದರ್ಭದಲ್ಲಿ ರೈಲು, ವಿಮಾನ, ಸೈಕಲ್ ಇತ್ಯಾದಿಗಳು ಕಾಣಬರುತ್ತವೆ. ಗಂಗೂಬಾಯಿ ಈ 'ಟ್ರೀ ಮ್ಯಾಟರ್ಸ್' ಚಿತ್ರಕೃತಿಯಲ್ಲಿ ನಿಸರ್ಗ ಮತ್ತು ಬಿಲ್ ಜನರ ಬದುಕಿನ ನಡುವೆ ಇರುವ ಅವಿನಾಭಾವ ಸಂಬಂಧವನ್ನು ಬಿಚ್ಚಿ ಹೇಳುತ್ತಾರೆ.

ಇಂತಹ 'ಟ್ರೀ ಮ್ಯಾಟರ್ಸ್' ಚಿತ್ರಕೃತಿಯನ್ನು ಹೇಳಿ ಬರಿಸಿದ ಕೀರ್ತಿಯು ಮಾನವ ಸಂಗ್ರಹಾಲಯ, ಭೂಪಾಲನ ಅಧಿಕಾರಿಗಳು ಮತ್ತು ತಾರಾ ಪ್ರಕಾಶಕರಿಗೆ, ತಾರಾ ಪಬ್ಲಿಕೇಷನ್ಸ ಲಿಮಿಟೆಡ್, ಯು. ಕೆ. ಅವರಿಗೂ ಸಲ್ಲುತ್ತದೆ. ಈ ಪ್ರತಿಭೆಯನ್ನು ಗುರುತಿಸಿ ಅದರ ಚಿತ್ರಕಲೆಯಲ್ಲಿ ಅದರ ಕೀರ್ತಿಯು ಅಂತರಾಷ್ಟ್ರೀಯ ಮಟ್ಟದಲ್ಲಿ ಬೆಳೆಯಲು ಕಾರಣವಾಗಿದೆ. ತಾರಾ ಪ್ರಕಾಶಕರು ಗಂಗೂಬಾಯಿಯವರ ಹಾಗೂ ಬಿಲ್‌ರ ಜೀವನಗಾಥೆಯನ್ನು ಕೇಳುತ್ತಾರೆ. ನಂತರದಲ್ಲಿ ಈ ಪ್ರಕಾಶಕರು ನಿಮ್ಮ ಜೀವನದ ಕಥೆಗಳನ್ನೊಳಗೊಂಡಂತೆ ಕೆಲವೊಂದು ಚಿತ್ರಗಳನ್ನು ರಚಿಸಲು ಹೇಳಿದಾಗ ರಚಿಸಿದಂತಹ ಚಿತ್ರಗಳಿವು. ಈ ಚಿತ್ರಕೃತಿಯಲ್ಲಿ ಗಂಗೂಬಾಯಿಯವರು 'ಮರ'ಗಳನ್ನು ಕುರಿತ ವಿಷಯಕ್ಕೆ ಅನುಗುಣವಾಗಿ ಕೆಲವೊಂದು ಚಿತ್ರಗಳನ್ನು ಚಿತ್ರಿಸಿ, ಅವುಗಳ ವಿಶ್ಲೇಷಣೆಗಳನ್ನು ಅವರಲ್ಲಿ ಹಂಚಿಕೊಂಡಿದ್ದಾರೆ. ಅವುಗಳನ್ನೆಲ್ಲ ಒಟ್ಟಿಗೆ ಸೇರಿಸಿ ಭಾಷಾಂತರಿಸಿ ಆಂಗ್ಲಭಾಷೆಯಲ್ಲಿ ರಚಿಸಿದ ಕೃತಿಯೇ 'ಟ್ರೀ ಮ್ಯಾಟರ್ಸ್'. ಈ ಕೃತಿಯನ್ನು ಪ್ರಪಂಚದಾದ್ಯಂತ ಆನ್‌ಲೈನ್ ಮೂಲಕ ಮಾರುಕಟ್ಟೆಗೆ ಒದಗಿಸಿದ್ದಾರೆ.

ಇನ್ನು ಟ್ರೀ ಮ್ಯಾಟರ್ಸ್ ಕುರಿತು ಅವಲೋಕಿಸುವುದೆಂದರೆ, ಬಿಲ್‌ರಿಗೂ ಮತ್ತು ಕಾಡಿಗೂ ಒಂದು ನಿಕಟವಾದ ಸಂಬಂಧವಿದೆ. ಹೊಲಕ್ಕೂ ಮತ್ತು ಅರಣ್ಯದ ನಡುವೆ ಸಂಬಂಧವಿದೆ. ಏಕೆಂದರೆ ಅವರ ಹಳ್ಳಿಗಳು ಅರಣ್ಯ ಮತ್ತು ಹೊಲಗಳ ಹತ್ತಿರದಲ್ಲಿರುತ್ತವೆ. ಅವರು ಅರಣ್ಯದೊಳಗೆ ಬೇಟೆ, ಆಹಾರಕ್ಕಾಗಿ ಹೋಗುತ್ತಾರೆ. ಪ್ರಸ್ತುತದ ಜನರು ಅರಣ್ಯದ ಜೊತೆಗಿನ ಸಂಬಂಧವನ್ನು ಕಡಿಮೆ ಮಾಡಿಕೊಂಡಿದ್ದಾರೆ.



ಈ ಕೃತಿಯು ಮೂಲ ಸಾಂಪ್ರದಾಯಿಕ ಬಿಲ್‌ರ ಬಗ್ಗೆ ಮಾತನಾಡುತ್ತದೆ. ಮೂಲ ಬಿಲ್‌ರಿಗೆ ಅರಣ್ಯವೆ ಆಹಾರದ ಮೂಲವಾಗಿತ್ತು. ಅರಣ್ಯದಲ್ಲಿರುವ ಮರಗಳ ರಾಶಿಯಿಂದ ಹಣ್ಣು, ಕಾಯಿ, ಎಲೆ, ಬೀಜಗಳನ್ನು ತಿಂದು ಜೀವನ ಸಾಗಿಸುತ್ತಿದ್ದರು. ಅಷ್ಟೇ ಅಲ್ಲ ಅರಣ್ಯದಲ್ಲಿಯೇ ಅವರ ಬದುಕಿನ ದಿನಗಳು ಕಳೆದು ಹೋಗುತ್ತಿದ್ದವು. ಅಲ್ಲಿಯೇ ವಿಶ್ರಾಂತಿ ಪಡೆಯುತ್ತಿದ್ದರು. ತಾವಿರುವ ಕಡೆ ಪ್ರಾಣಿಗಳು ಸುಳಿಯಬಾರದೆಂದು ಬೆಂಕಿಯನ್ನು ಒಂದು ಕಡೆ ಹಾಕಿ ಅದರ ಸುತ್ತ ಕುಣಿಯುತ್ತಿದ್ದರು. ಆದರೆ ಇಂದು ಅದೆಲ್ಲ ಬಿಲ್‌ರಿಗೆ ಸಾಧ್ಯವಿಲ್ಲ. ಸರ್ಕಾರದ ಕಾನೂನಿನ ಅನ್ವಯವಾಗಿ ಅರಣ್ಯದೊಳಕ್ಕೆ ಅತೀ ದೂರ ಕ್ರಮಿಸುವಂತಿಲ್ಲ. ಅಲ್ಲಿಂದ ಮನೆಗೆ ಏನನ್ನೂ ತರುವಂತಿಲ್ಲ. ಆದರೆ ಬಿಲ್ ಆದಿವಾಸಿಗಳು ಅಂದಿನ ದಿನಗಳನ್ನು ಇಂದೂ ಸಹ ನೆನೆಯುತ್ತಾರೆ. ಕಾಡಿನ ಸಂಬಂಧವನ್ನು ಕಡಿದುಕೊಂಡ ಮೇಲೆ ಅನಿವಾರ್ಯವಾಗಿ ಆರ್ಥಿಕ ಸುಧಾರಣೆಗಾಗಿ ಕೃಷಿಯನ್ನು ಶುರುಮಾಡಿದರು. ನಗರಗಳಿಗೆ ವಲಸೆ ಹೋದರು. ತಮ್ಮ ಕಲಾ ಸಿರಿವಂತಿಕೆಯನ್ನು ಕೆಲವರು ಉಳಿಸಿಕೊಂಡು ಬಂದರು ಎಂಬುವುದನ್ನು ಈ ಕೃತಿಯು ಅಭಿವ್ಯಕ್ತಿಸುತ್ತದೆ.

ಗಂಗೂಬಾಯಿಯು ಈ ಕೃತಿಯ ಮೂಲಕ ತಮ್ಮ ಬಾಲ್ಯದ ಜೀವನದ ಹಸಿವನ್ನು ಕುರಿತು ಸಹ ಹೇಳಿದ್ದಾರೆ. ಆಕೆಯು ತನ್ನ ದೃಷ್ಟಿಕೋನದಿಂದ ತಮ್ಮ ಜನರನ್ನು ಗಮನಿಸಿದ್ದಾರೆ.

ಅಲ್ಲಿನ ಜನರು ಒಂದು ವರ್ಷದ ಅವಧಿಯಲ್ಲಿ ಅರ್ಧವರ್ಷ ವ್ಯವಸಾಯವನ್ನು ಮಾಡುತ್ತಾರೆ. ನಂತರ ಅರ್ಧ ವರ್ಷದಲ್ಲಿ ಖಾಲಿ ಇರಬೇಕಾಗುತ್ತಿತ್ತು. ಅಂತಹ ಸಮಯದಲ್ಲಿ ಸಿಕ್ಕಂತಹ ಯಾವುದೇ ಆಹಾರವನ್ನು ತಿನ್ನುತ್ತಾ ನೀರನ್ನು ಕುಡಿಯುತ್ತ ಜೀವನ ಸಾಗಿಸುತ್ತಿದ್ದೇವು. ಒಂದು ಹೊತ್ತಿನ ಊಟ ಸಿಕ್ಕರೆ ಸಾಕಿತ್ತು ಅದು ಅಂದಿನ ಅದೃಷ್ಟವಾಗುತ್ತಿತ್ತು ಎಂದು ಹೇಳಿಕೊಳ್ಳುತ್ತಾರೆ. ಈ ಕೃತಿಯಲ್ಲಿ ಆಕೆಯು ತಾವು ಅನುಭವಿಸಿದ ಅನೇಕ ಆಯಾಮಗಳನ್ನು ಹೇಳಿಕೊಳ್ಳುತ್ತಿದ್ದಾಳೆ. ಆಕೆಯು ಹೇಳುತ್ತಾಳೆ, ಅನೇಕ ಜನರು ಊಟ ಸಿಗದೇ ಅರಣ್ಯದಲ್ಲಿಯೇ ಹಣ್ಣು-ಕಾಯಿಗಳನ್ನು ತಿನ್ನುತ್ತಾ ದಿನಗಳನ್ನು ಎಣಿಸುತ್ತಿದ್ದರು. ಇಂದಿನ ಹಾಗೆ ಬಟ್ಟೆ ಧರಿಸುತ್ತಿರಲಿಲ್ಲ, ಚಿಕ್ಕ ಬಟ್ಟೆಯನ್ನು ಎದೆಯ ಭಾಗಕ್ಕೆ ಮಾತ್ರ ಧರಿಸುತ್ತಿದ್ದರು.



ಈ ಚಿತ್ರಕೃತಿಯು ಬಿಲ್‌ರಲ್ಲಿ ಆಗಿರುವ ಬದಲಾವಣೆಗಳನ್ನು, ಮುಂದುವರಿಕೆಗಳನ್ನು ಮತ್ತು ನೆನಪುಗಳನ್ನು ಅಭಿವ್ಯಕ್ತಿಸಿದೆ. ಬಿಲ್‌ರಲ್ಲಿ ಇಂದು ಸನ್ನಿವೇಶಗಳು ಸ್ವಲ್ಪ ಬದಲಾಗಿವೆ. ಈಗ ಜನರು ಆರು ತಿಂಗಳು ಹೊಲದಲ್ಲಿ ದುಡಿಯುತ್ತಾರೆ. ಇನ್ನೂ ಆರು ತಿಂಗಳಿಗೆ ಬೇಕಾದ ಕೆಲಸವನ್ನು ಹುಡುಕುತ್ತಾರೆ. ಪ್ರಸ್ತುತ ದಿನಮಾನದಲ್ಲಿ ಹಣದ ಅಗತ್ಯವು ತುಂಬಾ ಇರುತ್ತದೆ. ಹಣದ ಅಗತ್ಯವನ್ನು ಪೂರೈಸಿಕೊಳ್ಳಲು ಬಡವರಿಗೆ ಸಾಧ್ಯವಿಲ್ಲ. ಇಂತಹ ಬಡಜನರು ಇಂದಿಗೂ ಆಹಾರಕ್ಕಾಗಿ ಅರಣ್ಯದಲ್ಲಿನ ಹಣ್ಣು-ಕಾಯಿಗಳನ್ನು ನಂಬಿಕೊಂಡು ಬದುಕುತ್ತಿದ್ದಾರೆ. ಹೀಗೆ ಆಹಾರಕ್ಕಾಗಿ ಅರಣ್ಯದಲ್ಲಿ ಅಡ್ಡಾಡುವಾಗ ಅವರ ಕಾಲುಗಳಿಗೆ ಪಾದರಕ್ಷೆಗಳು ಕೂಡ ಇರುವುದಿಲ್ಲ.

ಗಂಗೂಬಾಯಿ ಅವರ ಮಾತುಗಳಲ್ಲಿ ಬೆರ್ರಿ ಮರದ ಪ್ರಾಮುಖ್ಯತೆ ಎಷ್ಟಿತ್ತೆಂಬುವುದನ್ನು ಗಮನಿಸಬಹುದು. ಆ ಹಳ್ಳಿಗಳಲ್ಲಿನ ಮಕ್ಕಳು ಬೆರ್ರಿ ಮರದ ಹಣ್ಣುಗಳನ್ನು ಹೆಚ್ಚು ಇಷ್ಟ ಪಡುತ್ತಿದ್ದರು. ಅವುಗಳು ಹಸಿರು ಬಣ್ಣದಲ್ಲಿದ್ದು ಕಾಯಾಗಿರುತ್ತವೆ. ನಂತರ ಹಳದಿಗೆ ತಿರುಗಿದಾಗ ಹಣ್ಣು ಆಗುವ ಸೂಚನೆ ಕಾಣಿಸುತ್ತದೆ. ಕೊನೆಯ ಹಂತದಲ್ಲಿ ಕೆಂಪಾದಾಗ ಹಣ್ಣಾಗಿರುತ್ತದೆ. ಗಂಗೂಬಾಯಿ ರಚಿಸಿರುವ ಚಿತ್ರದಲ್ಲಿ ಈ ಮೂರು ರೀತಿಯ ಬೆರ್ರಿಗಳನ್ನು ಕಾಣಬಹುದು. ತುಂಬ ಹಸಿವಿನಿಂದ ತಾಳ್ಮೆ ಕಳೆದುಕೊಂಡ ಮಕ್ಕಳು ಹಣ್ಣಾಗುವ ಮೊದಲೇ ಕಾಯಿಗಳನ್ನು ಕಿತ್ತು ತಿನ್ನುವುದಿದೆ.



ಬಿಲ್‌ರಿಗೆ ಪ್ರತಿದಿನವು ಅರಣ್ಯದ ಜೊತೆಗೆ ನಿರಂತರವಾಗಿ ಸಂಪರ್ಕವಿರುತ್ತದೆ. ಜಾನುವಾರುಗಳನ್ನು ಮೇಯಿಸಲು ಹೋಗುವುದು ಸಹ ಇದೆ. ಹೀಗೆ ಅರಣ್ಯಕ್ಕೆ ಹೋದಾಗ ಸೇಂದಿ ಮರದಲ್ಲಿನ ಸೇಂದಿ ಹಣ್ಣುಗಳನ್ನು ಹುಡುಕಿ ತಿನ್ನುತ್ತಾರೆ. ಆ ಹಣ್ಣುಗಳು ರುಚಿಕರವಾಗಿರುತ್ತವೆ. ಪಕ್ಷಿಗಳು, ಮಂಗಗಳು, ದನಗಾಹಿಗಳು ಎಲ್ಲರೂ ಸಾಮಾನ್ಯವಾಗಿ ಹಣ್ಣುಗಳನ್ನು ಆಶ್ರಯಿಸಲಾಗಿದೆ. ಆ ಮರದಲ್ಲಿ ಸೇಂದಿಯನ್ನು ಇಳಿಸಲಾಗುತ್ತದೆ. ಸೇಂದಿ ಗಿಡದ ಎಲೆಯಿಂದ ಕಸಬರಿಕೆಗಳನ್ನು ತಯಾರಿಸಿಕೊಳ್ಳುತ್ತಾರೆ. ಬಿಲ್‌ರಿಗೆ ಮರಗಳ ಜೊತೆಗೆ ತುಂಬಾ ಅವಿನಾಭಾವ ಸಂಬಂಧವನ್ನು ಹೊಂದಿವೆ ಎಂಬುವುದನ್ನು ಈ ಮೇಲಿನ ಎರಡು ಮರಗಳಿಂದಲೂ ತಿಳಿಯಬಹುದು.



ಬಿಲ್‌ರು ಏನನ್ನು ತಿನ್ನಬೇಕು, ಏನನ್ನು ತಿನ್ನಬಾರದು ಎನ್ನುವುದರ ಬಗ್ಗೆಯೂ ಗಂಗೂಬಾಯಿಯವರು ಈ ಕೃತಿಯಲ್ಲಿ ಹೇಳಿದ್ದಾರೆ. ಆಕೆಯು 'ಗೋಂದಿ' ಗಿಡದ ಎಲೆಗಳನ್ನು ತಿನ್ನುವುದರ ಬಗ್ಗೆ ಹೇಳುತ್ತಾರೆ. ಆ ಎಲೆಗಳು ಗಿಡದಿಂದ ಕೆಳಗೆ ಬಿದ್ದ ತಕ್ಷಣ ತಿನ್ನಬೇಕಾಗುತ್ತದೆ. ಅಂದರೆ ಹಸಿವಿನ ಧಾವಂತವನ್ನು ಹೇಳುತ್ತಾರೆ. ಅದನ್ನು ಚಿತ್ರದಲ್ಲಿ ಕೂಡ ಆಕೆಯು ಚಿತ್ರಿಸಿದ್ದಾರೆ.

ಕೆಲವು ಮರದ ಎಲೆಗಳು ವಿಷಕಾರಿಯಾಗಿವೆ. ಅವುಗಳನ್ನು ಖಾದ್ಯ ತಯಾರಿಸಲು ಜನರು ಬಳಸುತ್ತಾರೆ. ತಮ್ಮ ಹಿರಿಕರಿಂದ ಆ ಬಿಲ್ ಮಕ್ಕಳು ಯಾವ ಮರದ ಹಣ್ಣು-ಕಾಯಿ, ಎಲೆಗಳನ್ನು ತಿನ್ನಬೇಕು, ತಿನ್ನಬಾರದು ಎಂಬುವುದನ್ನು ತಿಳಿದಿರುತ್ತವೆ.

ಬಿಲ್‌ರಿಗೆ ಮರ-ಗಿಡಗಳ ಜೊತೆಗೆ ಒಂದು ಅವಿನಾಭಾವ ಸಂಬಂಧವನ್ನು ಬೆಳೆಸಿಕೊಂಡಿದ್ದಾರೆ. ಗಿಡಗಳು, ಮರಗಳು ಅವರಿಗೆ ಕೇವಲ ಉಪಯುಕ್ತ ವಸ್ತುಗಳಷ್ಟೇ ಅಲ್ಲ, ಅವರಿಗೆ ಅವುಗಳು ಸೌಂದರ್ಯದ ಪ್ರತೀಕ, ದೈವತ್ವದ ಪ್ರತೀಕ. ಅವರಿಗೆ ಅರಣ್ಯವು ಒಂದು ಮನೆಯಾಗಿ, ಸ್ಫೂರ್ತಿಯಾಗಿ ಹಾಗೂ ರಕ್ಷಣಾ ಸ್ಥಳವನ್ನಾಗಿ ಮಾಡಲ್ಪಟ್ಟಿವೆ. ಮರಗಳು ಅವರಿಗೆ

ಎಷ್ಟು ಒಡನಾಡಿಯಾಗಿದ್ದವೆಂಬುವುದನ್ನು ಅವರು ಹಾಕಿಸಿಕೊಳ್ಳುವ ಹಚ್ಚೆಯ ಚಿತ್ರವಿನ್ಯಾಸವನ್ನು ನೋಡಬಹುದು. ಆ ಹಚ್ಚೆಯ ಚಿತ್ರವು ರ್‍ಯಾನ್ ಮರದ ಆಕಾರದಲ್ಲಿರುತ್ತದೆ. ಗಂಗೂಬಾಯಿಯವರು ಈ ಚಿತ್ರಕೃತಿಯಲ್ಲಿ ಹಚ್ಚೆಯ ಚಿತ್ರ ವಿನ್ಯಾಸಗಳನ್ನು ಸಹ ಚಿತ್ರಿಸಿದ್ದಾರೆ. ಆಡುಗಳು ಈ ರ್‍ಯಾನ್ ಮರದ ಎಲೆಗಳನ್ನು ತಿನ್ನುತ್ತವೆ. ಜನರು ಕೂಡ ಹಸಿವಾದಾಗ ಆ ಗಿಡದ ಎಲೆ ಮತ್ತು ಹಣ್ಣನ್ನು ತಿಂದು ಹೊಟ್ಟೆ ತುಂಬಿಸಿಕೊಳ್ಳುತ್ತಾರೆ.





ಗಂಗೂಬಾಯಿಯವರು ಹೇಳುವ ನೈಜ ಕಥೆಯೊಂದು ಹೀಗಿದೆ. "ಅರಣ್ಯದಲ್ಲಿ ಗೆಳತಿ ಬೂರಿಬಾಯಿ ಒಂದು ಮಗುವಿಗೆ ಜನ್ಮ ನೀಡಿದ ಕಥೆಯಾಗಿದೆ. ಆ ದಿನ ಸುಮಾರು ೧೧ ಗಂಟೆಗೆ ಬೂರಿಬಾಯಿ ಕೆಸಲಕ್ಕೆ ಬಂದಳು. ನಾವೆಲ್ಲರೂ ಸೇರಿ ಅರಣ್ಯದ ಸಮೀಪವೇ ಇರುವ ಜಾಗವೊಂದನ್ನು ಸ್ವಚ್ಛ ಮಾಡುತ್ತಿದ್ದೆವು. ಆಗ ಬೂರಿಬಾಯಿ ತುಂಬು ಗರ್ಭಿಣಿಯಾಗಿದ್ದಳು. ಅಂದು ಅವಳು ಎಂದಿನಂತೆ ಸಮಾಧಾನದಿಂದ ಇರಲಿಲ್ಲ. ಆದ್ದರಿಂದ ಅವಳು ಮನೆಗೆ ಹೋಗಲು ನಿರ್ಧರಿಸಿದಳು. ಸಾವಕಾಶವಾಗಿ ಗಿಡಗಳ ಕಡೆಗೆ ಹೆಜ್ಜೆ ಹಾಕಿದಳು. ಅವಳು ಕೆಲವೊಂದು ಪೊದೆಗಳ ಕೆಳಗೆ ಕುಳಿತ್ತಿದ್ದುದನ್ನು ನೋಡಿ ಕೂಡಲೇ ಅವಳಿರುವಲ್ಲಿಗೆ ಹೋದೆವು. ಅಷ್ಟರಲ್ಲಿ ಅವಳಿಗೆ ಹೆರಿಗೆ ನೋವು ಕಾಣಿಸಿಕೊಂಡಿತ್ತು. ಮಗುವು ಜನ್ಮ ತಾಳುವ ಅವಸರದಲ್ಲಿತ್ತು. ನಾವೆಲ್ಲ ಮಗುವಿನ ಜನನಕ್ಕೆ ಅವಳಿಗೆ ಸಹಕರಿಸಿ, ನೀರನ್ನು ತಂದು ನೀರಿನಿಂದ ಅವಳನ್ನು ಹಾಗೂ ಮಗುವನ್ನು ತೊಳೆದೆವು.

ಆ ಮಗುವಿಗೆ 'ಜಂಗಲ್' ಎಂದು ನಾಮಕರಣ ಮಾಡಿದ್ದೆವು. ಈ ಚಿತ್ರದಲ್ಲಿ ಬೂರಿಬಾಯಿ ಮಗುವಿಗೆ ಜನ್ಮ ನೀಡುತ್ತಿರುವುದನ್ನು ಚಿತ್ರಿಸಿದ್ದೆನೆಂದು ಹೇಳುತ್ತಾಳೆ. ಮಗುವು ಸ್ವಲ್ಪ ಬೆಳೆದ ಮೇಲೆ



ಬೂರಿಬಾಯಿ ಅವನನ್ನು ತನ್ನ ಜೊತೆಗೆ ಕೆಲಸಕ್ಕೆ ಕರೆದುಕೊಂಡು ಬರುತ್ತಿದ್ದಳು. ಗಿಡದ ಕೆಳಗೆ ಒಂದು ಜೋಳಿಗೆ ಕಟ್ಟಿ ಅಥವಾ ಹಗ್ಗದಿಂದ ಜೋಕಾಲಿ ಕಟ್ಟಿ ಮಗುವನ್ನು ಮಲಗಿಸಿ ತಾನು ಕೆಲಸ ಮಾಡುತ್ತಿದ್ದಳು" ಎನ್ನುವ ಈ ಚಿಕ್ಕ ನೈಜವಾದ ಜೀವನ ಕಥೆಯನ್ನು ಕೇಳಿದಾಗ ಬಿಲ್‌ರಿಗೂ ಮತ್ತು ಅರಣ್ಯಕ್ಕೂ ಇರುವ ಸಂಬಂಧ ಅರ್ಥ ಮಾಡಿಕೊಳ್ಳಬಹುದು. ಅರಣ್ಯದಲ್ಲಿ ಬೂರಿಬಾಯಿಗೆ ಹುಟ್ಟಿದ ಮಗನಿಗೆ 'ಜಂಗಲ್' ಅಂತ ಹೆಸರಿಡುವುದು ಜನಪದರನ್ನು ನೆನಪಿಸುತ್ತದೆ. ಆದಿವಾಸಿಗಳು ಸಾಮಾನ್ಯವಾಗಿ ವಾಸಿಸುವುದು ಅರಣ್ಯದಲ್ಲಿ. ಇಲ್ಲಿ ಹೆಣೆದಿರುವ ಚಿತ್ರಕಥೆ ನೈಜವಾದುದು, ಬೂರಿಬಾಯಿ ಅನುಭವಿಸಿದ ಪ್ರಸವ ವೇದನೆಯ ಚಿತ್ರವನ್ನು 'ಟ್ರೀ ಮ್ಯಾಟರ್ಸ್' ನಲ್ಲಿ ಸೇರಿಸಿರುವುದು ಗೆಳತನಕ್ಕೆ ನೀಡಿದ ಪ್ರೀತಿಯ ಸಂಕೇತವಾಗಿದೆ. ಇವರಿಬ್ಬರು ಸಹ ಇಂದು ಮಾನವ ಸಂಗ್ರಹಾಲಯ, ಭೂಪಾಲನಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

ಅರಣ್ಯವು ಎಷ್ಟು ಶಾಂತವೋ ಅಷ್ಟೇ ಅಪಾಯಕಾರಿ ಸ್ಥಳವೂ ಹೌದು. ಬಿಲ್‌ರು ಸಾಹಸ ಮತ್ತು ಬೇಟೆಗೆ ಅರಣ್ಯದೊಳಕ್ಕೆ ಹೋಗಲು ಹೆದರುವವರಲ್ಲ. ಅವರಿಗೆ ತಾವು ಮಾಡುತ್ತಿರುವ ಕೆಲಸಗಳಲ್ಲಿ ಎಚ್ಚರವಿರುತ್ತದೆ. ಅರಣ್ಯದಲ್ಲಿ ಅವರನ್ನು ರಕ್ಷಿಸುವ ಮತ್ತು ಅಪಾಯಕಾರಿಯಾದ ಆತ್ಮಗಳು ಎರಡೂ ಇರುತ್ತವೆಂದು ಬಿಲ್‌ರು ನಂಬಿದ್ದಾರೆ. ಅರಣ್ಯದಲಿ 'ಚುಡೇಲ' ಎಂಬ ಆತ್ಮವು ಬೆದರಿಸುತ್ತದೆಂದು ಆಕೆಯು ಹೇಳುತ್ತಾಳೆ. ಅದಕ್ಕೆ ಜನರು ಹೆದರುತ್ತಾರೆ. ಆದರೆ ಅದು



ಯಾರಿಗೂ ಹಾನಿಯನ್ನುಂಟು ಮಾಡಿಲ್ಲ. ಅದು ಹಗಲು-ರಾತ್ರಿ ನಮ್ಮ ಸುತ್ತ-ಮುತ್ತಲೂ ಇರುತ್ತದೆ ಎಂಬುವುದು ಬಿಲ್‌ರ ನಂಬಿಕೆಯಾಗಿದೆ. ಈ ಹಿನ್ನೆಲೆಯಲ್ಲಿ ಗಂಗೂಬಾಯಿ ಹುಡುಗ-ಹುಡುಗಿಯನ್ನು ಚುಡೇಲ ಗಿಡದ ಕೆಳಗೆ ಚಿತ್ರಿಸಿರುವುದನ್ನು ಗಮನಿಸಬಹುದು. ಇಂತಹ ಘಟನೆಗಳ ಬಗೆಗೆ ಬಿಲ್‌ರಲ್ಲಿ ಸಾಂಪ್ರದಾಯಿಕ ಕಥೆಗಳಿವೆ.

ಅರಣ್ಯದ ತಾಯಿಯು ಇರುವುದನ್ನು ಮುಂದಿನ ಚಿತ್ರಗಳಲ್ಲಿ ಬಿಡಿಸಲಾಗಿದೆ. ಬಿಲ್‌ರ ಅರಣ್ಯದ ದೇವತೆಯು ಅರಣ್ಯ ಮತ್ತು ಅಲ್ಲಿಗೆ ಬರುವ ಜನರನ್ನು ಸಂರಕ್ಷಿಸುತ್ತಾಳೆ. ಅರಣ್ಯವು ತುಂಬ ಅಪಾಯಕಾರಿ ಸ್ಥಳವಾಗಿದೆ. ಅರಣ್ಯಕ್ಕೆ ಹೋದಾಗ ಕಾಡುಪ್ರಾಣಿಗಳಿಂದ, ವಿಷ ಜಂತುಗಳಿಂದ, ವಿಷಕಾರಿ ಮುಳ್ಳುಗಳಿಂದ ಈ ದೇವತೆ ರಕ್ಷಿಸಬಲ್ಲಳೆಂಬುವುದು ಅವರ ನಂಬಿಕೆಯಾಗಿದೆ. ಈ ದೇವತೆಯು ಹಣ್ಣು-ಕಾಯಿ-ಎಲೆಗಳನ್ನು ತಿನ್ನಲು ಅನುಮತಿ ನೀಡುತ್ತಾಳೆ. ಉರುವಲಿಗೆ ಒಣ ಕಟ್ಟಿಗೆಗಳನ್ನು ಮಾತ್ರವೇ ಕಾಡಿನಿಂದ ಕಟ್ಟಿಕೊಂಡು ಬರಬೇಕು. ಹಸಿ ಗಿಡ, ಮರದ ಹಸಿ ತೊಗಟೆಗಳನ್ನು ಕಡಿದರೆ ಆ ದೇವತೆ ಕೋಪಗೊಳ್ಳುತ್ತಾಳೆ ಎಂಬುವುದು ಕಾಡಿನ ಸಂರಕ್ಷಣೆಗೆ ಬಿಲ್‌ರು ಕಂಡುಕೊಂಡಿರುವ ಉಪಾಯವಾಗಿದೆ.



ಈ ದೇವತೆಯ ಇರುವಿಕೆಯನ್ನು ಜನರು ಕಲ್ಲಿನ ರೂಪದಲ್ಲಿ ಗುರುತಿಸಿಕೊಂಡಿದ್ದಾರೆ. ಕಲ್ಲುಗಳು ದೇವ ಮತ್ತು ದೇವತೆಯ ಆಕಾರಗಳಾಗಿವೆ. ಕಲ್ಲು ಮತ್ತು ಧ್ವಜಗಳಿಂದ ಆದಿವಾಸಿಗಳ ಮಂದಿರ ರಚನೆಯಾಗುತ್ತದೆ.

'ಕಸುಮರ್' ಎಂಬ ದೇವರು ಅರಣ್ಯದಲ್ಲಿ ಮರದ ಕೆಳಗೆ ವಾಸಿಸುತ್ತಾನೆ. ಅವನು ಅರಣ್ಯದಲ್ಲಿ ದಾರಿ ತಪ್ಪಿಸಿಕೊಂಡವರಿಗೆ ಮತ್ತು ಕೆಟ್ಟ ಅದೃಷ್ಟವನ್ನು ಹೊಂದಿದವರಿಗೆ ಸಹಾಯ ಮಾಡುತ್ತಾನೆ. ಕೆಟ್ಟ ಆತ್ಮಗಳಿಂದ ತೊಂದರೆಗೀಡಾದವರು ಸಹ ಈ ದೇವರನ್ನು ಬೇಡಿಕೊಳ್ಳುತ್ತಾರೆ.



ಜನರು ತಮ್ಮ ಕಷ್ಟಗಳನ್ನು ದೇವತೆಯ ಬಳಿ ಹೇಳಿಕೊಳ್ಳುತ್ತಾರೆ. ಆ ಕಷ್ಟಗಳು ನಿವಾರಣೆಯಾದರೆ ಕಾಣಿಕೆಗಳೊಂದಿಗೆ ಪೂಜೆ ಮಾಡುತ್ತೇವೆಂದು ಜನರು ಕಸುಮರ್ ದೇವರಲ್ಲಿ ಹರಕೆಯನ್ನು ಹೊರುತ್ತಾರೆ. ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ಹರಕೆಯನ್ನು ತೀರಿಸುತ್ತಾರೆ. ಕೆಲವರು ತೆಂಗಿನಕಾಯಿ, ಇನ್ನೂ ಕೆಲವರು ಕೋಳಿಯನ್ನು ಬಲಿ ಕೊಡುತ್ತಾರೆ. ಕಸುಮರ್ ದೇವಾಲಯದ ಸುತ್ತ ಮಣ್ಣಿನ ಕುದುರೆಗಳನ್ನು ಕಾಣಬಹುದು. ಜನರು ತಮ್ಮ ಕಷ್ಟಗಳು ಪರಿಹಾರವಾದರೆ ದೇವಾಲಯವನ್ನು ಕಟ್ಟಿಸುತ್ತೇವೆಂದು ಹರಕೆ ಹೊರುತ್ತಾರೆ. ಆದರೆ ಬಡವರಿಗೆ ಅದು ಸಾಧ್ಯವಿಲ್ಲ. ಕಾರಣ ಅವರು ಈ ರೀತಿಯ ಮಣ್ಣಿನ ಕುದುರೆಯ ಶಿಲ್ಪವನ್ನು ಕಾಣಿಕೆಯಾಗಿ ಕೊಡುತ್ತಾರೆ.



ಈ ಚಿತ್ರಕೃತಿಯು ಬಿಲ್ ಜನರ ಸಾಂಸ್ಕೃತಿಕ ಜಗತ್ತನ್ನು ಬಿತ್ತರಿಸುತ್ತದೆ. ನಂಬಿಕೆಗಳು ಅವರ ಬದುಕಿನೊಳಗೆ ಕೆಲಸ ಮಾಡಿರುವ ಬಗೆಯನ್ನು ಅಭಿವ್ಯಕ್ತಿಸುತ್ತದೆ. ಬಿಲ್ ಜನರ ಸಾಂಸ್ಕೃತಿಕ ಅನಾವರಣವನ್ನು ಈ ಕೃತಿಯು ಮಾಡಬಲ್ಲದು. ಈ ಚಿತ್ರಕೃತಿಯಲ್ಲಿ ಕಂಡುಬರುವ ಬಿಲ್ ಜೀವನ ಮತ್ತು ಕಾಡಿನ ಬಗ್ಗೆ ಚಿತ್ರಗಳು ಹೇಳುತ್ತಿವೆ ಮತ್ತು ಕಥೆಯು ಹೇಳುತ್ತಿದೆ. ಗಂಗೂಬಾಯಿ ಅವರು ಈ ತಂತ್ರವನ್ನು ಬಳಸಿ ಈ ಕೃತಿಯನ್ನು ಕಟ್ಟಿಕೊಟ್ಟಿದ್ದಾರೆ.

ಬಡಾದೇವನು ಆಲದ ಮರದ ಕೆಳಗೆ ವಾಸಿಸುತ್ತಾನೆ. ಮರದ ಸುತ್ತಲೂ ದೇವರು ಮತ್ತು ಜನರು ಇಬ್ಬರೂ ಆವರಿಸಿರುವುದನ್ನು ಕಾಣಬಹುದು. ಇದು ಸಹ ಕಲ್ಲಿನ ರೂಪದಲ್ಲಿದೆ. ಗ್ರಾಮದ ಜನರು ಈ ದೇವರಿಗೆ ಮರದ ಸುತ್ತಲೂ ಕಟ್ಟೆ ಕಟ್ಟುತ್ತಾರೆ. ಅಲ್ಲಿ ತಮ್ಮ ತೊಂದರೆಗಳಿಗೆ ನಿವಾರಣೆಯನ್ನು ಕೇಳುತ್ತಾರೆ. ಅಲ್ಲಿನ ಕಟ್ಟೆಯ ಮೇಲೆ ಜನರು ಕುಳಿತು ಮಾತನಾಡುತ್ತಾರೆ.



ಮರ ಗಿಡಗಳು ಬಿಲ್‌ರ ಪ್ರತಿಯೊಂದು ಶುಭ ಕಾರ್ಯದಲ್ಲೂ ಪ್ರಮುಖ ಪಾತ್ರ ವಹಿಸುತ್ತವೆ. ಮದುವೆಯ ಸಂದರ್ಭದಲ್ಲಿ ಮಾವಿನ ಮರ ಮತ್ತು ಮಹುವಾ ಗಿಡಗಳು ಪ್ರಮುಖ ಪಾತ್ರವನ್ನು ನಿರ್ವಹಿಸುತ್ತವೆ. ಮಾವಿನ ಮರದಡಿಯಲ್ಲಿಯೇ ಮದುವೆ ಮಾತುಕತೆ ನಿಶ್ಚಯವಾಗುವುದು. ವಧು-ವರನನ್ನು ಸ್ವಾಗತಿಸುವುದು ಮಾವಿನ ಮರದ ಬಳಿಯಲ್ಲಿಯೇ ಎಂಬುವುದನ್ನು ಗಂಗೂಬಾಯಿ ಈ ಕೃತಿಯಲ್ಲಿ ಹೇಳುತ್ತಾರೆ. ಈ ಎರಡು ಮರಗಳು ಮಂಗಳಕರವಾದವು ಎಂಬುದಾಗಿ ಬಿಲ್‌ರು ನಂಬಿದ್ದಾರೆ. ಬಿಲ್‌ರನ್ನು ಹೊರತುಪಡಿಸಿ ಹೇಳುವುದಾದರೆ, ಮದುವೆ ಸಂದರ್ಭದಲ್ಲಿ, ಮದುವೆಯ ನಿಶ್ಚಯ ಸಂದರ್ಭದಲ್ಲಿ ಮಾವಿನ ಮರದ ಎಲೆಯಿರುವ ಟೊಂಗೆಯನ್ನು ಪೇಟಕ್ಕೆ ಸಿಗಿಸಿಕೊಳ್ಳುವ ವಾಡಿಕೆಯಿದೆ.



ಬಿಲ್‌ರು ಬೇವಿನ ಮರವನ್ನು ಔಷಧಿಯ ರೂಪದಲ್ಲಿ ಉಪಯೋಗಿಸುತ್ತಾರೆ. ಬೇವು ಕಹಿ ಮತ್ತು ತಂಪಾಗಿದ್ದು ಹಲವು ರೀತಿಯಲ್ಲಿ ಸಹಕಾರಿಯಾಗಿದೆ. ಬೇವಿನಿಂದ ಬೇವಿನ ಎಣ್ಣೆಯನ್ನು ತಯಾರಿಸಿಕೊಳ್ಳುತ್ತಾರೆ, ಹಲ್ಲನ್ನು ಸ್ವಚ್ಛಗೊಳಿಸಿಕೊಳ್ಳಲು ಬೇವಿನ ಕಡ್ಡಿಯನ್ನು ಬಳಸಿಕೊಳ್ಳುತ್ತಾರೆ. ಬೇವಿನ ಎಲೆಯನ್ನು ಮಕ್ಕಳಿಗೆ ದಡಾರದಂತಹ ಖಾಯಿಲೆ ಬಂದಾಗ ಮೈಯಿಗೆ ಲೇಪಿಸುತ್ತಾರೆ.



ಖಾಕ್ರಿ ಮತ್ತು ಮಹುವಾ ಮರಗಳು ಬಿಲ್‌ರ ಪ್ರಮುಖವಾದ ಆಕರ್ಷಣೀಯ ಕೇಂದ್ರ ಬಿಂದುಗಳಾಗಿವೆ. ಹುಟ್ಟಿನಿಂದ ಸಾವಿನವರೆಗೂ ಈ ಖಾಕ್ರಿ ಎಲೆಗಳನ್ನು ಉಪಯೋಗಿಸುವುದಿದೆ. ಮಗುವಿನ ನಾಮಕರಣ ಮತ್ತು ಮದುವೆ ಸಮಾರಂಭದ ಊಟವನ್ನು ಈ ಎಲೆಗಳ ಮೇಲೆಯೇ ಬಡಿಸಲಾಗುತ್ತದೆ. ಪ್ರತಿಯೊಂದು ದೇವರ ಪ್ರಾರ್ಥನೆ, ಸಮಾರಂಭ ಹಾಗೂ ದೇವರಿಗೆ ನೈವೇದ್ಯ ಮಾಡುವುದಕ್ಕೆ ಈ ಎಲೆಯನ್ನು ಬಳಸುತ್ತಾರೆ. ಆ ಎಲೆಗಳಿಂದ ತುಂಬಿದ ಖಾಕ್ರಿ ಚಿತ್ರವನ್ನು ಈ ಚಿತ್ರಕೃತಿಯಲ್ಲಿ ಬಿಡಿಸಲಾಗಿದೆ.

ಮಹುವಾ ಮರವು ಬಿಲ್ ಜನರ ಜೀವನದಲ್ಲಿ ಹಾಸುಕೊಕ್ಕಾಗಿರುವ ಪ್ರಮುಖವಾದ ಮರವಾಗಿದೆ. ಇದರಿಂದ ಸಾರಾಯಿ ತೆಗೆಯಲಾಗುತ್ತದೆ. ಸಾರಾಯಿಯನ್ನು ಪವಿತ್ರವೆಂದು ನಂಬಲಾಗಿದೆ. ಹಬ್ಬ, ಸಭೆ, ಸಮರಂಭಗಳಲ್ಲಿ ಇದನ್ನು ಬಳಸುತ್ತಾರೆ. ಮನೆಯಲ್ಲಿ ಇದನ್ನು ತಯಾರಿಸಿಕೊಳ್ಳುತ್ತಾರೆ. ಹೂಗಳಿಂದ ತೆಗೆದ ಎಣ್ಣೆಯನ್ನು ಔಷಧಿಯಂತೆ ಬಳಸಲಾಗುತ್ತದೆ. ಈ ಹೂವುಗಳು ಬಿಲ್‌ರಿಗೆ ಹಣವಿದ್ದಂತೆ, ಹಣದ ಅವಶ್ಯಕತೆ ಬಂದಾಗ ಹೂವುಗಳನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಾರೆ.



**ತಾಳೆ ಋತು**



ತಾಳೆ ಮರದಿಂದ 'ಟಾಡಿ' ಯನ್ನು ತಯಾರಿಸುತ್ತಾರೆ. ಒಂದು ಗಡಿಗೆಯನ್ನು ತೆಗೆದುಕೊಂಡು ತಾಳೆ ಮರದ ಹೊಂಬಾಳಿಗೆ ಕಚ್ಚು ಹಾಕಿ ಅದಕ್ಕೆ ಕಟ್ಟಲಾಗುತ್ತದೆ. ಈ ಚಿತ್ರದಲ್ಲಿ ಒಬ್ಬ ಮನುಷ್ಯನು ತಾಳೆ ಮರವನ್ನು ಹತ್ತಿ ಅಲ್ಲಿ ಗಡಿಗೆಯನ್ನು ಕಟ್ಟುತ್ತಿರುವುದನ್ನು ಕಾಣಬಹುದು. ಚಳಿಗಾಲದಲ್ಲಿ ಇದರ ರಸವನ್ನು ಬಳಸುತ್ತಾರೆ. ಸ್ವಲ್ಪ ಬಿಸಿಲು ಮೂಡಿದಾಗ ಅದು ಸಾರಾಯಿಯಾಗಿ ಮಾರ್ಪಾಡು ಹೊಂದುತ್ತದೆ. ಮತ್ತೊಂದು ಚಿತ್ರದಲ್ಲಿ ಜನರು ತಾಳೆ ಸಾರಾಯಿಯನ್ನು ಕುಡಿಯುತ್ತಿರುವ ಚಿತ್ರವನ್ನು ಬಿಡಿಸಿದ್ದಾರೆ. ತಾಳೆ ಮರದ ಹಣ್ಣುಗಳನ್ನು ತಿನ್ನಬಹುದಾಗಿದೆ.

ಹೋಳಿಯ ಹಬ್ಬವು ಬಿಲ್‌ರ ಹಳ್ಳಿಯಲ್ಲಿ ಪ್ರಮುಖವಾದ ಹಬ್ಬ. ಕೆಲವೊಂದು ಜಾತ್ರೆ-ಉತ್ಸವಗಳು ನಡೆಯುತ್ತವೆ. ಜನರು ಅಲ್ಲಿ ಬಣ್ಣಗಳನ್ನು ಪರಸ್ಪರ ಎರೆಚಿಕೊಳ್ಳುತ್ತಾರೆ. ಹಬ್ಬ ಮುಗಿದ ಮೇಲೆ ವಯಸ್ಸಿನ ಹುಡುಗಿಯರೆಲ್ಲರೂ ಸೇರಿ ಮನೆ ಮನೆಗೆ ಹೋಗಿ ಉಡುಗೊರೆಯನ್ನು ಕೇಳುವ ಪದ್ಧತಿಯಿದೆ.



ಅವರಿಗೆ ಪ್ರತಿಯೊಂದು ಮನೆಯಿಂದ ಕುಡಿಯಲು ಮಹುವಾವನ್ನು ಕೊಡುತ್ತಾರೆ. ಆ ದಿನ ಸಾಯಂಕಾಲ ಎಲ್ಲರೂ ಸೇರಿ 'ಜಮುನ' ಗಿಡದ ಕೆಳಗೆ ಕುಳಿತು ಉಡುಗೊರೆಯನ್ನು ಅಥವಾ ಹಣವನ್ನು ಹಂಚಿಕೊಳ್ಳುತ್ತಾರೆ. ಎಂದು ಹೇಳುತ್ತಾ ಗಂಗೂಬಾಯಿಯವರು ಈ ಚಿತ್ರಕೃತಿಗೆ ಶುಭ ವಿದಾಯವನ್ನು ತೋರುತ್ತಾರೆ.

ಗಂಗೂಬಾಯಿಯವರು ಬಿಲ್‌ರಿಗೆ ಒಡನಾಡಿಯಾಗಿರುವ ಮರಗಳು ಮತ್ತು ಆ ಮರಗಳಿಂದ ಆಗುತ್ತಿರುವ ಉಪಯೋಗಗಳನ್ನು ಹೇಳುತ್ತಾರೆ. ಆ ಮರಗಳು ಬಿಲ್‌ರ ಜೀವನಾಡಿಯಾಗಿ ಹೇಗೆ ಪಾತ್ರ ವಹಿಸುತ್ತವೆ ಎಂಬುವುದನ್ನು ಪುರಾಣ, ಕಲ್ಪಿತ ಕಥೆ, ವಾಸ್ತವತೆಯನ್ನು ಅಭಿವ್ಯಕ್ತಿಸುತ್ತದೆ. ಗಂಗೂಬಾಯಿಯವರ ಈ ಕೃತಿಯು ಬಿಲ್ ಸಾಮಾಜಿಕ ನಂಬಿಕೆಗಳನ್ನು ಆರ್ಥಿಕ ಸ್ಥಿತಿಯನ್ನು ಬಿತ್ತರಿಸುವಲ್ಲಿ ಸಹಾಯಕವಾಗಿದೆ. ಧಾರ್ಮಿಕ ಅಚರಣೆಗಳಿಗೂ ಮರಗಳಿಗೂ ಇರುವ ನಿಕಟ ಸಂಪರ್ಕವನ್ನು ಹೇಳುತ್ತಿದೆ.



**೬.೧.೪ ಬೂರಿಬಾಯಿ ಚಿತ್ರಕಲೆ: ರೂಪಾಂತರ**

ಬೂರಿಬಾಯಿಯವರು ಕೇಂದ್ರ ಸರ್ಕಾರವು ಸ್ಥಾಪಿಸಿರುವ ಭೂಪಾಲನ ಜನಜಾತಿ ಸಂಗ್ರಹಾಲಯದಲ್ಲಿ ಪಿಥೋರಾ ಚಿತ್ರಕಲಾವಿದೆಯಾಗಿದ್ದಾರೆ. ಅವರು ಪಿಥೋರಾ ಚಿತ್ರಕಲೆಯನ್ನು ತಮ್ಮ ಬಾಲ್ಯದಿಂದಲೇ ತಮ್ಮ ಹಿರಿಕರು ಬಿಡಿಸುತ್ತಿದ್ದುದನ್ನು ಗಮನಿಸಿದ್ದಾರೆ. ಹೀಗೆ ಗಮನಿಸಿ ನೋಡಿದ್ದು ಇಂದು ಅವರು ಕೇಂದ್ರ ಸರ್ಕಾರದ ಮಾನವ ಸಂಗ್ರಹಾಲಯದಲ್ಲಿ ಕೆಲಸವನ್ನು ಪಡೆಯಲು ಸಹಕಾರಿಯಾಯಿತು. ಬಾಲ್ಯದಲ್ಲಿಯೇ ತನ್ನ ಮನೆಯಲ್ಲಿ ಮತ್ತು ಊರಿನಲ್ಲಿ ಪಿಥೋರಾ ಆಚರಣೆಯನ್ನು ಮಾಡುವ ಸಂಪ್ರದಾಯವನ್ನು ಅವರು ಗಮನಿಸಿದ್ದರು. ಪಿಥೋರಾ ಅವರ ಸಂಸಾರಕ್ಕೆ ಒಂದು ರೀತಿಯಲ್ಲಿ ಸಮೃದ್ಧಿಯ ಸಂಕೇತವಾಗಿತ್ತು. ಅಲ್ಲದೆ ತನ್ನ ಬದುಕಿನ ಕಷ್ಟ ಕಾರ್ಪಣ್ಯಗಳನ್ನು ನಿವಾರಿಸುವ ಒಂದು ಪಿಥೋರಾ ಬಾಬಾನ ಪ್ರಾರ್ಥನೆಯಾಗಿತ್ತು. ಆದರೆ ವಿಪರ್ಯಾಸವೆಂದರೆ ಮೂಲ ಸಾಂಪ್ರದಾಯಿಕ ಪಿಥೋರಾದಲ್ಲಿ ಮಹಿಳೆಯರು ಚಿತ್ರಗಳನ್ನು ಬಿಡಿಸುವಂತಿರಲಿಲ್ಲ. ಚಿತ್ರಗಳನ್ನು ಬಿಡಿಸುವುದಕ್ಕೆ ಸಣ್ಣ ಅವಕಾಶವೊಂದನ್ನು ಕೊಡುತ್ತಿರಲಿಲ್ಲವೆಂದು ಸ್ವತಃ ಬೂರಿಬಾಯಿ ಅವರೇ ಹೇಳುತ್ತಾರೆ. ಚಿತ್ರವನ್ನು ತೆಗೆಯುತ್ತಿರುವ ರೀತಿ ಮತ್ತು ಸ್ವರೂಪವನ್ನು ಯಾವಾಗಲೂ ಗಮನಿಸುತ್ತಿದ್ದುದರಿಂದ ಇಂದು ಪಿಥೋರಾ

ಶೈಲಿಯ ಚಿತ್ರಗಳನ್ನು ಸುಲಭವಾಗಿ ಬಿಡಿಸಬಲ್ಲೆ. ಅಲ್ಲದೆ ಆ ಶೈಲಿಯನ್ನು ಹೊಸ ಹೊಸ ಬಗೆಯಲ್ಲೂ ಬಿಡಿಸುವ ಆಶಯವನ್ನು ಹೊಂದಿ ಬಿಡಿಸಲಾಗುತ್ತಿದೆ.

ಬೂರಿಬಾಯಿಯವರು ಈ ಹಿನ್ನೆಲೆಯಲ್ಲಿ ಮಾನವ ಸಂಗ್ರಹಾಲಯ, ಭೂಪಾಲನಲ್ಲಿ ೭೦ ಅಡಿ ಉದ್ದದ ಗೋಡೆಯ ಮೇಲೆ ಪಿಥೋರಾ ಚಿತ್ರವನ್ನು ಬಿಡಿಸಿದ್ದಾರೆ. ಈ ೭೦ ಅಡಿ ಉದ್ದದ ಚಿತ್ರದಲ್ಲಿ ಸಾಂಪ್ರದಾಯಿಕ ಚಿತ್ರಕಲೆಯ ಶೈಲಿಯನ್ನು ಬಿಡಿಸಿರುವುದಿಲ್ಲ. ಆದರೆ ಸಾಂಪ್ರದಾಯಿಕ ಚಿತ್ರಕಲೆಯ ಪ್ರಭಾವಕ್ಕೆ ಒಳಗಾಗಿ ಈ ಚಿತ್ರಗಳನ್ನು ಬಿಡಿಸಿರುವುದನ್ನು ಕಾಣಬಹುದು. ಒಬ್ಬ ಪಿಥೋರಾ ಚಿತ್ರಕಲಾವಿದೆಯಾಗಿ ಕಾಲಕ್ಕೆ ತಕ್ಕಂತೆ ತನ್ನ ಚಿತ್ರಗಳಲ್ಲಿ ರೂಪಾಂತರ ಪ್ರಕ್ರಿಯೆಗೆ ಒಳಗಾಗಿ ಚಿತ್ರ ಬಿಡಿಸಿರುವುದನ್ನು ಕಾಣಬಹುದು. ಮೂಲ ಪಿಥೋರಾವು ಹೇಗಿರುತ್ತದೆ ಎಂಬುದನ್ನು ಈ ಹಿಂದೆ ಸಾಕಷ್ಟು ಚರ್ಚೆ ಮಾಡಲಾಗಿದೆ. ಆದುದರಿಂದ ಅದರ ವಿವರಣೆಗೆ ಹೋಗದೆ ನೇರವಾಗಿ ಬೂರಿಬಾಯಿಯವರು ಪಿಥೋರಾವನ್ನು ಹೇಗೆ ಬಾಲ್ಯದಿಂದಲೂ ಕಲಿಯಬೇಕಾಯಿತು ಎಂಬುವುದಕ್ಕೆ ಬರೆದಿರುವ ಈ ೭೦ ಅಡಿ ಉದ್ದದ ಚಿತ್ರಕಲೆಯೇ ಸಾಕ್ಷಿಯಾಗಿದೆ. ಆಕೆಯು ಬಿಡಿಸಿರುವ ಚಿತ್ರದಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದದ್ದು ತನ್ನ ಜೀವನ ವೃತ್ತಾಂತವನ್ನೆ ಬಿಡಿಸಿ ತೋರಿಸಿದ್ದಾಳೆ. ಆಕೆಯು ಹೇಗೆ ಮಾನವ ಸಂಗ್ರಹಾಲಯಕ್ಕೆ ಬಂದು ಚಿತ್ರಕಲಾವಿದೆಯಾದೆನೆಂದು ಸಹ ಚಿತ್ರಗಳ ಮೂಲಕ ಹೇಳಿಕೊಂಡಿದ್ದಾರೆ. ತನ್ನ ಕುಟುಂಬ, ತನ್ನ ಸಮಾಜ, ತನ್ನ ವೃತ್ತಿ, ಚಿತ್ರಕಲೆಯ ಆರಂಭವನ್ನು ಬಾಲ್ಯದಿಂದಲೂ ಅನುಭವಿಸಿದ ಮತ್ತು ತನ್ನ ಅನುಭವಕ್ಕೆ ಬಂದ ಘಟನೆಗಳನ್ನು ಚಿತ್ರಗಳಲ್ಲಿ ಕಾಣಿಸಿದ್ದಾಳೆ.

ಹೀಗೆ ತನ್ನ ಜೀವನ ವೃತ್ತಾಂತವನ್ನು ಚಿತ್ರಗಳ ಮೂಲಕ ಬಿಡಿಸಿದ ಬುಡಕಟ್ಟು ಕಲಾವಿದೆಯರಲ್ಲಿ ಬೂರಿಬಾಯಿಯೆ ಮೊದಲನೆಯವಳು ಅನ್ನಿಸುತ್ತದೆ. ಆಕೆಯು ಅನೇಕ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಚಿತ್ರ ಶಿಬಿರಗಳಲ್ಲಿ ಪಾಲ್ಗೊಂಡಿದ್ದಾರೆ. ಹೀಗೆ ಪಾಲ್ಗೊಳ್ಳುವುದಕ್ಕೆ ವಿಮಾನದಲ್ಲಿ ಕೂಡ ಸಂಚರಿಸುತ್ತಾರೆ. ವಿಮಾನದಲ್ಲಿ ಪಯಣಿಸಿದ ಚಿತ್ರವನ್ನು ಕೂಡ ಪಿಥೋರಾದಲ್ಲಿ ಬಿಡಿಸಿದ್ದಾರೆ. ತನ್ನ ಅನುಭವಕ್ಕೆ ಬಂದಂತಹ ಮತ್ತು ಸ್ವತಃ ತಾನು ಅನುಭವಿಸಿದ ಘಟನೆಗಳನ್ನು ಈ ೭೦ ಅಡಿಯ ಚಿತ್ರದಲ್ಲಿ ಬಿಡಿಸಿದ್ದೇನೆಂದು ಬೂರಿಬಾಯಿ ಹೇಳುತ್ತಾರೆ.

ಮಾನವ ಸಂಗ್ರಹಾಲಯಕ್ಕೂ ಪೂರ್ವದಲ್ಲಿ ಜಾಬುವಾದಲ್ಲಿ ವಾಸಿಸುತ್ತಿದ್ದಳು. ತನ್ನ ಬಾಲ್ಯದಿಂದಲೂ ಆಕೆಯು ಇದ್ದದ್ದು ಇಲ್ಲಿಯೆ. ಈ ಹಿನ್ನೆಲೆಯಲ್ಲಿ ಆಕೆಯು ಬರೆದ ಚಿತ್ರದಲ್ಲಿ ತಾನು ವಾಸಿಸುತ್ತಿದ್ದ ಮನೆಯ ಚಿತ್ರವನ್ನು ಬಿಡಿಸಿದ್ದಾಳೆ. ಮನೆಯ ಒಳಗಡೆ ಒಂದು ತೊಟ್ಟಿಲನ್ನು ಬಿಡಿಸಲಾಗಿದೆ. ಆ ತೊಟ್ಟಿಲೊಳಗೆ ಒಂದು ಮಗುವಿರಬಹುದೆಂದು ಊಹಿಸಿದರೆ ಅದು ಬೂರಿಬಾಯಿಯೇ ಆಗಿದ್ದಾಳೆ. ಆಕೆಯ ತಾಯಿ ಮನೆಯ ಮುಂದಿನ ಕಸವನ್ನು



ಸ್ವಚ್ಚ ಮಾಡುತ್ತಿದ್ದಾಳೆ. ಮತ್ತೆ ಬೂರಿಬಾಯಿ ಮನೆಯ ಹೊರಗೆ ಕೆಂಪು ಬಟ್ಟೆಯನ್ನು ಧರಿಸಿ ಏನೋ ಆಟವನ್ನು ಆಡುತ್ತಿದ್ದಾಳೆಂದು ಅನ್ನಿಸುತ್ತದೆ. ಆಕೆಯ ತಂದೆ ಯಾವುದೋ ಕೆಲಸದಲ್ಲಿ ಮಗ್ನರಾಗಿರುವಂತೆ ಗೋಚರಿಸುತ್ತದೆ. ಮುಂದಿನ ಹಂತದಲ್ಲಾಗಲೇ ಆಕೆಯು ತಂದೆ ತಾಯಿಯ ಜೊತೆಗೆ ಹೊಲಕ್ಕೆ ಹೋಗುತ್ತಿರುವ ಸನ್ನಿವೇಶವನ್ನು ಬಿಡಿಸಲಾಗಿದೆ. ಪಿಥೋರಾ ಚಿತ್ರಕಲೆಯು ಘಟನೆಗಳ ಮತ್ತು ಸನ್ನಿವೇಶಗಳ ಚಿತ್ರಕಥಾ ಕಣಜವಾಗಿದೆ.



ನಂತರದ ಚಿತ್ರಗಳಲ್ಲಿ ಊರಿನ ಜನರೆಲ್ಲ ಸೇರಿ ಪಿಥೋರಾ ಚಿತ್ರಗಳನ್ನು ರಚಿಸುತ್ತಿರುವುದನ್ನು ಕಾಣಬಹುದು. ಪಿಥೋರಾ ಚಿತ್ರ ತಯಾರಿಕೆಗಾಗಿ ಕೆಲವು ಜನರು ಸಹಾಯ ಮಾಡುತ್ತಿರುವುದನ್ನು ಕಾಣಬಹುದು. ಆರಂಭದಿಂದ ಈ ಜೀವನ ವೃತ್ತಾಂತದ ಚಿತ್ರಕಥಾಗುಚ್ಚವು ಮುಗಿಯುವವರೆಗೂ ಒಂದೇ ರೀತಿಯ ಬಟ್ಟೆಗಳನ್ನು ಬೂರಿಬಾಯಿ ಮತ್ತು ಅವರ ತಂದೆ-ತಾಯಿ ಧರಿಸಿರುವುದನ್ನು ಕಾಣಬಹುದು. ಒಂದು ಕಡೆ ಗೂಟಕ್ಕೆ ಆಡನ್ನು ಕಟ್ಟಿ ಹಾಕಿರುವಂತೆ ಚಿತ್ರ ತೆಗೆಯಲಾಗಿದೆ. ಇದನ್ನೆಲ್ಲ ಬೂರಿಬಾಯಿಯವರು ಗಮನಿಸಿರುವಂತೆಯೇ ತೆಗೆದಿರುವೆನೆಂದು ಸಂದರ್ಶನದ ವೇಳೆಯಲ್ಲಿ ತಿಳಿಸಿದರು. ಪಿಥೋರಾ ಪೂಜೆಯು ನಡೆಯುತ್ತಿರುವ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಹೋಗಬಾರದೆಂದು ಹೇಳಿದರು. ಆದರೆ ಅಧ್ಯಯನ ಸಂದರ್ಭದಲ್ಲಿ ಗಮನಿಸಿದಾಗ ಬಿಲ್‌ರು ಈ ನಿಯಮವನ್ನು ಉಲ್ಲಂಘಿಸಿರುವುದು ಕಂಡು ಬಂದಿತು. ಪಿಥೋರಾ ಪೂಜೆಗೆ ಪಾಲ್ಗೊಳ್ಳುತ್ತಾರೆ. ಚಿತ್ರಗಳನ್ನು ಹೆಣ್ಣು ಮಕ್ಕಳು ಬಿಡಿಸುವುದಿಲ್ಲ. ಬೂರಿಬಾಯಿಯು ಬಾಲ್ಯದಿಂದ ನೋಡಿಕೊಂಡು ಬಂದಂತಹ ಚಿತ್ರಗಳನ್ನು ಮನಸ್ಸಿನಲ್ಲಿಯೇ ಕಲ್ಪಿಸಿಕೊಂಡು ಮುಂದೆ ದೊಡ್ಡವಳಾದಾಗ ಬಿಡಿಸಿರುವುದನ್ನು ಮುಂದಿನ ಚಿತ್ರಗಳು ಉಲ್ಲೇಖಿಸುತ್ತವೆ.

ಬೂರಿಬಾಯಿಯವರು ಉಗಿಬಂಡಿ (ರೈಲು) ಚಿತ್ರವನ್ನು ಬಿಡಿಸಿದ್ದಾರೆ. ಈ ಚಿತ್ರವನ್ನು ಬರೆದಿರುವುದಕ್ಕೂ ಒಂದು ನಿದರ್ಶನವನ್ನು ಕೊಡುತ್ತಾರೆ. ಜಾಬುವಾದಿಂದ ಧಾಹೋದ ವರೆಗೂ ಉಗಿಬಂಡಿ ಚಲಿಸುತ್ತಿತ್ತು. ಬೂರಿಬಾಯಿಯ ಸಹೋದರಿಯರು ಕಟ್ಟಿಗೆ ಮತ್ತು ಹುಲ್ಲನ್ನು ಈ ರೈಲಿನಲ್ಲಿ ತೆಗೆದುಕೊಂಡು ಹೋಗಿ ಧಾಹೋದದಲ್ಲಿ ನಿತ್ಯವೂ ಮಾರಿಕೊಂಡು ಬರುತ್ತಿದ್ದರಂತೆ. ಆ ಕಟ್ಟಿಗೆ ಮತ್ತು ಹುಲ್ಲಿನ ಹೊರೆಗೆ ಕೇವಲ ೫೦ ಪೈಸೆ ಇಲ್ಲವೇ ಒಂದು ರೂಪಾಯಿ ಆದಾಯ ಬರುತ್ತಿದ್ದುದನ್ನು ನೆನಪಿಸಿಕೊಳ್ಳುತ್ತಾರೆ. ಈ ಹಿನ್ನೆಲೆಯಲ್ಲಿ ಆಕೆಯು ಈ ಚಿತ್ರದಲ್ಲಿ ಕಟ್ಟಿಗೆ ಮತ್ತು ಹುಲ್ಲು ಹೊತ್ತಿರುವ ಅಕ್ಕ-ತಂಗಿಯರ ಚಿತ್ರವನ್ನು ತೆಗೆದಿದ್ದಾರೆ. ಜೊತೆಗೆ ಉಗಿಬಂಡಿಯ ಚಿತ್ರವನ್ನು ಬರೆದಿದ್ದಾರೆ. ಮೂಲ ಪಿಥೋರಾವು ಸಾಂಪ್ರದಾಯಿಕವಾಗಿ ಆಚರಣೆಯ ರೂಪದಲ್ಲಿ ಕಂಡುಬರುತ್ತಿತ್ತು. ಅದನ್ನು ಬೂರಿಬಾಯಿಯಂತಹ ಚಿತ್ರಕಲಾವಿದರು ತಮ್ಮ ಬದುಕಿನ ಕಲೆಯಾಗಿಸಿಕೊಂಡರು. ಆ ಮೂಲಕ ಕಲೆ ಮತ್ತು ಆದಾಯ ಎರಡೂ ಅವರಲ್ಲಿ ಸದೃಢವಾಗಿ ಬೆಳೆಯಲು ಕಾರಣವಾಯಿತು. ಕುದುರೆಗಳು, ಎತ್ತುಗಳು ದೈವೀಕಥೆಯ ಸ್ವರೂಪದಲ್ಲಿ ಮೂಲ ಪಿಥೋರಾದಲ್ಲಿದ್ದರೆ, ಉಗಿಬಂಡಿ ವಿಮಾನಗಳು ಸಾಗಣಿಕೆಯ ವಸ್ತುಗಳಾಗಿ ಪರಿಗಣಿಸಿರುವುದನ್ನು ಕಾಣಬಹುದು. ತಮ್ಮ ತಮ್ಮ ಅನುಭವ ಲೋಕ ತೆರೆದಂತೆಲ್ಲ ಹೀಗೆ ಹೊಸ ಹೊಸ ವಸ್ತುಗಳು ಅವರ ಕಲಾಕೃತಿಯಲ್ಲಿ ಪ್ರವೇಶ ಪಡೆಯುತ್ತವೆ. ಇದಕ್ಕೆ ಉತ್ತಮ ಉದಾಹರಣೆ ಎಂದರೆ ಬೂರಿಬಾಯಿಯವರ ಪಿಥೋರಾ ಚಿತ್ರಗಳಾಗಿವೆ.



ಈ ಚಿತ್ರದಲ್ಲಿ ಬಗೋರಿಯಾ ಉತ್ಸವವನ್ನು ಕಾಣಬಹುದು. ಈ ಉತ್ಸವವನ್ನು ಹೋಳಿ ಹಬ್ಬದ ಎಂಟು ದಿನಕ್ಕೂ ಮೊದಲು ಇದನ್ನು ಆಚರಿಸಲಾಗುತ್ತದೆ. ಆ ಚಿತ್ರದ ಜೊತೆಗೆ ಡ್ರಮ್ಮನ್ನು ಬಡಿಯುತ್ತಿರುವ ವ್ಯಕ್ತಿಯೊಬ್ಬನಿದ್ದಾನೆ. ಜೊತೆಗೆ ಎರಡು ಕೈಗಳಲ್ಲಿ ಖಡ್ಗಗಳನ್ನು ಹಿಡಿದಿದ್ದಾನೆ. ಈ ಚಿತ್ರಗಳಾದ ಮೇಲೆ ಬಗೋರಿಯಾ ಉತ್ಸವದಲ್ಲಿ ತೊಡಗಿರುವ ಯುವಕರ ಗುಂಪಿನ ಚಿತ್ರಗಳನ್ನು ಕಾಣಬಹುದು.

ಈ ಚಿತ್ರದಲ್ಲಿ 'ಗಡಬಾಪ್ಸಿ' ದೇವತೆಯ ಚಿತ್ರವು ಕಾಣುತ್ತದೆ. ಈ ದೇವತೆಯನ್ನು ಕಟ್ಟಿಗೆಯಿಂದ ಮಾಡಲಾಗುತ್ತದೆ. ಇದನ್ನು ಬಹು ಎತ್ತರದಲ್ಲಿ ಹಿಡಿದಿಡಲಾಗಿರುತ್ತದೆ. ಮನೆಯಲ್ಲಿ ಯಾರಿಗಾದರೂ ವ್ಯಾಧಿ ಬಂದಿದ್ದರೆ ಅಥವಾ ಸುಖ ಶಾಂತಿ ಇಲ್ಲದಿದ್ದರೆ ಈ ದೇವತೆಯ ಉತ್ಸವವನ್ನು ಮಾಡುತ್ತಾರೆ. ಅಲ್ಲಿ ಒಬ್ಬ ಧ್ವಜವನ್ನು ಹಿಡಿದಿದ್ದಾನೆ, ಮತ್ತೊಬ್ಬನ ಕೈಯಲ್ಲಿ ಬಂದೂಕು ಇದೆ. ಗುಂಪಿನಲ್ಲಿ ಕೆಲವರು ಮಾತಾಡುತ್ತಿದ್ದಾರೆ, ಜೊತೆಗೆ ನಡೆದುಕೊಂಡು ಮೆರವಣಿಗೆ ಹೊರಟಂತೆ ಚಿತ್ರ ರಚಿಸಲಾಗಿದೆ.



ವ್ಯಾಧಿ ಬಂದವರಿಗೆ ವೈದ್ಯರಿಂದ ಔಷಧಿ ಕೊಡಿಸಿದರೂ ಗಿಡ ಮೂಲಿಕೆಯ ಔಷಧಿ ಕೊಡಿಸಿದರೂ ಗುಣವಾಗದೇ ಹೋದಾಗ 'ಗಡಬಾಪ್ಸಿ' ದೇವರಿಗೆ ಪೂಜೆ ಸಲ್ಲಿಸುತ್ತಾರೆ. ಒಂದು ವೇಳೆ ಗಡಬಾಪ್ಸಿಗೆ ಪೂಜೆ ಸಲ್ಲಿಸಿದರೂ ಗುಣವಾಗದಿದ್ದಾಗ ಹರಕೆಯನ್ನು ಹೊರುತ್ತಾರೆ. ಒಂದು ಬಟ್ಟೆಯ ಗಂಟು ಹಾಕಿ ಗಡಬಾಪ್ಸಿ ದೇವರಿಗೆ ಕಟ್ಟಲಾಗುತ್ತದೆ. ಒಳ್ಳೆಯದಾದ ಮೇಲೆ ದರ್ಶನ ಮಾಡಲಾಗುತ್ತದೆ. ಮನೆಯಲ್ಲಿ ಅಣ್ಣ, ತಂದೆ ಆ ಬಗೋರಿಯಾದ ಎತ್ತರದ ಕಟ್ಟಿಗೆ ಮೇಲೆ ಹತ್ತಿ ಹರಕೆ ಕೊಟ್ಟವವನನ್ನು ಇನ್ನೊಂದು ಕಟ್ಟಿಗೆಗೆ ಕಟ್ಟಿ ಏಳು ಬಾರಿ ಸುತ್ತಲೂ ತಿರುಗಿಸುತ್ತಾರೆ. ಏಳು ಬಾರಿ ತಿರುಗಿಸಿದ ನಂತರ ಕೆಳಗಿಳಿಸುತ್ತಾರೆ. ಇದಾದ ನಂತರ ಕೋಳಿ ಇಲ್ಲವೆ ಕುರಿಯನ್ನು ಬಲಿ ಕೊಡಲಾಗುತ್ತದೆ. ಇಂತಹ ಸಂಪ್ರದಾಯ ಇವತ್ತಿಗೂ ಜಾಬುವಾದಲ್ಲಿರುವುದನ್ನು ಬೂರಿಬಾಯಿ ನೆನೆಪಿಸುತ್ತಾರೆ. ಹೋಳಿಯ ಮರುದಿನ ಹಾಡು, ನೃತ್ಯ ನಡೆಯುತ್ತದೆಂಬುವುದನ್ನು ಅವರು ಹೇಳುತ್ತಾರೆ.



ಮುಂದಿನ ಚಿತ್ರದಲ್ಲಿ 'ಭಾರತ ಭವನ' ಚಿತ್ರವನ್ನು ತೋರಿಸಲಾಗಿದೆ. ಈ ಚಿತ್ರಕ್ಕೂ ಬೂರಿಬಾಯಿ ಅವರ ಜೀವನದಲ್ಲಿನ ಒಂದು ಚರಿತ್ರೆಯನ್ನು ಹೇಳುತ್ತಾರೆ. ಆ ಇತಿಹಾಸ ಹೀಗಿದೆ: "ನನ್ನ ಗಂಡ ಗುಜರಾತಿಯವನಾಗಿದ್ದು ಧಾಹೋದ ವಾಸಿ. ನಾನು ಮಧ್ಯಪ್ರದೇಶದವಳು. ಮದುವೆಯಾದ ಮೇಲೆ ನನ್ನನ್ನು ಕೂಲಿ ಕೆಲಸಕ್ಕೆ

ಭೂಪಾಲಿಗೆ ಕರೆದುಕೊಂಡು ಬರಲಾಯಿತು. ಈ ಚಿತ್ರದಲ್ಲಿ ಕಾಣುತ್ತಿರುವ ಭಾರತ ಭವನದ ಚಿತ್ರವನ್ನು ನಿರ್ಮಿಸಿದ್ದೇನೆ. ಈ ಭವನದ ಕೆಲಸಕ್ಕೆ ನಾವು ಸೇರಿಕೊಂಡೆವು. ಆ ಸಮಯದಲ್ಲಿ ನನಗೆ ಒಂದು ಹೆಣ್ಣು ಮಗುವಿತ್ತು ಅದನ್ನು ಇಲ್ಲಿ ಚಿತ್ರಿಸಿದ್ದೇನೆ. ಈ ಭವನದ ನಿರ್ಮಾಣ ಸಮಯದಲ್ಲೆ ಅಲ್ಲಿನ ನಿರ್ದೇಶಕರಾಗಿದ್ದ ಜೆ. ಸ್ವಾಮಿನಾಥನ್ ಎನ್ನುವವರು ಮತ್ತು ಜಗದೀಶ ಎನ್ನುವವರು ಇದ್ದರು. ಅವರು ಮೂಲತಃ ದಿಲ್ಲಿಯವರು.

ಜೆ. ಸ್ವಾಮಿನಾಥನ್ ಪ್ರಖ್ಯಾತ ಕಲಾವಿದರಾಗಿದ್ದರು. ನಾನು ನನ್ನ ತಂದೆ ಮತ್ತು ಭಾವ ಕೆಲಸ ಮಾಡುತ್ತಿದ್ದಾಗ ಸ್ವಾಮಿನಾಥನ್ ಅವರು ನಮ್ಮನ್ನು ಕುರಿತು ನೀವು ಯಾರು? ಎಲ್ಲಿಯವರು? ಯಾವ ಸಮಾಜದವರು? ಎಂದು ಕೇಳಿದಾಗ ನಾವು, ನಾವು ಜಾಬುವಾದವರು, ಬಿಲ್ ಜನಾಂಗದವರೆಂದು ಪರಿಚಯಿಸಿಕೊಂಡೆವು. ಆಗ ಅವರು ನಿಮ್ಮ ಸಮಾಜದಲ್ಲಿ ಮದುವೆಗಳು ಹೇಗಾಗುತ್ತವೆ? ಯಾವ ದೇವತೆಗಳನ್ನು ಪೂಜಿಸುತ್ತೀರಿ? ಹೇಗೆ ನಂಬುತ್ತಿರಿ? ನನಗೆ ಹೇಳಿ ತೋರಿಸಿ ಎಂದರು. ಆಗ ನಾನು ಹೇಳಿದೆ "ನಮ್ಮಲ್ಲಿ ಹೋಳಿ ಹಬ್ಬ ಹಾಗೂ ದೀಪಾವಳಿ ಹಬ್ಬದ ಸಮೀಪ ಮನೆಯ ಗೋಡೆಯನ್ನು ಸಗಣಿಯಿಂದ ಸಾರಿಸಿ ನಾವೇ ತಯಾರಿಸಿದ ಬಣ್ಣಗಳಿಂದ ಗೋಡೆಯ ಮೇಲೆ ಚಿತ್ರಗಳನ್ನು ಬಿಡಿಸುತ್ತೇವೆ. ಆದರೆ ಈಗ ನಿಮಗೆ ಹೇಗೆ ಚಿತ್ರಗಳನ್ನು ಬಿಡಿಸಿ ತೋರಿಸುವುದು ಎಂದು ಕೇಳಿದೆ. ಅದಕ್ಕೆ ಅವರು ನಿಮಗೆ ಬ್ರಷ್ ಬಣ್ಣ ಮತ್ತು ಕಾಗದಗಳನ್ನು ತಂದು ಕೊಡುತ್ತೇನೆ. ಅದರಲ್ಲಿ ರಚಿಸಲು ಪ್ರಯತ್ನ ಮಾಡಿ ಎಂದರು. ಮೊದಲು ನನಗೂ ಹೇಗೆ ಬರೆಯಬೇಕೆಂಬುವುದು ತಿಳಿಯಲಿಲ್ಲ. ಆದರೆ ಬಾಲ್ಯದಲ್ಲಿ ಕಂಡುಕೊಂಡ ಪಿಥೋರಾ ಚಿತ್ರಗಳು ಆಗ ಪ್ರಭಾವಿಸಿದವು. ಅಲ್ಲಿ ಅನೇಕ ನಮ್ಮ ಜನಾಂಗದ ಸ್ತ್ರೀ-ಪುರುಷರಿದ್ದರು ಬರೆಯಲು ನಿರಾಕರಿಸಿದರು. ನಾನು ನಿರಾಕರಿಸದೇ ಕೆಲವು ಚಿತ್ರಗಳನ್ನು ಬರೆದು ತೋರಿಸಿದೆ. ಆಗ ಅವರು ತುಂಬಾ ಮೆಚ್ಚಿದರು, ನಂತರ ಅವರು ನನಗೆ ಒಂದು ಕುರ್ಚಿ ಮೇಜನ್ನು ಕೊಟ್ಟು ಅಲ್ಲಿ ಕುಳಿತು ಅಂದವಾಗಿ ನಿನಗೆ ತಿಳಿದಿದ್ದನ್ನು ಚಿತ್ರಿಸು ಎಂದರು. ಆಗ ಭಾರತ ಭವನದ ಕುರ್ಚಿ



ಮೇಜಿನಲ್ಲಿ ಕುಳಿತು ರಚಿಸಲು ಮುಜುಗರವಾಗಿ, ಅಲ್ಲೊಂದು ದೇವಸ್ಥಾನದ ಬಳಿಯಲ್ಲಿ ಕುಳಿತು ಚಿತ್ರವನ್ನು ಬಿಡಿಸುತ್ತೇನೆ. ಅದರ ಚಿತ್ರವನ್ನು ಇಲ್ಲಿ ಬರೆದಿರುವೆನು." ಎಂದು ಭಾರತ ಭವನದ ವೃತ್ತಾಂತವನ್ನು ಹೇಳಿದರು.

ಮುಂದಿನ ಚಿತ್ರದಲ್ಲಿ ಸಮಾರಂಭವೊಂದರಲ್ಲಿ ಬೂರಿಬಾಯಿ ಪಾಲ್ಗೊಂಡು ಅಲ್ಲಿಯ ಸನ್ಮಾನವನ್ನು ಸ್ವೀಕರಿಸುತ್ತಿರುವ ಚಿತ್ರವನ್ನು ಬಿಡಿಸಲಾಗಿದೆ. ದೆಹಲಿಯಲ್ಲಿ ಅಭಿನವ ಸನ್ಮಾನ ಪಡೆಯುತ್ತಿರುವುದು ನಂತರ ರಾಣಿ ದುರ್ಗಾ ಸನ್ಮಾನ ಪಡೆಯುತ್ತಿರುವುದನ್ನು ಚಿತ್ರಿಸಲಾಗಿದೆ. ಆ ಚಿತ್ರಗಳನ್ನು ತುಂಬಾ ನವೀರಾಗಿ ಅವರು ಚಿತ್ರಿಸಿದ್ದಾರೆ.



ವಿಮಾನವೊಂದರ ಚಿತ್ರ ಬಿಡಿಸಿರುವುದನ್ನು ಅಲ್ಲಿ ಕಾಣಬಹುದು. ಅದು ಬೂರಿಬಾಯಿಯವರು ಅಮೇರಿಕಾಗೆ ಹೋಗಿಬಂದ ಅನುಭವವನ್ನು ಬಿಂಬಿಸುತ್ತದೆ.



ಈ ಚಿತ್ರದಲ್ಲಿ ಅವರ ಪರಿವಾರದ ಚಿತ್ರವನ್ನು ಬಿಡಿಸಲಾಗಿದೆ. ಅದರಲ್ಲಿ ಅವರು ಗಂಡನಿಗೆ ಚಿತ್ರ ರಚಿಸುವುದನ್ನು ಹೇಳಿ ಕೊಡುತ್ತಿದ್ದಾರೆ. ಆದರೆ ಪ್ರಸ್ತುತದಲ್ಲಿ ಗಂಡ ಇಲ್ಲ. ಈಗ ಅವರ ಮಕ್ಕಳು ಪಿಥೋರಾ ಚಿತ್ರಕಲೆಯಲ್ಲಿ ತೊಡಗಿಸಿಕೊಂಡಿದ್ದಾರೆ.

ಬೂರಿಬಾಯಿಯವರು ಇದಷ್ಟೇ ಅಲ್ಲದೇ ಕ್ಯಾನವಾಸ್‌ಗಳ ಮೇಲೆ ಚಿತ್ರಗಳನ್ನು ಬರೆದು ಮಾರಾಟ ಮಾಡುತ್ತಾರೆ. ಮೂಲ ಪಿಥೋರಾದಿಂದ ರೂಪಾಂತರ ಹೊಂದಿದ ಅನೇಕ ಕಲಾವಿದರು ಸರ್ಕಾರಿ ಉದ್ಯೋಗಗಳನ್ನು ಪಡೆದಿದ್ದಾರೆ. ಅಲ್ಲದೇ ತಮ್ಮ ಅನುಭವಕ್ಕೆ ಬಂದಂತಹ ಅನೇಕ ಸಂಗತಿಗಳನ್ನು ಚಿತ್ರಗಳಲ್ಲಿ ತರುತ್ತಿದ್ದಾರೆ. ಬೂರಿಬಾಯಿ ಅವರ ಚಿತ್ರಗಳಲ್ಲಿ ವಿಭಿನ್ನವಾದ ಕಲಾವಿದೆಯನ್ನು ಹುಡುಕಲು ಸಾಧ್ಯವಿದೆ. ಈಗ ಬಲೂನುಗಳ



ಮೇಲೆ ಚಿತ್ರ ಬಿಡಿಸುತ್ತಿದ್ದಾರೆ. ತಮ್ಮ ಜೀವನದ ಘಟನೆಗಳನ್ನೇ ನೆನಪಿಸಿಕೊಂಡು ಆ ಘಟನೆಗಳಿಗೆ ಒಂದು ಚಿತ್ರರೂಪಗಳನ್ನು ಕೊಟ್ಟಿರುವ ಅವರ ಕಲಾಭಿವ್ಯಕ್ತಿಯು ಧ್ಯಾನಸ್ಥವಾದದ್ದು ಎಂಬುದು ಇದರಿಂದ ತಿಳಿದು ಬರುತ್ತದೆ.

### ೬.೨ ಪಿಥೋರಾ ಚಿತ್ರಕಲೆ: ಸೌಂದರ್ಯ ಪ್ರಜ್ಞೆ

'ಈಸ್ಥೆಟಿಕ್ಸ್' ಇದು ಸೌಂದರ್ಯವನ್ನು ಕುರಿತು ಅಧ್ಯಯನ ಮಾಡುವ ಒಂದು ಮೀಮಾಂಸೆ ಅಥವಾ ಶಾಸ್ತ್ರ. ಇಂದ್ರಿಯ ಅನುಭವಗಳ ಪ್ರಜ್ಞೆಯ ಮೂಲಕ ಮಾಡುವ ಅಧ್ಯಯನವೂ ಹೌದು. ನಿರ್ದಿಷ್ಟವಾಗಿ ಏಕಾಭಿಪ್ರಾಯದಿಂದ ಇದುವರೆಗೂ ಸೌಂದರ್ಯದ ಬಗ್ಗೆ ವ್ಯಾಖ್ಯಾನವನ್ನು ಯಾರೂ ಒಪ್ಪಿಲ್ಲ. ವಿವಿಧ ಕಾಲ ಸಂದರ್ಭಗಳಲ್ಲಿ ಇದರ ವ್ಯಾಖ್ಯಾನಗಳು ಬದಲಾಗುತ್ತ ಬಂದಿವೆ.

'ಈಸ್ಥೆಟಿಕ' ಎಂಬ ಶಬ್ದವು ಗ್ರೀಕ್ ಭಾಷೆಯಿಂದ ಬಂದುದಾಗಿದೆ. ಇದರ ಮೂಲಪದ ರೂಪ 'Atoantikos' ಎಂಬುದಾಗಿದೆ. ಈ ಗ್ರೀಕ್ ಶಬ್ದ ರೂಪವು ನಂತರದಲ್ಲಿ 'ಈಸ್ಥೆಸಿಸ್' ಎಂದಾಗಿದೆ. ಈ ಹಿನ್ನೆಲೆಯಲ್ಲಿ ಇದರ ಅರ್ಥ "ಇಂದ್ರಿಯ ಸುಖದ ಪ್ರಜ್ಞೆ". ಈ 'ಈಸ್ಥೆಸಿಸ್' ಶಬ್ದದಿಂದ 'ಈಸ್ಥೆಟಿಕ' ಶಬ್ದವಾಗಿದೆ. ಹಿಂದಿ ಭಾಷೆಯಲ್ಲಿ 'ಸೌಂದರ್ಯ ಶಾಸ್ತ್ರ' ಅಥವಾ 'ನಂದನ ಶಾಸ್ತ್ರ' ಎಂದು ಕರೆಯುತ್ತಾರೆ. "ಎಲ್ಲ ಲಲಿತಕಲೆಗಳಿಗೂ ಸಮಾನ ವಿಷಯವಾಗಿರುವುದು ಮಾತ್ರವಲ್ಲದೇ ಬ್ರಹ್ಮ ಸೃಷ್ಟಿಯಲ್ಲೂ ಕಂಡುಬರುವ ಸೌಂದರ್ಯದ ಸ್ವರೂಪವನ್ನು ವಿವೇಚಿಸುತ್ತದೆ."

ಇಂಗ್ಲೀಷಿನ ನಿಘಂಟು ಒಂದರ ಪ್ರಕಾರ 'Aesthetic' ಎಂದರೆ 1.Connected with beauty and the study of beauty : from an Aesthetic point of view. 2. The study of beauty, especially beauty in Art : A set of principles about beauty or art : A new aesthetic ಎಂಬ ಅರ್ಥಗಳಿವೆ.

ಕನ್ನಡ ಸಂಕ್ಷಿಪ್ತ ನಿಘಂಟಿನಲ್ಲಿ 'ಸೌಂದರ್ಯ' ಎಂದರೆ ಸೌಂದರಿಯ ಎಂದು, 'ಸೌಂದರ್ಯ ಪ್ರಜ್ಞೆ' ಎಂದರೆ ಚೆಲುವಿನ ಬಗೆಗಿನ ಸೂಕ್ಷ್ಮ ಬುದ್ಧಿ ; ಸೌಂದರ್ಯದ ಬಗೆಗಿನ ತಿಳುವಳಿಕೆ ಎಂದು, 'ಸೌಂದರ್ಯ ಮೀಮಾಂಸೆ' ಎಂದರೆ ಸೌಂದರ್ಯ ತತ್ವದ ವಿಷಯದಲ್ಲಿ ಮಾಡುವ ವಿಚಾರ ; ಜಿಜ್ಞಾಸೆ ; ಎಂದು ಅರ್ಥಗಳಿವೆ.

'ಈಸ್ಥೆಟಿಕ' ಅಥವಾ 'ಸೌಂದರ್ಯ ಶಾಸ್ತ್ರ' ದ ಬಗ್ಗೆ ಭಿನ್ನ ಶಬ್ದಗಳನ್ನು ಬಳಸಿರಬಹುದು. ಆದರೆ ಅರ್ಥಗಳಲ್ಲಿ ಅಂತಹ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ. ಇದು ಭಾರತದಲ್ಲಿ ಸ್ವತಂತ್ರವಾಗಿ ಬೆಳೆಯುವುದಿಲ್ಲ. ಪಶ್ಚಿಮದಲ್ಲಿ ಸೌಂದರ್ಯ ಶಾಸ್ತ್ರವು ತತ್ವಶಾಸ್ತ್ರದ ಒಂದು ಭಾಗವಾಗಿ ಉತ್ತಮವಾದ ಬೆಳವಣಿಗೆಯನ್ನು ಹೊಂದಿದೆ. ಇದನ್ನು ಮುಖ್ಯವಾಗಿ ಕಲೆಯ ಹಿನ್ನೆಲೆಯಲ್ಲಿ ಮತ್ತು ಸಾಹಿತ್ಯ ಹಿನ್ನೆಲೆಯಲ್ಲಿ ಹೆಚ್ಚು ವಿವರಿಸಿಕೊಳ್ಳಲಾಗುತ್ತದೆ.

ಸೌಂದರ್ಯ ಶಾಸ್ತ್ರವು ಲಲಿತಕಲೆಗಳಲ್ಲಿ ಕಾಣುವ ಸೌಂದರ್ಯವನ್ನು ಅಭಿವ್ಯಕ್ತಿಸುವ ಅಧ್ಯಯನವಾಗಿದೆಯೇ ಹೊರತು, ಅನ್ಯ ಮಾಧ್ಯಮಗಳ ಮೂಲಕ ಅಭಿವ್ಯಕ್ತಗೊಳ್ಳುವ ಸೌಂದರ್ಯದ ಅಧ್ಯಯನವಲ್ಲ. ಕೆಲವು ಸಂದರ್ಭಗಳಲ್ಲಿ ಕಲಾಚಿಂತನೆ ಹಾಗೂ ಸೌಂದರ್ಯ ಶಾಸ್ತ್ರದ ವಿಶಿಷ್ಟ ಶೋಧನೆಯೂ 'ರಸ–ಸಿದ್ಧಾಂತ' ದ ಮೂಲಕವೂ ಮಾಡಲಾಗುತ್ತದೆ. ಸತ್ಯ–ಶಿವಂ–ಸುಂದರಂ ಕೂಡ ಸೌಂದರ್ಯ ದೃಷ್ಟಿಯ ಮೂಲ ತತ್ವವಾಗಿದೆ. ವೇದಗಳಲ್ಲಿ ರಸ ಹಾಗೂ ಆನಂದಗಳಿವೆ. ಸೌಂದರ್ಯ ಹಾಗೂ ಬಣ್ಣಗಳಿವೆ, ಸಂಗೀತ–ಋಕ್‌ಗಳಿವೆ, ಸೂಕ್ತಿ–ಸ್ತುತಿಗಳಿವೆ. ಅಂತಿಮವಾಗಿ ಸತ್, ಚಿತ್–ಆನಂದವಿದೆ. ಅಂದರೆ ಕಲೆಯ ನಿರ್ಮಾಣಿಕೆಗೆ ಬೇಕಾಗುವ ಎಲ್ಲವೂ ವೇದಗಳಲ್ಲಿವೆ. ರಸಾನುಭೂತಿಯೊಂದು ಸೌಂದರ್ಯ ಪ್ರಜ್ಞೆಯನ್ನು ಜಾಗೃತಗೊಳಿಸುತ್ತದೆ.

ಸೌಂದರ್ಯ ಶಾಸ್ತ್ರವು ಎರಡು ರೀತಿಯ ವ್ಯಾಪ್ತಿಯನ್ನು ಒಳಗೊಂಡಿದೆ. ಒಂದು, ಕಾವ್ಯದಲ್ಲಿರುವ ಸೌಂದರ್ಯ. ಎರಡು, ಚಿತ್ರ, ಶಿಲ್ಪ, ವಾಸ್ತು–ಸಂಗೀತ, ನೃತ್ಯ ಮುಂತಾದವುಗಳಲ್ಲಿ ಕಾಣುವ ಸೌಂದರ್ಯ. ಈ ಹಿನ್ನೆಲೆಯಿಂದ ಗಮನಿಸಿದಾಗ ಸೌಂದರ್ಯ ಶಾಸ್ತ್ರವು ಕಾವ್ಯಶಾಸ್ತ್ರ ಮಾತ್ರವಲ್ಲ, ಅದು ಕಲಾಶಾಸ್ತ್ರವೂ ಆಗಿದೆ. ಈ ಹಿನ್ನೆಲೆಯಲ್ಲಿ ಸೌಂದರ್ಯ ಶಾಸ್ತ್ರವನ್ನು ಕುರಿತು ಕೆಲವು ವಿದ್ವಾಂಸರು ಈ ಕೆಳಗಿನಂತೆ ಅಭಿಪ್ರಾಯಪಡುತ್ತಾರೆ.

ಕಾಲಿಂಗ್‌ವುಡ್ ಎಂಬ ವಿದ್ವಾಂಸನು "ನಾವು ಪ್ರಕೃತಿಯಲ್ಲಿ ಸಾಮಾನ್ಯವಾಗಿ ಎಷ್ಟೋ ವಸ್ತುಗಳನ್ನು ಸುಂದರವೆನ್ನುತ್ತೇವಾದರೂ, ಹಾಗೆನ್ನಲು ಕಾರಣವಾದ ಅನುಭವಕ್ಕೂ, ಸೌಂದರ್ಯಾನುಭವಕ್ಕೂ ಏನೇನೂ ಸಂಬಂಧವಿಲ್ಲ"[೧] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಲೋಕಾನುಭವವೇ ಬೇರೆ, ಸೌಂದರ್ಯಾನುಭವವೇ ಬೇರೆ ಎಂಬ ನಿಲುವನ್ನು ಅವರು ತಾಳುತ್ತಾರೆ.

ಐ. ಎ. ರಿಚರ್ಡ್ಸ್ ಕೂಡ " ಕಲಾನುಭವ ಮತ್ತು ಸೌಂದರ್ಯಾನುಭವ, ಒಂದಲ್ಲ ಒಂದು ರೀತಿಯಲ್ಲಿ ಲೋಕಾನುಭವಕ್ಕಿಂತ ಬೇರೆಯಾದುದೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಅದು ಲೋಕಾನುಭವಗಳ ಸುವ್ಯವಸ್ಥಿತ ರೂಪ" ಎಂದು ಹೇಳುತ್ತಾರೆ.[೨]

"ಸೌಂದರ್ಯ ವಿವರಣಾತೀತವಾದುದು. ಅದು ಯಾವೊಂದೂ ಸೂತ್ರದ ಹಿಡಿತಕ್ಕೂ ಸಿಗದೆ, ಸಂಚರಿಸುವ, ತೇಲುವ, ಮಿರುಗುವ ಒಂದು ಛಾಯೆ"[೩] ಎಂದು ಡಬ್ಲ್ಯು ನೈಟ್ ಹೇಳುತ್ತಾರೆ. ಬೋಸಾನ್ ಕ್ವೆಟ್ – "ಸೌಂದರ್ಯವನ್ನು ಸವಿಯಬಹುದು, ಅನುಭವಿಸಬಹುದು, ಆದರೆ ಅದನ್ನು ಸೂತ್ರರೂಪದಲ್ಲಿ ಹೇಳಲಾಗುವುದಿಲ್ಲ." [೪]

ಜಿ. ಎಸ್. ಶಿವರುದ್ರಪ್ಪನವರು ಸೌಂದರ್ಯವನ್ನು ಕುರಿತು "ಕಲೆಯ ಉದ್ದೇಶ ಸೌಂದರ್ಯ ನಿರ್ಮಾಣ. ಅದರ ಮೊದಲ ಗುರಿ ಸೌಂದರ್ಯಾನುಭವ, ಒಂದು ಗುಲಾಬಿ ಹೂವನ್ನು ನೋಡುವಾಗ, ಅದರ ರಮ್ಯತೆಯನ್ನು ಒಲಿದು ಮೆಚ್ಚಿ, ಅದು ನೀಡುವ ಸೊಗಸಿನಲ್ಲಿ ಮನಸ್ಸು ತಲ್ಲೀನವಾಗಬೇಕಾದದ್ದು ಮೊದಲ ಕ್ರಿಯೆ. ಅದರ ಬದಲು ಈ ಹೂವಿನಿಂದ ಔಷಧಿ ತಯಾರಿಸಬಹುದೇ ಎಂದು ಯೋಚಿಸುವುದು ತಪ್ಪಲ್ಲವಾದರೂ, ಮೊದಲು ಬರಬೇಕಾದದ್ದು ಆ ಭಾವನೆಯಲ್ಲ. ಹಾಗೆ ಬಂದುದಾದರೆ ಅದು ವ್ಯಾವಹಾರಿಕವೂ ಪ್ರಾಯೋಜನಿಕವೂ ಆದದ್ದಾಗುತ್ತದೆ. ಕಲೆಯ ಉದ್ದೇಶ, ವ್ಯಾವಹಾರಿಕವಾದದ್ದಲ್ಲ, ಸೌಂದರ್ಯಾತ್ಮಕವಾದದ್ದು." ಎಂದು ಹೀಗೆ ಹೇಳುತ್ತಾರೆ. [೫]

ಶಿವರಾಮ ಕಾರಂತರು "ಕಲೆಯೆಂಬ ಮಾತಿನ ಮರ್ಮವು ಎಲ್ಲರಿಗೂ ತಿಳಿದಂತಿದೆ, ತಿಳಿಯದಂತೆಯೂ ಇದೆ. ಕಲೆಯೆಂದರೆ ಸೌಂದರ್ಯ. ಆದರೆ ಸೌಂದರ್ಯವೇನೆಂದು ಇವರೆಲ್ಲರೂ ಅರಿತವರೋ ಎಂಬುವುದು ಸಂಶಯ. ಸಾಮಾನ್ಯವಾಗಿ ಒಬ್ಬನಿಗೆ ಸುಂದರವಾಗಿ ಕಾಣಿಸಿದುದು, ಇನ್ನೊಬ್ಬನಿಗೆ ಅಷ್ಟೆ ಚೆಲುವಿನದಾಗಿ ಕಾಣಿಸದು. ಒಬ್ಬನ ಕಣ್ಣಿಗೆ, ಕತ್ತೆಗಿಂತ ಕುದುರೆಯು ಚೆಂದವೆಂದು ಕಾಣಿಸಿದರೆ, ಇನ್ನೊಬ್ಬನಿಗೆ ಕುದುರೆಗಿಂತ ಕತ್ತೆಯೇ ಅಂದವೆಂದು ತೋರಬಹುದು. ಆದರೆ ಇಷ್ಟನ್ನು ಎಲ್ಲರೂ ಬಲ್ಲರು–ಕಲೆಯು ಸೌಂದರ್ಯ : ಸೌಂದರ್ಯವು ಆನಂದ–ಎಂದು. ಸೌಂದರ್ಯ ಚಿತ್ರವನ್ನು ನಮ್ಮ ಮುಂದಿರಿಸಿ ಅದನ್ನು ನಮಗುಣಿಸಿ ಅದರಿಂದ ನಮಗೆ ಆನಂದ ಉಂಟಾಗುವಂತೆ ಮಾಡುವವನೇ ಕಲಾಕುಶಲನು." ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.[೬]

ಕೀಟ್ಸನು 'ಸತ್ಯವೇ ಸೌಂದರ್ಯ' ಎಂದು ಹೇಳಿರುವನು, ಜೆ. ಎಚ್. ಕಸಿನ್ಸರವರು "ರೂಪ ನಿರ್ಮಾಣ ಮಾಡುವುದೊಂದೇ ಕಲಾಕೋವಿದನ ಕೆಲಸವಲ್ಲ. ಅವನಿಗೆ ಇದಕ್ಕೂ ಹಿರಿದೆನಿಸಿದ ಗುರಿಯೊಂದಿದೆ. ತನ್ನ ಕೃತಿಯಲ್ಲಿ ನಿತ್ಯಸತ್ಯ ಸೌಂದರ್ಯವನ್ನು ಪ್ರತಿಬಿಂಬಿಸಬೇಕಾತ್ತದೆ ಎನ್ನುತ್ತಾರೆ.

ಅಸದೃಶ, ಅಲೌಕಿಕ, ಅನುಪಮ, ಅನಂತ, ಅಖಂಡ, ಅಚ್ಚುತ, ಆನಂದವನ್ನು ಕೊಡಲು ಕಲಾವಿದನು ಬಯಸುತ್ತಾನೆಂದು ಶಾಸ್ತ್ರೀಯ ಸೌಂದರ್ಯ ಮೀಮಾಂಸೆಯು ಹೇಳುತ್ತದೆ. ಈ

ಮೇಲೆ ವ್ಯಾಖ್ಯಾನಿಸಿದ ವಿದ್ವಾಂಸರೆಲ್ಲರೂ ನೀತಿ ಬದ್ಧ ಶಾಸ್ತ್ರೀಯ ಮೀಮಾಂಸಕರು. ಅವರಲ್ಲಿ ಸೌಂದರ್ಯವೆಂದರೆ, ಅತೀ ಸುಂದರವೂ, ಅದ್ಭುತವೂ ಆದದ್ದು. ಹಾಗಾದರೆ, ಜಾನಪದರಲ್ಲಿ ಮತ್ತು ಬುಡಕಟ್ಟುಗಳಲ್ಲಿ ಕಂಡು ಬರುವ ಚಿತ್ರ ಜಗತ್ತನ್ನು ಯಾವ ಮೀಮಾಂಸೆಯ ನೆಲೆಯಲ್ಲಿ ನೋಡಬೇಕು. ಅವರ ಚಿತ್ರಗಳಲ್ಲಿ ಸೌಂದರ್ಯ ಪ್ರಜ್ಞೆ ಇಲ್ಲವೆ. ಜಾನಪದರು ಮತ್ತು ಬುಡಕಟ್ಟು ಜನರು ಸೌಂದರ್ಯ ಮೀಮಾಂಸೆಯ ಹಿನ್ನೆಲೆಯಲ್ಲಿ ಚಿತ್ರಗಳನ್ನು ಬರೆಯಲಿಲ್ಲ ಎಂದ ಮಾತ್ರಕ್ಕೆ ಅವರ ಚಿತ್ರಗಳಲ್ಲಿ ಸೌಂದರ್ಯ ಇಲ್ಲವೆ.

ಎಸ್. ಸಿ. ಪಾಟೀಲ ಎಂಬುವವರು ಚಿತ್ರಕಲೆಯಲ್ಲಿ ಅದರಲ್ಲೂ ಜನಪದ ಚಿತ್ರಕಲೆಯಲ್ಲಿ ಸೌಂದರ್ಯ ಮೂಲವನ್ನು ಹುಡುಕುವ ಪ್ರಯತ್ನ ಮಾಡಿದ್ದಾರೆ. ಅವರು " 'ಚಿತ್ರಕಲೆ' ಈ ಶಬ್ದವೇ ಸೂಚಿಸುವ ಹಾಗೆ ಕಣ್ಣಿಗೆ ಹಬ್ಬವನ್ನುಂಟು ಮಾಡುವಂತೆ, ಕಂಡ ನೋಟವೆಲ್ಲ ಶೃಂಗಾರಮಯವಾಗಿರುವುದಕ್ಕೆ, ಮನಸ್ಸು ಸೌಂದರ್ಯದಿಂದ ಮುದಗೊಳ್ಳುವಂತೆ, ವಿವಿಧ ರೀತಿಯ ವಿನ್ಯಾಸಗಳನ್ನು ಬದುಕೆಂಬ ಜೀವನ ಕಲೆಗೆ ನಮ್ಮ ಜನಪದರು ಅಳವಡಿಸಿಕೊಂಡರು. ಹೀಗಾಗಿ ಜನಪದ ಚಿತ್ರಕಲೆಯನ್ನು ಪ್ರಮುಖಾಂಶವಾಗಿ ಸೌಂದರ್ಯ ಪ್ರಜ್ಞೆಯಿಂದ ಪರಿಗಣಿಸಬೇಕಾಗುತ್ತದೆ." ಹೀಗೆ ಅಭಿವ್ಯಕ್ತಿಸುತ್ತಾರೆ.[೭]

ಸೌಂದರ್ಯ ಮತ್ತು ಕಲೆಯು ಏಕಕೇಂದ್ರಿತವಾದ ಏಕಪ್ರಕಾರಕ್ಕೆ ಒಳಪಟ್ಟದ್ದಲ್ಲ. ಹಾಗಾಗಿ ಕಲೆಗಳಲ್ಲಿ ಸೌಂದರ್ಯ ಪ್ರಜ್ಞೆಯು ಬಹುತರವಾದದ್ದು. ಕಲೆಗೆ ಅನೇಕ ಆಯಾಮ ಮತ್ತು ನೆಲೆಗಳಿವೆ, ಅನೇಕ ದಿಕ್ಕುಗಳಿವೆ, ಅನೇಕ ಉದ್ದೇಶ ಮತ್ತು ವೈಶಿಷ್ಟ್ಯಗಳಿವೆ. ಈ ವೈವಿಧ್ಯತೆಯನ್ನು ಗಮನಿಸಿದಾಗ ಶಿಷ್ಟ ಪರಂಪರೆಯ ಕಲೆಗಳಲ್ಲಿ ಸೌಂದರ್ಯವನ್ನು ಅನೇಕರು ಹುಡುಕಿರುವುದೇ ಹೆಚ್ಚು. ಜನಪದ ಮತ್ತು ಬುಡಕಟ್ಟುಗಳು ಪರಿಶಿಷ್ಟಕ್ಕೆ ಸಂಬಂಧಪಟ್ಟವು ಎಂದುಕೊಂಡಾಗ ಇದುವರೆಗೂ ಇವುಗಳಲ್ಲಿನ ಸೌಂದರ್ಯವನ್ನು ಗುರುತಿಸುವ ಪ್ರಯತ್ನ ಅಷ್ಟಾಗಿ ನಡೆದಿಲ್ಲ. ಇದರಲ್ಲಿ ಕೇವಲ ಅಲಂಕಾರಿಕವಾದ ಸೌಂದರ್ಯವನ್ನು ಮಾತ್ರ ಹುಡುಕುವುದಲ್ಲ. ಹಾಗೇ ಕಲೆಯೆಂದರೆ ಶಿಷ್ಟ ಪರಂಪರೆಯದ್ದನ್ನೆ ಉಲ್ಲೇಖಿಸುವುದು ಹೆಚ್ಚು. ಕಲಾಸೃಷ್ಟಿಯ ಸಂದರ್ಭವನ್ನು ರವಿಂದ್ರನಾಥರು ಮೂರು ಪ್ರಕಾರಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

೧. ಕಲೆಯ ಉತ್ಪತ್ತಿ ಪೂಜೆಯಿಂದ ಎಂದು ಭಾವಿಸಲಾಗಿದೆ. ಮನುಷ್ಯ ತನಗಿಂತ ಹೆಚ್ಚು ಬಲಶಾಲಿ, ಪ್ರಾಕೃತಿಕ ಅಸ್ತಿತ್ವ ಪಡೆಯಲು ಪ್ರಯತ್ನಿಸುತ್ತಾನೆ. ಅಥವಾ ಆ ಶಕ್ತಿಗಳನ್ನು ಪರಿಚಯಿಸಿಕೊಳ್ಳುವ ಪ್ರಯತ್ನವಾಗಿ ಯಾವ ರೀತಿಯ ಅಭಿವ್ಯಕ್ತಿ ಮಾಡುತ್ತಾನೆಯೋ ಅದೇ ಕಲೆ.

೨. ಜನಪದ ನೃತ್ಯಗಳು ಕೂಡ ಕಲೆಯ ಉತ್ಪತ್ತಿಯ ಸಾಧನಗಳಾಗಿವೆ. ಇವು ತನ್ನ ಪ್ರಾರಂಭದ ಕಾಲದಲ್ಲಿ ಪ್ರಕೃತಿಯಲ್ಲಿ ಹರಡಿದ ಜನಪದ ನೃತ್ಯಗಳಾಗಿವೆ. ಉದಾಹರಣೆಗೆ, ಬೇಟೆಯಲ್ಲಿ ವಿಜಯ ಸಾಧಿಸಿದಾಗ ವಿಜಯೋತ್ಸವ ಆಚರಿಸಲು ನೃತ್ಯ-ಗಾನ ನಡೆಸುತ್ತಿದ್ದರು. ಇದರಿಂದ ನೃತ್ಯ ಹಾಗೂ ಗಾನ ಕಲೆ ಹುಟ್ಟಿಕೊಂಡಿತು. ಇದರಂತೆಯೇ ಬೇಟೆಗೆ ಹೋಗುವ ಮೊದಲು ಶುಭಾಚರಣೆ ನಿಮಿತ್ಯ ಬೇಟೆ ಪ್ರಾಣಿಯ ಚಿತ್ರ ಬರೆದು ಅದನ್ನು ಸತ್ತಂತೆ ತೋರಿಸಲಾಗುತ್ತಿತ್ತು. ಇದರಿಂದ ಚಿತ್ರಕಲೆ ಹುಟ್ಟಿಕೊಂಡಿತು.

೩. ಮನುಷ್ಯನ ಆಧ್ಯಾತ್ಮಿಕ ಅಸ್ತಿತ್ವದ ರಹಸ್ಯಾತ್ಮಕ ಅನುಭೂತಿ ; ಪ್ರಕೃತಿಯ ಅಸ್ತಿತ್ವದ ಹಿಂದೆ ಇರುವ ರಹಸ್ಯವನ್ನರಿಯುವ ಹಸಿವು ಎಲ್ಲರಲ್ಲಿ ಇರುತ್ತದೆ. ಆ ರಹಸ್ಯಾತ್ಮಕ ಅಸ್ತಿತ್ವದ ಅನುಭೂತಿಯ ಅಭಿವ್ಯಕ್ತಿಯೇ ಕಲೆ.

ಈ ಮೇಲಿನ ಮೂರು ಮತಗಳಿಂದ ತಿಳಿಯುವುದು ಏನೆಂದರೆ, ಕಲೆಯ ಹುಟ್ಟು ಪೂಜೆ, ಪ್ರಕೃತಿ, ಬೇಟೆ, ಆಚರಣೆ, ಆಧ್ಯಾತ್ಮಿಕ ಮುಂತಾದವುಗಳಿಂದ ಅಭಿವ್ಯಕ್ತವಾಗುತ್ತದೆ. ಪ್ರಾಚೀನ ಕಾಲದಿಂದಲೂ ಮಾನವನಿಗೆ ಕಲೆಯು ಹೀಗೆ ಸಿದ್ಧಿಸಿದೆ. ಅವನು ಪ್ರಕೃತಿಯಲ್ಲಿನ ರೌದ್ರತೆ ಮತ್ತು ಸೌಂದರ್ಯತೆ ಎರಡನ್ನು ಒಟ್ಟಿಗೆ ಅನುಭವಿಸಿದ್ದರ ಫಲ ಕಲೆಯಾಗಿರಬಹುದು. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಕ್ರೂರ ಪ್ರಾಣಿಗಳ ಬೇಟೆ ಅನಿವಾರ್ಯವಾಯಿತು. ಆ ಪ್ರಾಣಿಗಳನ್ನು ಹೇಗೆ ಕೊಲ್ಲಬೇಕೆಂಬ ನೀಲ ನಕ್ಷೆಯು ಚಿತ್ರದ ಮೂಲಕ ತಯಾರಾಯಿತು. ಆಗಲೇ ಕಲೆಗಳಾದ ನೃತ್ಯ, ಗಾನ, ಚಿತ್ರಕಲೆಗಳಲ್ಲಿ ಒಂದಕ್ಕೊಂದು ಪೂರಕವಾಗಿ ಉದಯಿಸಲು ಆರಂಭವಾಯಿತು.

ಈ ದೃಷ್ಟಿಯಿಂದ ಗಮನಿಸಿದಾಗ ಪ್ರಕೃತಿ, ಪೂಜೆ, ಬೇಟೆ, ಆಚರಣೆ, ಆಧ್ಯಾತ್ಮಿಕತೆ, ಸೌಂದರ್ಯತೆಗಳನ್ನೆಲ್ಲವನ್ನೂ ಬಿಲ್ ಬುಡಕಟ್ಟು ಜನಾಂಗಗಳಲ್ಲಿ ಕಾಣಬಹುದು. ಬಿಲ್‌ರು ಸಾಂಪ್ರದಾಯಿಕ ಆಚರಣೆಯಿಂದ ಆರಂಭಗೊಂಡ ಚಿತ್ರಕಲೆಯಲ್ಲಿ ಸೌಂದರ್ಯಾನುಭೂತಿಯನ್ನು ಕಾಣಲು ಸಾಧ್ಯವಿದೆ. ಅವರ ನೃತ್ಯ-ಗಾನ ಜಗತ್ತು ಶಿಷ್ಟ ಪರಂಪರೆಗಿಂತ ಭಿನ್ನವಾದದ್ದು. ಪ್ರಕೃತಿಯ ಮಡಿಲಲ್ಲಿ ವಾಸಿಸುತ್ತಿದ್ದ ಬಿಲ್‌ರು ತಮ್ಮದೇ ಆದ ಸಾಂಸ್ಕೃತಿಕ ಲೋಕವನ್ನು ನಿರ್ಮಿಸಿಕೊಂಡಿದ್ದಾರೆ. ಅಂತಹ ಸಾಂಸ್ಕೃತಿಕ ಲೋಕವೇ ಇದುವರೆಗೆ ಚರ್ಚಿಸಿದ ಪಿಥೋರಾ ಆಗಿದೆ.

ಸೃಜನಶೀಲ ಪ್ರಕ್ರಿಯೆ, ವಿಶಿಷ್ಟವಾದ ಪ್ರತಿಭೆ ಇದ್ದು ಬರೆಯುವ ಮನಸ್ಸಿದ್ದರೆ ಕಲೆಯಾಗುತ್ತದೆ. ಇದನ್ನು ಚಿತ್ರಕಲೆಗೂ ಮತ್ತು ಪಿಥೋರಾಕ್ಕೂ ಅನ್ವಯಿಸಿಕೊಳ್ಳಬಹುದು. ಪಿಥೋರಾ ಚಿತ್ರಕಲಾವಿದರು ಸೃಜನಶೀಲತೆಯುಳ್ಳವರು ಮತ್ತು ಚಿತ್ರಕಲೆಯು ಅವರ ಪ್ರಕಾರದಲ್ಲಿ ಪ್ರತಿಭೆಯುಳ್ಳವರು. ಅವರ ಜೀವನ ಸೌಂದರ್ಯ ಮತ್ತು ಬದುಕಿನ ಸಮೃದ್ಧಿ

ಕಂಡುಕೊಳ್ಳುವ ಆಶಯದ ಆಚರಣೆಯಲ್ಲಿಯೇ ಪಿಥೋರಾ ಕಲೆ ಉದಯಿಸಿರುವುದು. ಅವರ ಕೈಚಳಕದಿಂದ ಅವರ ಮನೆ ಪ್ರವೇಶವಾದಂತೆ ಚಿತ್ರಕಲೆಯ ವೈಭವ ಕಾಣುತ್ತದೆ. ಆ ಚಿತ್ರಗಳನ್ನು ಸೂಕ್ಷ್ಮವಾಗಿ ನೋಡಿದರೆ ಭಾರತೀಯ ಚಿತ್ರಕಲೆಯ ವಿದ್ವಾಂಸರು ಹೇಳುವ ಷಡಂಗಗಳನ್ನು ನೆನಪಿಸಿಕೊಳ್ಳಬೇಕಾಗುತ್ತದೆ. ಶಿಷ್ಟ ಪರಂಪರೆಯ ಸೂತ್ರಗಳು, ಸೌಂದರ್ಯ ಅವರ ಚಿತ್ರಗಳಲ್ಲೂ ಇವೆ ಎಂದು ಅನಿಸದೆ ಇರಲಾರದು.

ಭಾರತೀಯ ಷಡಂಗಗಳು : ಪಿಥೋರಾ

೧. ರೂಪಭೇದ

೨. ಪ್ರಮಾಣ

೩. ಭಾವ

೪. ಲಾವಣ್ಯ ಯೋಜನೆ

೫. ಸಾದೃಶ್ಯ

೬. ವರ್ಣಿಕಾ ಭಂಗ

**೧. ರೂಪಭೇದ:** ಪಿಥೋರಾ ಚಿತ್ರಕಲೆಯಲ್ಲಿ ರೂಪಭೇದವು ಭಾರತೀಯ ಚಿತ್ರ ಶಾಸ್ತ್ರ ಅಭ್ಯಾಸ ಬಲದಿಂದ ಸಂಪಾದಿಸಿದ ಹಾಗೇ ಬಂದಿದ್ದಲ್ಲ. ಪಿಥೋರಾ ಚಿತ್ರಕಲಾವಿದರಿಗೆ ಅಂತಹದೊಂದು ಕಲಿಕೆಯ ಪಾಠವೇನು ಇಲ್ಲ. ಅವರಿಗೆ ಚಿತ್ರಕಲೆ ಪರಂಪರೆಯಿಂದ ಹರಿದು ಬಂದದ್ದು. ಮತ್ತು ಹಿರಿಯರಿಂದ ಕಲಿತದ್ದು. ರೂಪಭೇದವು ಬುಡಕಟ್ಟು ಅಥವಾ ಜಾನಪದ ತಿಳುವಳಿಕೆಯ ಫಲ. ಸ್ವತಃ ಪರಿಶ್ರಮದ ಫಲ.

ಪಿಥೋರಾ ಚಿತ್ರರಚನೆ ಮಾಡುವವನು ಹಾಗೂ ಅದನ್ನು ನೋಡುವವನು, ಇವರಿಬ್ಬರ ಜೀವನವನ್ನು ಪಿಥೋರಾದಲ್ಲಿ ಅಳವಡಿಸಿದ ಆತ್ಮೀಯತೆ ಆಗಿದೆ. ಈ ಚಿತ್ರಕಲೆಯಲ್ಲೂ ಒಳಗಣ್ಣು ಮತ್ತು ಹೊರಗಣ್ಣಿನಿಂದ ಚಿತ್ರವನ್ನು ಮೌಲ್ಯಮಾಪನ ಮಾಡಬಹುದು. ಹಾಗಾಗಿಯೇ ರೂಪದ ತಿಳುವಳಿಕೆ ಎರಡು ಪ್ರಕಾರಗಳಿಂದ ಸಾಧ್ಯ. ಒಂದು, ಕಣ್ಣಿನಿಂದ ನೋಡುವುದರ ಮೂಲಕ, ಇನ್ನೊಂದು, ಆತ್ಮದ ಮೂಲಕ. ಅವರ ಕಲೆಯಲ್ಲಿಯೂ ಕಣ್ಣಿನಿಂದ ನೋಡಿದ ರೂಪವು ಕೇವಲ ಬಾಹ್ಯ ರೂಪವಾಗಿರುತ್ತದೆ. ಅದು ಕೇವಲ ರೂಪ, ಬಣ್ಣ, ಆಕೃತಿಗಳಿಗೆ ಸಂಬಂಧಿಸಿದ್ದು. ಈ ನೆಲೆಯಿಂದಲೂ ಅವರ ಚಿತ್ರಕಲೆಯನ್ನು ನೋಡಿದಾಗ, ರಾಕ್ಷಸ, ದೇವರು, ಮಾನವ, ರೈತ, ಮಗು, ಹೆಂಗಸು, ಗಿಡ, ಮರ, ಬಳ್ಳಿ, ಕಾಡು ಪ್ರಾಣಿಗಳಾದ ಸಿಂಹ, ಹುಲಿ, ಜಿಂಕೆ, ಮೊಲ, ಕೋತಿ ಇತ್ಯಾದಿಗಳ ಬಗ್ಗೆ ರೂಪ ವಿಶಿಷ್ಟತೆಯನ್ನು ಕಾಣಬಹುದು. ಅವರ ಚಿತ್ರಕಲೆಯು ಘಟನೆಗಳ

ಸಂಯೋಜನೆಯೂ ಆಗಿದೆ. ಆ ಚಿತ್ರ ಸನ್ನಿವೇಶವನ್ನು ಆತ್ಮದ ಕಣ್ಣಿನಿಂದ ವಿವರಿಸಿಕೊಳ್ಳಲು ಸಹಕರಿಸುತ್ತದೆ. ಅಂದರೆ ಆ ಚಿತ್ರ ವಸ್ತುವಿನ ಆಂತರಿಕ ವ್ಯಾಪಾರದ ಸೌಂದರ್ಯವನ್ನು ಹಾಗೂ ಚಿತ್ರಕಾರನ ಪ್ರತಿಭೆಯನ್ನು ಕಲ್ಪಿಸಿಕೊಂಡು ಸೌಂದರ್ಯ ಪ್ರಜ್ಞೆಯನ್ನು ಪಡೆಯಬಹುದು.

ರೂಪಭೇದ ಪರಿಕಲ್ಪನೆಯು ಭಾರತೀಯ ಚಿತ್ರದ ತಾತ್ವಿಕ ನೆಲೆಯಾದುದಾದರೂ, ಅದಕ್ಕೆ ಶಾಸ್ತ್ರಬದ್ಧವಾದ ನೆಲೆಯಿಂದ ನೋಡಿದರೂ ಜನಪದೀಯರಲ್ಲೂ ಈ ಪರಿಕಲ್ಪನೆ ಕೆಲಸ ಮಾಡಿದೆ ಎಂಬುವುದಕ್ಕೆ ಈ ಪಿಥೋರಾವೇ ಸಾಕ್ಷಿಯಾಗಬಲ್ಲದು. ಆನಂದದ ಅನುಭವಗಳು, ಸೌಂದರ್ಯಾನುಭವಗಳು ಪಿಥೋರಾದಲ್ಲಿ ನೆಲೆಸಿವೆ. ಚಿತ್ರ ಬರೆದ ನಂತರ ಆ ಚಿತ್ರ ಪೂಜೆಯು ಮುಗಿದ ಮೇಲೆ ಸಮೂಹ ನೃತ್ಯವೊಂದು ಆನಂದದ ಸಂಕೇತವಾಗಿದೆ.

೨. **ಪ್ರಮಾಣ:** ಇದರಲ್ಲಿ ಚಿತ್ರಕಲೆಯು ಹೊಂದಿರಬೇಕಾದ ಕೆಲವು ಅಂಶಗಳನ್ನು ಗಮನಿಸಬಹುದು. ಸಮವಿಭಕ್ತತೆ, ಅನುಪಾತ, ಸೀಮೆ, ಉದ್ದಗಳ, ಶರೀರ ರಚನೆ ಮುಂತಾದವುಗಳು ಬಹುಮುಖ್ಯ ವಿವರಗಳನ್ನು ಶಾಸ್ತ್ರಬದ್ಧವಾಗಿ ವಿವೇಚಿಸಲಾಗಿದೆ. ಶಿಷ್ಟ ಚಿತ್ರಕಲೆಯ ಬಗ್ಗೆ ಮಾತನಾಡುವಾಗ ಕಲಾವಿದ್ವಾಂಸರು ಪ್ರಮಾಣ ಬದ್ಧತೆಯ ಬಗ್ಗೆಯೂ ಮಾತಾಡಿದ್ದಾರೆ. ಈ ಹಿನ್ನೆಲೆಯಲ್ಲಿ ಅವರು ಹೇಳುವ ಪ್ರಮಾಣದ ಅನ್ವಯಿಕತೆಯನ್ನು ಪಿಥೋರಾದ ಚಿತ್ರಗಳಲ್ಲಿ ಗಮನಿಸಿಬಹುದು. ಪಿಥೋರಾದಲ್ಲಿಯೂ ಸ್ತ್ರೀ ಪುರುಷ ಎತ್ತರಗಳಲ್ಲಿ ಭೇದ, ಅವರ ಅಂಗರಚನೆ, ಮನುಷ್ಯ ಮತ್ತು ರಾಕ್ಷಸರ ಆಕಾರಗಳ ಚಿತ್ರಗಳನ್ನು ಬರೆಯುವಾಗ ಪ್ರಮಾಣ ಪಿಥೋರಾ ಚಿತ್ರಕಾರರಲ್ಲಿಯೂ ಇದೆ ಎಂಬುವುದನ್ನು ಗಮನಿಸಬೇಕಾಗುತ್ತದೆ. ಪ್ರಮಾಣದ ಮೂಲಕ ಪ್ರತಿಯೊಂದು ಚಿತ್ರಗಳಿಗೂ ಬಣ್ಣಗಳ ಭೇದವನ್ನು ಮಾಡಲಾಗಿದೆ.

ಪ್ರಮಾಣದಿಂದ ಸೌಂದರ್ಯವನ್ನು ಅರಿಯಲು ಸಾಧ್ಯವಾಗಿದೆ. ಇದರ ಸಹಾಯದಿಂದ ಸೀಮಿತ, ಅಸೀಮ ಹಾಗೂ ವಸ್ತುಗಳ ಅಳತೆ ಸಾಧ್ಯವಿದೆ. ಸಮೀಪ ಹಾಗೂ ದೂರಗಳ ಅರಿವಿನ ಸಹಾಯದಿಂದ ಯಾವ ವಸ್ತುವಿನ ಚಿತ್ರವನ್ನು ಎಷ್ಟು ಪ್ರಮಾಣದಲ್ಲಿ ತೋರಿಸಿದರೆ ಸುಂದರವಾಗಿ ಕಾಣುತ್ತದೆ ಎನ್ನುವುದನ್ನು ನಿಶ್ಚಯಿಸಲಾಗಿದೆ. ಶಿಷ್ಟ ಪರಂಪರೆಯ ಚಿತ್ರಕಲೆಗಿಂತ ಪರಿಶಿಷ್ಟ ಪರಂಪರೆಯ ಚಿತ್ರಕಲೆ ಭಿನ್ನವಾಗಿದೆ. ಕೆಲವು ಚಿತ್ರಗಳಿಂದ ಪರಸ್ಪರ ಕೊಡುಕೊಳ್ಳುವಿಕೆಯು ನಡೆಯುತ್ತಿದೆ.

೩. **ಭಾವ:** ಪಿಥೋರಾದಲ್ಲಿ ವ್ಯಕ್ತಿಚಿತ್ರಗಳು ಮುಖಭಾವದ ಅಭಿವ್ಯಕ್ತಿಯನ್ನು ಅಷ್ಟು ಯಶಸ್ವಿಯಾಗಿ ಬಿಡಿಸಿರುವಂತೆ ಕಾಣುವುದಿಲ್ಲ. ಆ ಚಿತ್ರದ ಒಟ್ಟು ಭಂಗಿಯನ್ನು ನೋಡಿದರೆ ತಕ್ಕ ಮಟ್ಟಿಗೆ ಆ ಚಿತ್ರದ ಭಾವವನ್ನು ಅರ್ಥಮಾಡಿಕೊಳ್ಳಬಹುದಷ್ಟೆ. ಭಾವ ಒಂದು ಮಾನಸಿಕ

ಪ್ರಕ್ರಿಯೆಯಾಗಿದೆ. ಭಿನ್ನ ಭಿನ್ನ ಭಾವನೆಯ ಆಂಗಿಕ ಅಭಿವ್ಯಕ್ತಿಯನ್ನು ಅಲ್ಲಿ ಕಾಣುವ ಚಿತ್ರಗಳಲ್ಲಿ ಗಮನಿಸಬಹುದು. ನೀರು ತರುತ್ತಿರುವ ಚಿತ್ರಗಳು, ರೈತ ಹೊಲ ಉಳುಮೆ ಮಾಡುತ್ತಿರುವುದು, ದ್ವಾರಪಾಲಕ ಬಾಗಿಲಲ್ಲಿ ನಿಂತಿರುವುದು ಇವುಗಳು ಭಾವಗಳನ್ನು ಅಭಿವ್ಯಕ್ತಿಸದೇ ಇರಲಾರವು.

ಭಾರತೀಯ ಚಿತ್ರಕಲಾ ಸಿದ್ಧಾಂತದಲ್ಲಿ ಬಣ್ಣ, ರೇಖೆ, ಅಲಂಕಾರ ಮುಂತಾದವುಗಳ ಗುರಿ ಭಾವಾಭಿವ್ಯಕ್ತಿಯೇ ಆಗಿದೆ. ಅದನ್ನು ಪಿಥೋರಾವು ತನ್ನದೇ ಆದ ಸಾಂಪ್ರದಾಯಿಕ ಚಿತ್ರಗಳಲ್ಲಿ ಬಣ್ಣ, ರೇಖೆ ಮತ್ತು ಅಲಂಕಾರಗಳಿದ್ದರೂ ಅದು ಆಚರಣೆಯ ಸೂಚನೆಯಾಗಿ ಬಂದಿದೆ. ಆ ಚಿತ್ರಗಳಲ್ಲಿ ಮುಖಾಭಿವ್ಯಕ್ತಿಯ ಭಾವಗಳನ್ನು ಕಾಣಲು ಅಷ್ಟು ಸಾಧ್ಯವಾಗಿಲ್ಲ. ಆದರೆ ಆ ಚಿತ್ರಗಳ ಭಾವಗಳನ್ನು ಒಟ್ಟು ಚಿತ್ರದ ಮೂಲಕ ಮಾತ್ರವೇ ಗ್ರಹಿಸಲು ಸಾಧ್ಯ.

**೪. ಲಾವಣ್ಯ ಯೋಜನೆ:** ಪಿಥೋರಾ ಚಿತ್ರ ಸಂಯೋಜನೆಯಲ್ಲಿ ಪ್ರತಿಯೊಂದು ವಸ್ತುವಿನ ಚಿತ್ರಕ್ಕೂ ತನ್ನದೇ ಆದ ಸ್ಥಾನವನ್ನು ಒದಗಿಸಿದೆ. ಅಲ್ಲದೆ ಲಾವಣ್ಯವು ಭಾವವನ್ನು ಮುನ್ನಡೆಸುತ್ತದೆ. ಇದು ಸೌಂದರ್ಯಾನುಭೂತಿಯ ಹಾಗೂ ಶಾಂತಿಯ ಪೋಶಕವಾಗಿದೆ. ಶಿಷ್ಟ ಪರಂಪರೆಯ ಚಿತ್ರಕಲಾವಿದರು ಒಂದು ರೀತಿಯಲ್ಲಿ ಚಿತ್ರವೂ ಹೀಗೆ ಬರಬೇಕೆಂದು ಮೊದಲೇ ಗುರಿಯನ್ನು ಮತ್ತು ತಂತ್ರಗಾರಿಕೆಯನ್ನು ಯೋಚಿಸಿಕೊಂಡಿರುತ್ತಾರೆ. ಪಿಥೋರಾದಲ್ಲಿ ಹೀಗಾಗುವುದಿಲ್ಲ. ಸಿದ್ಧಾಂತವು ಇಲ್ಲದೆ ತಮ್ಮದೇ ಜಾನಪದೀಯ ನೆಲೆಯ ಗುಣಗಳಿಂದ ಚಿತ್ರಗಳನ್ನು ಸಂಯೋಜಿಸುತ್ತಾರೆ. ಪಿಥೋರಾ, ಪಿಥೋರಿ, ರಾಣಿ ಕಾಜೋಲ್, ಇಂದ್ರ ಬಾಬಾ, ಸೀತು ರಾಣು, ಕಾಲಿ ಕೋಯಲ್ ಮುಂತಾದ ಕುದುರೆಗಳು ಪುರಾಣ ಕಲ್ಪಿತ ವ್ಯಕ್ತಿಗಳ ಹಿನ್ನೆಲೆಯಲ್ಲಿ ಮೂಡಿಬರುತ್ತವೆ. ಈ ಚಿತ್ರಗಳನ್ನು ಗಮನಿಸಿದರೆ ಲಾವಣ್ಯದಿಂದ ಕೂಡಿಲ್ಲ ಎಂದು ಹೇಳಲು ಸಾಧ್ಯವಾಗದು. ಕುದುರೆಗಳು ಬಹು ರಮ್ಯವಾಗಿ ಕಾಣುತ್ತವೆ. ಅಲ್ಲಿರುವ ನವಿಲು, ಗಿಳಿ, ಹಂಸ, ಆನೆ, ಎತ್ತುಗಳನ್ನು ಗಮನಿಸಿದಾಗಲೂ ಲಾವಣ್ಯ ಯೋಜನೆಯ ಸೈದ್ಧಾಂತಿಕವಾದ ಅರಿವಿಲ್ಲದೇ ಹೋದರೂ ಜಾನಪದೀಯ ಗುಣ ಲಾವಣ್ಯ ಅವರಿಗೆ ಗೊತ್ತಿಲ್ಲದೆ ಇಲ್ಲ ಎಂಬುವುದಕ್ಕೆ ಆ ಪಿಥೋರಾ ಚಿತ್ರಗಳೇ ಸಾಕ್ಷಿಯಾಗಬಲ್ಲವು.

**೫. ಸಾದೃಶ್ಯ:** "ಯಾವುದೇ ಮೂಲ ವಸ್ತುವಿನೊಡನೆ ಅಚರ ಪ್ರತಿಕೃತಿಯನ್ನು ಸಮಾನಗೊಳಿಸುವುದೇ ಸಾದೃಶ್ಯವೆನಿಸಿಕೊಳ್ಳುತ್ತದೆ. ಚಿತ್ರವು ವಾಸ್ತವವನ್ನಾಧರಿಸಿ ಅಥವಾ ಕಾಲ್ಪನಿಕವಾಗಿರಬಹುದು. ಆದರೆ ಚಿತ್ರಿತ ವ್ಯಕ್ತಿ ಆಥವಾ ಆಕೃತಿಗಳು ನೋಡುಗರು ತಕ್ಷಣ ಗುರುತಿಸಿದರೆ ಅದುವೇ ಸಾದೃಶ್ಯ" ವೆಂದು ಹೇಳಲಾಗಿದೆ.[೮] ಈ ವ್ಯಾಖ್ಯಾನವನ್ನು ಪಿಥೋರಾ ಚಿತ್ರಕಲೆಗೆ ಅನ್ವಯಿಸಿ ಹೇಳಲು ಸಾಧ್ಯವಿದೆ. ಪಿಥೋರಾ ಸಾಂಸ್ಕೃತಿಕ ಚಿತ್ರಜಗತ್ತಿಗೆ ಆ ಚಿತ್ರಗಳ ಸಾದೃಶ್ಯ ರೂಪವು ಬೇಗ ಅನಾವರಣಗೊಂಡು ಬಿಡುತ್ತದೆ. ಪಿಥೋರಾ ಹೊರತು ಪಡಿಸಿದ ಸೈದ್ಧಾಂತಿಕ ಚಿತ್ರ ಜಗತ್ತಿಗೆ ಅವರ ಚಿತ್ರಗಳು ತಕ್ಷಣಕ್ಕೆ ಯಾವ ಭಾವ, ಸಾದೃಶ್ಯವನ್ನು ಕಂಡು

ಹಿಡಿಯಲು ಸಾಧ್ಯವಾಗುವುದಿಲ್ಲ. ಪಿಥೋರಾ ಜಗತ್ತಿನ ಚಿತ್ರಗಳ ಸಾದೃಶ್ಯ ರೂಪದ ವಿಶ್ಲೇಷಣೆಯ ಹಿಂದೆ ಪುರಾಣದ ತಿಳುವಳಿಕೆ ಅಗತ್ಯವಿದೆ. ಈ ಪುರಾಣದ ನೆಲೆಯಿಂದಲೇ ಅವರ ಚಿತ್ರಗಳಲ್ಲಿ ಸಾದೃಶ್ಯವು ಕಂಡುಬರುತ್ತದೆ.

೬. **ವರ್ಣಿಕಾ ಭಂಗ:** ವರ್ಣಿಕಾ ಭಂಗದಲ್ಲಿ ಬಣ್ಣಗಳ ಬಳಕೆ ಮತ್ತು ಸಮ್ಮಿಶ್ರಣಗಳ ಬಗ್ಗೆ ಹೇಳಲಾಗಿದೆ. ಬಣ್ಣಗಳ ಪ್ರಯೋಗದ ರೀತಿ ಮತ್ತು ಕುಂಚಗಳ ಪ್ರಯೋಗದ ರೀತಿ ತಿಳಿಸಲಾಗುತ್ತದೆ. ಯಾವ ಚಿತ್ರಕ್ಕಾಗಿ ಯಾವ ಬಣ್ಣವನ್ನು ಬಳಸಬೇಕು ಎಂಬುವುದು ಪಿಥೋರಾದ ಕಲಾವಿದರು ತಮ್ಮದೇ ಆದ ಶೈಲಿಯನ್ನು ಬಳಸಿದ್ದಾರೆ. ಬಣ್ಣಗಳ ವೈಧಾನಿಕತೆಯಿಂದಲೇ ಚಿತ್ರಗಳ ವಿಭಿನ್ನತೆಯನ್ನು ಕಂಡುಕೊಳ್ಳಲು ಸಾಧ್ಯ.

ಬಣ್ಣಗಳ ತಯಾರಿಕೆ ಪಿಥೋರಾ ಚಿತ್ರಗಳ ಲೇಪನಕ್ಕೆ ಮಹತ್ವದ್ದಾಗಿದೆ. ಆದ್ದರಿಂದಲೇ ಈ ಬುಡಕಟ್ಟುಗಳು ಬಣ್ಣ ತಯಾರಿಕೆ, ಲೇಪನ ಮತ್ತು ಕುಂಚಗಳ ತಯಾರಿಕೆ ಮತ್ತು ಬಳಕೆಯನ್ನು ತಮ್ಮ ಕೈಚಳಕದಲ್ಲಿ ತೋರಿಸಿದ್ದಾರೆ. ಸೂರ್ಯನನ್ನು ದುಂಡಾಗಿ ಪೂರ್ತಿ ತೋರಿಸಿದರೆ, ಚಂದ್ರನನ್ನು ಅರ್ಧವಾಗಿ ತೋರಿಸಿದ್ದಾರೆ. ಸೂರ್ಯನ ಸುತ್ತಲೂ ಕಿರಣಗಳಿದ್ದರೆ, ಚಂದ್ರನಿಗೆ ಕಿರಣಗಳನ್ನು ತೋರಿಸಿಲ್ಲ. ಈ ಹಿನ್ನೆಲೆಯಲ್ಲಿ ಗಮನಿಸಿದರೆ, ಬಣ್ಣದ ಉಪಯೋಗದಲ್ಲಿ ಅವರಿಗೆ ತಿಳುವಳಿಕೆಯಿತ್ತೆಂಬುವುದು ಕಂಡು ಬರುತ್ತದೆ.

ಶಿವರಾಮ ಕಾರಂತರು ಈ ಆರು ಅಂಶಗಳನ್ನು ಕುರಿತು ಹೀಗೆ ಹೇಳುತ್ತಾರೆ "ಚಿತ್ರಿಸತಕ್ಕ ವಸ್ತುವಿಗೆ ಏನಾದರೊಂದು ರೂಪವು ಬೇಕೇ ಬೇಕು. ಅವರ ಆಕಾರ, ರೂಪ ವ್ಯತ್ಯಾಸಗಳನ್ನು ನಿರ್ಧರಿಸುವ ಕಾರ್ಯಕ್ಕೆ ರೂಪಭೇದವೆಂದು ಹೆಸರು. ಎರಡನೆಯದು ಪ್ರಮಾಣ– ಆ ಚಿತ್ರದಲ್ಲಿ ಭಿನ್ನ ಭಿನ್ನ ಅವಯವಗಳನ್ನು ಯಾವ ಅಳತೆಯಲ್ಲಿ ಬಿಡಿಸಬೇಕೆಂಬ ಶಾಸ್ತ್ರವದು. ಶಿಲ್ಪದಲ್ಲಾದರೂ ಕೆತ್ತತಕ್ಕ ಮೂರ್ತಿಗಳು ಯಾವ ಯಾವ ಪ್ರಮಾಣದಲ್ಲಿರಬೇಕೆಂಬ ಒಂದು ಕಟ್ಟು ನಿಟ್ಟಿನ ದಾರಿಯಿದೆ. ಈ ರೀತಿಯಲ್ಲಿ ಸಿದ್ಧಾಂತಗೊಳಿಸಲ್ಪಟ್ಟ ಪ್ರಮಾಣಗಳನ್ನೇ ಎಲ್ಲರೂ ಉಪಯೋಗಿಸಿದಲ್ಲಿ, ಅವುಗಳನ್ನು ತಿಳಿಯಲು ಸುಲಭವಾಗಿ ಆಗುವುದಲ್ಲದೇ, ಕಲಾಕುಶಲರು ಸಹ ಹಾದಿ ಬಿಟ್ಟು ತೀರ ದೂರಾಗುವ ಭೀತಿಯಿಲ್ಲ. ಇನ್ನು ಭಾವ–ಸಂತೋಷ, ಸಂತಾಪ, ಕೋಪ, ಕ್ರೌರ್ಯ ಇವೇ ಮೊದಲಾದ ಮನೋವಿಕಾರಗಳನ್ನು ಚಿತ್ರಿಸುವ ಬಗೆ. ಇದಾದ ಬಳಿಕ ಲಾವಣ್ಯ ಯೋಜನೆ–ಬಣ್ಣ, ಉಡಿಗೆ ತೊಡಿಗೆ, ಇವುಗಳ ಸಹಾಯದಿಂದ ಚಿತ್ರವು ಮತ್ತಷ್ಟು ಸುಂದರವಾಗುವಂತೆ ಮಾಡುವ ಶಾಸ್ತ್ರವು ಸಾದೃಶ್ಯ–ಯಾವ ಬಗೆಯಲ್ಲಿ ಮನ ಮಾಡಿರುವನೋ ಅದನ್ನೇ ಮೂಡಿಸುವ ಯತ್ನ. ಇನ್ನು ಆರನೆಯದೆನಿಸಿದ ವರ್ಣಿಕಾ ಭಂಗದಲ್ಲಿ ಬರುವ ವಿಷಯವೆಂದರೆ ಚಿತ್ರಕಾರನು, ಕುಂಚ, ಬಣ್ಣ ಮೊದಲಾದವುಗಳನ್ನು ಸಿದ್ಧಮಾಡುವುದು".[6]

ಈ ಆರು ಅಂಗಗಳು ಚಿತ್ರದ ಸೌಂದರ್ಯವನ್ನು ಹೆಚ್ಚಿಸಿ ಸಹೃದಯನಿಗೆ ಸೌಂದರ್ಯ ಪ್ರಜ್ಞೆಯನ್ನು ಮೂಡಿಸಲು ಸಹಕಾರಿಯಾಗಬಲ್ಲವು. ಲೋಕದ ವಸ್ತುಗಳನ್ನು ಚಿತ್ರಕಾರನು ಸೌಂದರ್ಯದ ಪ್ರವೇಶಕ್ಕಾಗಿ ತದ್ರೂಪಿತನಾಗಿ ಚಿತ್ರಿಸುವ ಯತ್ನವನ್ನು ಮಾಡುವುದಿಲ್ಲ. ಕಲಾವಿದನು ಸೃಷ್ಟಿ ಕ್ರಿಯೆಯಲ್ಲಿ ಯಾವ ಯಾವ ಹಂತಗಳನ್ನು ದಾಟಿಕೊಂಡು ಹೋಗಿದ್ದಾನೋ ಆ ಎಲ್ಲ ಹಂತಗಳನ್ನು ಚಿತ್ರನೋಡುಗನು ಸ್ವಲ್ಪ ಮಟ್ಟಿಗಾದರೂ ಕ್ರಮಿಸಿದರೆ ಮಾತ್ರವೇ ಸೌಂದರ್ಯಾನುಭೂತಿಯ ದರ್ಶನವಾಗುವುದು. 'ತನ್ಮಯ ಭಾವ' ಮತ್ತು 'ತಾದಾತ್ಮ್ಯ ಭಾವ' ಎರಡೂ ಕಲಾವಿದ ಮತ್ತು ಸಹೃದಯದಲ್ಲಿದ್ದರೆ ಸೌಂದರ್ಯವೂ ಅವರಲ್ಲಿ ಅಡಗಿರುತ್ತದೆ. ಭಾರತೀಯ ಚಿತ್ರಕಲೆಯ ಪರಂಪರೆಯಲ್ಲಿ ಸೌಂದರ್ಯವು ಬಹುಮುಖ್ಯವಾದದ್ದು. ಏಕೆಂದರೆ ಸೌಂದರ್ಯವನ್ನು ಶಿಷ್ಟ ಪರಂಪರೆ ಮತ್ತು ಪರಿಶಿಷ್ಟ ಪರಂಪರೆಯ ಚಿತ್ರಗಳೆರಡೂ ತಮ್ಮದೇ ಆದ ರೀತಿಯಲ್ಲಿ ದೇಸೀಯ ಸೌಂದರ್ಯವನ್ನು ಗಮನಿಸುತ್ತವೆ. ಸೌಂದರ್ಯಾನುಭವ ಎನ್ನುವುದು ಬಹುಮಟ್ಟಿಗೆ ಚಿತ್ರಗಳಲ್ಲಿ ಅಡಗಿಬಿಟ್ಟಿರುತ್ತದೆ. ನೋಡುವ ದೃಷ್ಟಿಕೋನ ಸಹೃದಯ ಮನಸ್ಸಿಗೆ ಇರಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಪಿಥೋರಾವನ್ನು ಸೌಂದರ್ಯನುಭವದ ನೆಲೆಯಲ್ಲಿ ನೋಡುವ ಮನಸ್ಸುಗಳು ಬೇಕಾಗಿದೆ.

ಬಿಲ್‌ರು ಸಹಜವಾಗಿ ಬಿಡಿಸುವ ಚಿತ್ರಗಳಲ್ಲಿ ಸೌಂದರ್ಯವನ್ನು ಹುಡುಕುವುದು ಹೇಗೆಂದು ಶಿಷ್ಟ ಪರಂಪರೆಯ ಚಿತ್ರಕಾರರಿಗೆ ಅನಿಸಬಹುದು. ಬಿಲ್‌ರ ಸಾಂಸ್ಕೃತಿಕ ಲೋಕವೇ ಬೇರೆ, ಶಿಷ್ಟ ಚಿತ್ರಕಾರರ ಸಾಂಸ್ಕೃತಿಕ ಲೋಕವೇ ಬೇರೆ. ಹಾಗಾಗಿ ಎರಡು ವಿಭಿನ್ನ ಪರಂಪರೆಗಳ ಸೌಂದರ್ಯ ಪ್ರಜ್ಞೆ ಅಥವಾ ಸೌಂದರ್ಯ ಮೀಮಾಂಸೆ ಏಕಕೇಂದ್ರಿತವಾದ ನೆಲೆಯಲ್ಲಿ ಇರಲು ಸಾಧ್ಯವಿಲ್ಲ. ಎರಡೂ ಭಿನ್ನ ಮನಸ್ಸಿನ ಸೌಂದರ್ಯ ಕಣ್ಣಿನ ಸೆರೆಯಾಗಿದೆ. ಎರಡೂ ಪರಂಪರೆಗಳು ತಮಗೆ 'ಸುಂದರ' ಎಂದು ಕಂಡದ್ದನ್ನು ಸ್ಮರಣೆಯಿಂದ ಚಿತ್ರಿಸಲು ತೊಡಗುವುದುಂಟು. ಆದರೆ ಸೌಂದರ್ಯ ಬಗೆಗೆ ಮಾನವನಿಗೆ ಸಹಜವಾಗಿ ಬಂದಿದ್ದರೂ ಸೌಂದರ್ಯದ ಕಲ್ಪನೆ ಎಲ್ಲರಿಗೂ ಒಂದೇ ಆಗಿರುವುದಿಲ್ಲ. ಈ ಹಿನ್ನೆಲೆಯಲ್ಲಿಯೇ ಎಚ್, ತಿಪ್ಪೇರುದ್ರಸ್ವಾಮಿ ಅವರು 'ಒಬ್ಬನಿಗೆ ಸುಂದರವಾಗಿ ಕಂಡದ್ದು ಇನ್ನೊಬ್ಬನಿಗೆ ಅದೇ ಮಟ್ಟದಲ್ಲಿ ಸುಂದರವಾಗಿ ಕಾಣದೇ ಇರಬಹುದು. ಸಮಾನವಾದ ಕೆಲವು ಅಂಶಗಳು ಇರಬಹುದಾದರೂ ಈ ಸೌಂದರ್ಯ ಸೃಷ್ಟಿ ವ್ಯಕ್ತಿಯಿಂದ ವ್ಯಕ್ತಿಗೆ, ದೇಶದಿಂದ ದೇಶಕ್ಕೆ, ಜನಾಂಗದಿಂದ ಜನಾಂಗಕ್ಕೆ ಬದಲಾಗುತ್ತಾ ಹೋಗುತ್ತದೆ.'[೧೦] ಎಂದು ಹೇಳುತ್ತಾರೆ. ಅವರ ಈ ಮಾತನ್ನು ಶಿಷ್ಟ ಮತ್ತು ಪರಿಶಿಷ್ಟ ಚಿತ್ರಕಲೆಗಳಿಗೆ ಅನ್ವಯ ಮಾಡಿಕೊಳ್ಳಬಹುದು. ಚಿತ್ರಕಲೆಯಲ್ಲಿ ಸೌಂದರ್ಯ ಪ್ರಜ್ಞೆ ವೈಯಕ್ತಿಕವೂ ಹೌದು, ಜನಾಂಗಿಕವೂ ಹೌದು. ಹಾಗಾಗಿ ಬಿಲ್‌ರಲ್ಲಿ ಸೌಂದರ್ಯ ಪ್ರಜ್ಞೆ ಭಾರತೀಯ ಸೌಂದರ್ಯ ಪ್ರಜ್ಞೆಗಿಂತ ಭಿನ್ನ ಮತ್ತು ಸಮಾನವಾದ ಕೆಲ ಲಕ್ಷಣಗಳಿವೆ.

**ಕೊನೆ ಟಿಪ್ಪಣೆ**

೧. Callingwood, Principles of Art. P. No. 40

೨. I. A Richards, Principles of Literary Criticism, P. No. 16

೩. W. Knight, Philosophy of the Beautiful. Vol. 1. P. No. 60

೪. Bosanquet, History of the Aesthetics. P. No. 179

೫. ಜಿ.ಎಸ್.ಶಿವರುದ್ರಪ್ಪ, 'ಕಾವ್ಯಾರ್ಥ ಚಿಂತನೆ,' ಪು. ೨೦೫

೬. ಬಿ. ಮಾಲಿನಿ ಮಲ್ಯ(ಸಂ), 'ಶಿವರಾಮ ಕಾರಂತರ ಸಾಹಿತ್ಯ ಶ್ರೇಣಿ,' ಸಂಪುಟ ೩೦, ಪು. ೨೫೧

೭. ಎಸ್. ಸಿ. ಪಾಟೀಲ, 'ಕರ್ನಾಟಕದ ಜನಪದ ಚಿತ್ರಕಲೆ,' ಪು. ೬೭

೮. ಮಮತಾ ಚತುರ್ವೇದಿ, (ಮೂ. ಹಿಂದಿ) 'ಸೌಂದರ್ಯ ಶಾಸ್ತ್ರ–ಕಲಾತ್ಮಕ ಚಿಂತನೆ,' ಕಾಶೀನಾಥ ಅಂಬಲಿಗೆ (ಕನ್ನಡಕ್ಕೆ), ಪು. ೨೫೧

೯. ಮಾಲಿನಿ ಮಲ್ಯ(ಸಂ), 'ಶಿವರಾಮ ಕಾರಂತರ ಸಾಹಿತ್ಯ ಶ್ರೇಣಿ,' ಸಂ–೩೦, ಪು. ೨೬೩

೧೦. ಎಚ್. ತಿಪ್ಪೇರುದ್ರಸ್ವಾಮಿ, 'ತೌಲನಿಕ ಕಾವ್ಯ ಮೀಮಾಂಸೆ,' ಪು. ೧೧೫

# ಅಧ್ಯಾಯ ೭
# ಸಮಾರೋಪ ಮತ್ತು ಫಲಿತಗಳು

## ೭.೧ ಸಮಾರೋಪ

ಪ್ರಸ್ತುತ ಅಧ್ಯಯನವು ಒಟ್ಟು ಮೂರು ಬಗೆಯ ಚಿತ್ರಕಲೆಯ ವಿನ್ಯಾಸವನ್ನು ಕುರಿತದ್ದಾಗಿದೆ. ಒಂದು, ಆದಿಮಾನವನ ಮೊದಲ ಘಟ್ಟದ ಚಿತ್ರಕಲೆಯನ್ನು ಅಧ್ಯಯನ ಮಾಡಲಾಗಿದೆ. ಎರಡು, ಜಾನಪದ ಚಿತ್ರಕಲೆಯ ಒಂದು ಪ್ರಕಾರವಾದ ಬೆಳದಿಂಗಳ ಹಬ್ಬದ ಆಚರಣೆಯ ಚಿತ್ರಗಳನ್ನು ಕುರಿತದ್ದು. ಮೂರು, ಬುಡಕಟ್ಟು ಜನರ ಪಿಥೋರಾ ಚಿತ್ರಕಲೆಯನ್ನು ಕುರಿತದ್ದು. ಈ ಮೂರನ್ನು ಈ ಅಧ್ಯಯನದಲ್ಲಿ ತುಂಬ ವಿಭಿನ್ನವಾಗಿ ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

ಆದಿಮಾನವನಿಗೆ ಈ ಲೋಕವಸ್ತುಗಳನ್ನು ನಿರಂತರವಾಗಿ ನೋಡಿದ್ದರ ಪರಿಣಾಮವಾಗಿ ಆಂತರ್ಯದಲ್ಲಿ ಅವು ಅಡಗಿದ್ದವು. ಅವನ್ನು ಅಭಿವ್ಯಕ್ತಿಸಿಕೊಂಡದ್ದರ ಪರಿಣಾಮವಾಗಿಯೇ ಅವು ಚಿತ್ರಗಳಾಗಿ ಅನೇಕ ಬಂಡೆ, ಗವಿಗಳಲ್ಲಿ ಇಂದಿಗೂ ಲಭ್ಯವಿದೆ. ಈ ದೃಷ್ಟಿಯಿಂದ ಜಗತ್ತಿನ ಚಿತ್ರಕಲೆಗೆ ಆದಿಮಾನವನ ಮೊದಲ ಕೊಡುಗೆಯಿದು. ಇಂತಹ ಚಿತ್ರಕಲೆಯನ್ನು ಅವನು ಒಂದು ಕಾರಣಕ್ಕಾಗಿಯೇ ರಚಿಸಿರಬಹುದು ಅಥವಾ ಬೇರೆ ಬೇರೆ ಅನೇಕ ಕಾರಣಗಳಿಗೆ ರಚಿಸಿರಬಹುದು. ವಿರಾಮಕ್ಕಾಗಿ, ಬೇಟೆಯನ್ನು ಗೆಲ್ಲಲು, ನಂಬಿಕೆಯ ಕಾರಣಕ್ಕಾಗಿ ಹೀಗೆ ಭಿನ್ನ ನೆಲೆಯಲ್ಲಿ ಈ ಅಧ್ಯಯನಕ್ಕೆ ತಾತ್ವಿಕ ಚೌಕಟ್ಟನ್ನು ಹಾಕಿಕೊಳ್ಳಲಾಗಿದೆ. ಅವನ ಚಿತ್ರಕಲೆಯನ್ನು ಪ್ರಾಯೋಜಕ ಮತ್ತು ಮನೋರಂಜನಾತ್ಮಕ ನೆಲೆಯಿಂದ ಈಗ ನೋಡಬಹುದು. ಆದರೆ ಚಿತ್ರಕಲೆಯ ಪ್ರಾಥಮಿಕ ಹಂತದಲ್ಲಿ ಅವನ ಚಿತ್ರಗಳು ಕಲಿಕೆಯ ಮಟ್ಟದವಾಗಿದ್ದವು ಎಂಬುದನ್ನು ಈ ಅಧ್ಯಯನವು ಸಾಬೀತುಪಡಿಸಲು ಪ್ರಯತ್ನಿಸಿದೆ. ಆದಿಮಾನವನು ಸೂಕ್ತವಾದ ಬಾಹ್ಯಪ್ರೇರಣೆಗೆ ಒಳಗಾಗಿ ತಾನು ಕಂಡುಕೊಂಡ ಲೋಕದ ವಸ್ತುಗಳ ಅಭಿವ್ಯಕ್ತಿಗಾಗಿ ಚಿತ್ರಕಲೆಯನ್ನು ಮಾಧ್ಯಮವಾಗಿ ರೂಪಿಸಿಕೊಂಡನು ಎಂಬುದನ್ನು ಪರಿಶೀಲಿಸಲಾಯಿತು. ಅದೇ ವೇಳೆಯಲ್ಲಿ ಮಹಿಳೆಯು ತನ್ನ ಬಿಡುವಿನ ಸಮಯದಲ್ಲಿ ಚಿತ್ರಗಳನ್ನು ಬರೆದಿರಬಹುದೆಂಬ ಪ್ರಾಕ್‌ಕಲ್ಪನೆಯ ಮೂಲಕ ಅಧ್ಯಯನ ಇನ್ನೊಂದು ಮಗ್ಗಲಿಗೆ ಹೊರಳಿಸುವ ಒಂದು ಸಣ್ಣ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಪ್ರಾಚೀನ ಮಾನವನ ಚಿತ್ರಗಳೇ ಜನಪದರ ಚಿತ್ರಗಳಿಗೆ ಮೂಲವೆಂದರೆ ತಪ್ಪಾಗಲಾರದು. ಆದಿಮಾನವನು ರೇಖೆಗಳ ಮೂಲಕ ಬಿಡಿಸಿದ ಗವಿಚಿತ್ರಗಳಲ್ಲಿ ಕಂಡುಬರುವ ಕೆಲವು ಸಾಂಕೇತಿಕ ಚಿತ್ರಗಳನ್ನು ಜನಪದರು ಮುಂದುವರೆಸಿಕೊಂಡು ಬಂದಿದ್ದಾರೆಂಬುದನ್ನು ಊಹಿಸಲು

ಸಾಕ್ಷಾಧಾರಗಳು ದೊರೆತವು. ಉದಾಹರಣೆಗೆ ಸೂರ್ಯ-ಚಂದ್ರ, ರಂಗೋಲಿ ಮತ್ತು ಹಸೆ ಚಿತ್ರಗಳನ್ನು ಗವಿಚಿತ್ರಗಳಲ್ಲಿ ಕಾಣಬಹುದು. ಇವುಗಳಿಂದ ಪ್ರಭಾವಿತರಾದಂತೆಯೇ ಜನಪದರು ಸಹ ತಮ್ಮ ಬದುಕಿನಲ್ಲಿ ಆ ತರಹದ ಚಿತ್ರಗಳನ್ನು ಬಿಡಿಸಿರುವುದನ್ನು ಈ ಅಧ್ಯಯನದಲ್ಲಿ ಗಮನಿಸಲಾಗಿದೆ. ಅಂದರೆ ಆದಿಮಾನವನು ನಾಗರಿಕತೆಯ ಮೊದಲ ಹೆಜ್ಜೆಗಳನ್ನು ಶುರುಮಾಡಿ ಬೆಳವಣಿಗೆ ಹೊಂದಿದಂತೆಲ್ಲ ಚಿತ್ರಕಲೆಯಲ್ಲಿ ನಾಜೂಕು ಆರಂಭವಾಯಿತು. ಅವನು ಪ್ರಾಕೃತಿಕ ಭಯದಿಂದಾಗಿ ಕೆಲವು ನಂಬಿಕೆಗಳನ್ನು ಬೆಳೆಸಿದನು. ಆ ನಂಬಿಕೆಯ ಭಾಗವಾಗಿಯೂ ಚಿತ್ರಕಲೆಯು ಮೂಡಿರಬಹುದೆಂಬ ತೀರ್ಮಾನಕ್ಕೂ ಇಲ್ಲಿ ಬರಲಾಗಿದೆ. ಇಂತಹ ನಂಬಿಕೆಗಳನ್ನು ನಂತರದಲ್ಲಿ ಜನಪದರು ಮುಂದುವರೆಸಿದರು. ಜನಪದರ ಮೂಲ ಪ್ರತಿನಿಧಿಯಾಗಿಯೇ ಆದಿಮಾನವನು ಇದ್ದನು. ಅವನು ಚಿತ್ರಕಲೆಗೆ ಬಳಸಿರುವ ಸಲಕರಣೆಗಳು ವೈಜ್ಞಾನಿಕತೆ ಮತ್ತು ತಾಂತ್ರಿಕತೆಯ ಮೊದಲ ಕುರುಹುಗಳೆಂದರೆ ತಪ್ಪಿಲ್ಲವೆಂಬುದನ್ನು ಈ ಆಧ್ಯಯನವು ಕಂಡುಕೊಂಡಿದೆ.

ಆಧುನಿಕ ಚಿತ್ರಕಲೆಗಿಂತ ಭಿನ್ನವಾದ ಸ್ವರೂಪವನ್ನು ಪ್ರಾಗೈತಿಹಾಸಿಕ ಚಿತ್ರಕಲೆ ಹೊಂದಿದೆ. ಕರ್ನಾಟಕದಲ್ಲಿ ಇಂತಹ ಪ್ರಾಚೀನ ಚಿತ್ರಕಲೆಯ ವಿವರದ ಕೆಲವು ನೆಲೆಗಳು ದೊರೆಯುತ್ತವೆ. ಮಾನವ ಮೊದಲ ಪಾಠ ಚಿತ್ರಕಲೆ. ಭಾಷಾಭಿವ್ಯಕ್ತಿಯ ಪೂರ್ವದಲ್ಲಿ ಚಿತ್ರಕಲೆ ಭಾಷಾ ಮಾಧ್ಯಮವಾಗಿದೆ. ಲಿಪಿ ಪೂರ್ವದಲ್ಲಿ ಲಿಪಿಯ ಕೆಲಸವನ್ನು ನಿರ್ವಹಿಸಿದೆ. ಇಂತಹ ನೆಲೆಗಳು ಕೊಪ್ಪಳ-ಹಂಪಿ ಪ್ರದೇಶದಲ್ಲಿ ಹೆಚ್ಚಿವೆ. ಈ ಪ್ರದೇಶದಲ್ಲಿ ಕಂಡುಬರುವ ಗವಿಚಿತ್ರಗಳ ರೂಪ ಮತ್ತು ವಿನ್ಯಾಸವನ್ನು ವಿಶ್ಲೇಷಿಸಿ ಆದಿಮಾನವ ಚಿತ್ರಕಲೆಯ ಸ್ವರೂಪವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

ಜನಪದರು ಅನೇಕ ಆಚರಣೆಗಳನ್ನು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಆಚರಿಸುತ್ತಾ ಬಂದಿದ್ದಾರೆ. ಈ ಆಚರಣೆಗಳಿಂದಾಗಿ ಪ್ರಾಚೀನ ಕಾಲದಿಂದಲೂ ಜನಪದ ಕಲೆಗಳು ಕರ್ನಾಟಕದಲ್ಲಿ ಮೈದಾಳಿವೆ. ಅಂತಹ ಆಚರಣೆಗಳಲ್ಲಿ 'ಬೆಳದಿಂಗಳ ಹಬ್ಬ'ವು ಒಂದು. ಈ ಹಬ್ಬವು ಚಿತ್ರಗಳ ಮೂಲಕ ನಡೆಯುವ ಹಬ್ಬವಾಗಿದೆ. ಈ ಹಬ್ಬವನ್ನು ಉತ್ತರ ಕರ್ನಾಟಕದ ಜನರು ತಲೆತಲಾಂತರದಿಂದ ಆಚರಿಸುತ್ತಾ ಬಂದಿದ್ದಾರೆ. ಈ ಹಬ್ಬದ ಹಿನ್ನೆಲೆಯಲ್ಲಿ ಚಿತ್ರಕಲೆಯು ಯಾವ ರೀತಿಯಲ್ಲಿ ಜನರ ಬದುಕಿನೊಳಗೆ ಹಾಸುಹೊಕ್ಕಾಗಿದೆ ಎಂಬುದನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.

ಬೆಳದಿಂಗಳ ಹಬ್ಬದ ಆಚರಣೆಯ ಸ್ವರೂಪ ಮತ್ತು ಚಾರಿತ್ರಿಕತೆಯ ನೆಲೆಯಲ್ಲಿ ಅದರ ವಿನ್ಯಾಸಗಳನ್ನು ಅಧ್ಯಯನದಲ್ಲಿ ಮಾಡಲಾಗಿದೆ. ಕರ್ನಾಟಕದ ಬೇರೆ ಬೇರೆ ಭಾಗದಲ್ಲಿ ಇದರ ಆಚರಣೆಯು ಯಾವ ರೀತಿಯಿದೆ ಎಂಬುದನ್ನು ತಿಳಿದುಕೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ.

ಚಿತ್ರಕಲೆಯ ಬಗೆಗೆ ಕನ್ನಡ ಸಾಹಿತ್ಯದಲ್ಲಿರುವ ಉಲ್ಲೇಖಗಳನ್ನು ಹುಡುಕಾಡುವ ಪ್ರಯತ್ನವನ್ನು ಮಾಡಲಾಗಿದೆ. ಕನ್ನಡದ ಕವಿಗಳು ಜೀವನ ಸೌಂದರ್ಯದ ಅನೇಕ ಮುಖಗಳಲ್ಲಿ ಚಿತ್ರಕಲೆಯ ಬಗ್ಗೆ ತಮ್ಮ ಕಾವ್ಯಗಳಲ್ಲಿ ಹಿಡಿದಿದ್ದಾರೆ. ಅವರು ಚಿತ್ರಕಲೆಯನ್ನು 'ಸಕಳಾಳಾಪ

ಕಳಾಪ'ದಿಂದ ಹಿಡಿದು ಕಳ್ಳರು, ಜನರನ್ನು ವಂಚಿಸಲು ಬಳಸುವ ಚಿತ್ರಮಾಧ್ಯಮದವರೆಗೆ ಇದರ ಉಪಯೋಗವನ್ನು ಗಮನಿಸಿದಂತೆ ಕಾವ್ಯಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಕನ್ನಡದ ಕವಿಗಳು ಚಿತ್ರಕಲೆಯನ್ನು ಕಥಾತಾಂತ್ರಿಕವಾಗಿ ಬಳಸಿರುವುದನ್ನು ಇಲ್ಲಿ ಗಮನಿಸಿದೆ. 'ಚೀರಘಟ್ಟ' ಎಂಬ ಚಿತ್ರಕಾರನ ಉಲ್ಲೇಖವನ್ನು ಆಧುನಿಕ ಕಾಲದವರೆಗೂ ಕನ್ನಡ ಸಾಹಿತಿಗಳು ಉಲ್ಲೇಖಿಸಿ ವಿಮರ್ಶಿಸುತ್ತಾ ಬಂದಿದ್ದಾರೆ. ಈ ಎಲ್ಲಾ ಅಂಶಗಳನ್ನಿಟ್ಟುಕೊಂಡು ಚಿತ್ರಕಲೆಯನ್ನು ಚಾರಿತ್ರಿಕವಾಗಿ ಇಲ್ಲಿ ಅಧ್ಯಯನ ಮಾಡಿದೆ.

ಈ ಅಧ್ಯಯನದಲ್ಲಿ ಪ್ರಾಚೀನ ಚಿತ್ರಕಲೆಗಳ ಜೊತೆಗೆ ಉತ್ತರಭಾರತದ ಮಧ್ಯಕ್ಕಿರುವ ಬಿಲ್ ಮತ್ತು ರಾಥವಾ ಬುಡಕಟ್ಟುಗಳ ಪ್ರಮುಖವಾದ ಚಿತ್ರಕಲೆಯೊಂದನ್ನು ಪರಿಚಯಿಸಿರುವುದು ಮತ್ತು ವಿಶ್ಲೇಷಿಸಿರುವುದನ್ನು ಕಾಣಬಹುದು. ಈ ಅಧ್ಯಯನದಲ್ಲಿ ಪಿಥೋರಾ ಚಿತ್ರಕಲೆಯನ್ನೇ ಕೇಂದ್ರವಾಗಿಟ್ಟುಕೊಳ್ಳಲಾಗಿದೆ. ಏಕೆಂದರೆ, ಈ ಚಿತ್ರಕಲೆಯು ಈ ಬುಡಕಟ್ಟು ಜನರ ಸೃಜನಶೀಲತೆ ಮತ್ತು ಕ್ರಿಯಾಶೀಲತೆಯ ಶಕ್ತಿಯಿಂದ ಉದಯಿಸಿದುದಾಗಿದೆ. ಅಲ್ಲದೆ ಪ್ರಸ್ತುತದಲ್ಲಿ ಈ ಬುಡಕಟ್ಟುಗಳು ಸಂಪ್ರದಾಯ ಮತ್ತು ಆಧುನಿಕತೆ ಎರಡನ್ನೂ ತಮ್ಮ ಚಿತ್ರಕಲೆಯಲ್ಲಿ ಬಿತ್ತರಿಸುತ್ತಿವೆಯೆಂಬ ಕಾರಣಕ್ಕೆ. ಈ ಮೂಲಕ ಈ ಅಧ್ಯಯನವು ತುಂಬಾ ಮಹತ್ವವುಳ್ಳದ್ದಾಗಿದೆ ಎಂಬುವುದನ್ನು ಸಾಬೀತು ಪಡಿಸುತ್ತದೆ.

ಪಿಥೋರಾವು ಸಂಪ್ರದಾಯಬದ್ಧವಾದ ಆಚರಣೆಯಾಗಿರುವುದರಿಂದ ಇದಕ್ಕೆ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಗಳು ಮಾರಕವಾಗಬಹುದಿತ್ತು. ಭಾರತದ ಎಷ್ಟೋ ಕಲೆಗಳು ಇವಕ್ಕೆ ನಲುಗಿ ಹೋಗಿವೆ. ಆದರೆ ಪಿಥೋರಾ ಚಿತ್ರಕಲೆಯು ನಾಶವಾಗುವ ಬದಲು ಹೊಸ ವಿನ್ಯಾಸದೊಂದಿಗೆ ಸೃಜನಾತ್ಮಕವಾಗಿ ಬೆಳವಣಿಗೆಯನ್ನು ಹೊಂದುತ್ತಿದೆ. ಇದಕ್ಕೆ ಈ ಬುಡಕಟ್ಟು ಮಹಿಳೆ ಮತ್ತು ಪುರುಷ ಚಿತ್ರಕಾರರು ಹೊಸ ವಿನ್ಯಾಸವನ್ನು ಕೊಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಕರ್ನಾಟಕದ ಎಷ್ಟೋ ಜಾನಪದ ಚಿತ್ರಕಲೆಯ ಪ್ರಕಾರಗಳು ಸಾಂಪ್ರದಾಯಿಕ ಆಯಾಮವನ್ನು ಕಳೆದುಕೊಂಡಿವೆ. ಆಧುನೀಕರಣಕ್ಕೆ ಒಳಗಾಗಿ ಮೂಲದಲ್ಲಿ ಕೈಯಿಂದ ಬಿಡಿಸುತ್ತಿದ್ದ ಕಲೆಗಳು ಈಗ ಅಚ್ಚುಗಳಲ್ಲಿ ಬಿಡಿಸಲಾರಂಭಿಸಿವೆ. ಆದರೆ ಬಿಲ್‌ರು ಇಂದಿಗೂ ಪಿಥೋರಾವನ್ನು ತಮ್ಮ ಮೂಲ ಊರುಗಳಲ್ಲಿ ಸಾಂಪ್ರದಾಯಿಕವಾಗಿ ಆಚರಿಸುತ್ತಾರೆ. ಜೊತೆಗೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಚಿತ್ರಕಲೆಯನ್ನು ಬೆಳೆಸುತ್ತಿರುವ ಹೊಸ ತಲೆಮಾರಿನ ಚಿತ್ರಕಾರರು ಇದ್ದಾರೆ. ಈ ದೃಷ್ಟಿಯಿಂದಾಗಿ ಕನ್ನಡಕ್ಕೆ ಹೊಸ ಚಿತ್ರಕಲೆಯೊಂದನ್ನು ಪರಿಚಯಿಸುತ್ತಿದೆ ಎಂಬ ಮನೋಭಾವ ಈ ಅಧ್ಯಯನಕ್ಕಿದೆ.

ಪಿಥೋರಾವು ಬಿಲ್ ಮತ್ತು ರಾಥವಾ ಬುಡಕಟ್ಟಿನ ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಿನ್ನೆಲೆಯಿಂದ ನಡೆಯುವಂತಹದ್ದು. ಹಾಗಾಗಿ ಈ ಬುಡಕಟ್ಟಿನ ಜನರು ಸಾಂಸ್ಕೃತಿಕ ಅನನ್ಯತೆಯೊಂದಿಗೆ ಹೇಗೆ ಪಿಥೋರಾವನ್ನು ನಡೆಸಿಕೊಂಡು ಬರುತ್ತಿದ್ದಾರೆಂಬುವುದನ್ನು ಸಮಗ್ರವಾಗಿ ಅಧ್ಯಯನ ಮಾಡಿದೆ.

ಬಿಲ್ ಮತ್ತು ರಾಥವಾ ಬುಡಕ್ಕಟ್ಟು ಜನರು ಆಧುನಿಕವಾಗಿ ತಮ್ಮ ಚಿತ್ರಕಲೆಗೆ ಸೃಜನಶೀಲತೆಯ ಸ್ಪರ್ಶವನ್ನು ನೀಡಿದ್ದಾರೆ. ಇದನ್ನು ಪಿಥೋರಾ ಚಿತ್ರಕಲೆಯ ರೂಪಾಂತರಗಳೆಂದು ಅಧ್ಯಯನ ಮಾಡಲಾಗಿದೆ.

ಒಟ್ಟಾರೆಯಾಗಿ 'ಕನ್ನಡ ಪ್ರಾಚೀನ ಚಿತ್ರಕಲೆ ಮತ್ತು ಪಿಥೋರಾ' ಎಂಬ ಅಧ್ಯಯನವು ಸಾಂಸ್ಕೃತಿಕವಾಗಿ ತನ್ನದೆ ತಾತ್ವಿಕ ಸ್ವರೂಪವನ್ನು ಒಳಗೊಂಡಿದೆ. ಪಿಥೋರಾ ಚಿತ್ರಕಲೆಯು ಬುಡಕಟ್ಟು ಜನರ ಅಸ್ಮಿತೆಯನ್ನು ಅಭಿವ್ಯಕ್ತಿಸುತ್ತದೆ. ಅವರ ಸಮಾಜೋ-ಸಾಂಸ್ಕೃತಿಕ ಬದುಕಿನ ಸ್ಥಿತ್ಯಂತರ ಮತ್ತು ಪ್ರೀತಿಯನ್ನು ಅವಲೋಕಿಸಿದೆ. ಆದಿಮಾನವನ ಬದುಕು ಮತ್ತು ಚಿತ್ರಕಲೆಯ ವೈಧಾನಿಕತೆಯನ್ನು ವಿವರಿಸಲು ಪ್ರಯತ್ನಿಸಿದೆ. ಜಾನಪದರ ಜನಪದ ಕಲೆಯೊಂದನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನವು ಆದಿಮಾನವನ ಚಿತ್ರಕಲೆ, ಜಾನಪದರ ಚಿತ್ರಕಲೆ ಮತ್ತು ಬುಡಕಟ್ಟು ಚಿತ್ರಕಲೆಯನ್ನು ತನ್ನದೇ ಆದ ತಾತ್ವಿಕ ಚೌಕಟ್ಟಿಗೆ ಒಳಪಡಿಸಿ ಹಲವು ಫಲಿತಗಳನ್ನು ಕಂಡುಕೊಂಡಿದೆ.

## ೭.೨ ಫಲಿತಗಳು

೧. ಆದಿಮಾನವನ ಸಂಸ್ಕೃತಿ ಮತ್ತು ನಾಗರಿಕತೆಯನ್ನು ನಿರೂಪಿಸುವ ದಾಖಲೆಗಳೆಂದರೆ ಗವಿಚಿತ್ರಗಳು ಮತ್ತು ಗೀರು ಚಿತ್ರಗಳು. ಈ ಚಿತ್ರಗಳಲ್ಲಿ ಆಧುನಿಕತೆಯ ನಾಜೂಕಿಲ್ಲದಿದ್ದರೂ ಅವನಿಗೆ ತನ್ನ ಚಿತ್ರಗಳ ರಚನೆಗೆ ಬೇಕಾದ ತಾಂತ್ರಿಕತೆಯ ಮೊದಲ ಬುದ್ಧಿವಂತನೆಂದರೆ ತಪ್ಪಾಗುವುದಿಲ್ಲ. ಅವನ ಚಿತ್ರಕಲೆಯನ್ನು ಇಲ್ಲಿ ಸೌಂದರ್ಯ ಪ್ರಜ್ಞೆಯ ಚೌಕಟ್ಟಿನಲ್ಲಿ ನೋಡುವ ಅಗತ್ಯವಿಲ್ಲ, ಆದರೂ ಅವನು ಈ ಪ್ರಕೃತಿಯನ್ನು ಒಳಗಣ್ಣಿನಿಂದ ನೋಡಿದ ಮೊದಲ ಮಾನವನೆಂಬುದನ್ನು ಅವನ ಬಂಡೆಚಿತ್ರಗಳನ್ನು ವಿಶ್ಲೇಷಿಸಿದ ಮೇಲೆ ಈ ಅಧ್ಯಯನವು ಅಭಿಪ್ರಾಯಕ್ಕೆ ಬರುತ್ತದೆ.

೨. ಆದಿಮಾನವನು ತನ್ನ ಆರಂಭಿಕ ಹಂತದ ಚಿತ್ರಗಳನ್ನು ಗಂಭೀರವಾಗಿ ಪರಿಗಣಿಸಿ ಬರೆದಂತೆ ಕಂಡುಬರುವುದಿಲ್ಲ. ಆದರೆ ಆತನ ಕಲೆಗೆ ಒಂದು ಇತಿಹಾಸವಿದೆ ಎಂಬುವುದನ್ನು ವಿವಿಧ ವಿದ್ವಾಂಸರ ಹೇಳಿಕೆಗಳಿಂದ ಇಲ್ಲಿ ಕಂಡುಕೊಳ್ಳಲಾಯಿತು.

ಅವರ ಹೇಳಿಕೆಯ ಹಿನ್ನೆಲೆಯಲ್ಲಿ ಗಮನಿಸಿದಾಗ ಅವನಿಗೆ ಎರಡು ಕಾರಣಕ್ಕೆ ಚಿತ್ರಕಲೆಯನ್ನು ರಚಿಸಿರಬಹುದು. ಒಂದು, ದೈವೀಕರಣ ನೆಲೆ, ಎರಡು, ಸಾಂಸ್ಕೃತಿಕ ನೆಲೆ. ಈ ಹಿನ್ನೆಲೆಗಳಿಂದ ಅವನು ಚಿತ್ರಕಲಾ ಪರಂಪರೆಯನ್ನು ಬೆಳೆಸಿರಬಹುದೆಂದು ಈ ಅಧ್ಯಯನವು ಕಂಡುಕೊಳ್ಳಲು ಪ್ರಯತ್ನಿಸಿದೆ.

೩. ಜಾನಪದರ 'ಬೆಳದಿಂಗಳ ಹಬ್ಬ' ದ ಚಿತ್ರಕಲೆಯು ಉತ್ತರ ಕರ್ನಾಟಕದಲ್ಲಿ ಪ್ರಸಿದ್ಧವಾದುದು. ಈ ಹಬ್ಬದಲ್ಲಿ ಚಿತ್ರವನ್ನು ಬಿಡಿಸಿ ಪೂಜಿಸುವ ಸಂಸ್ಕೃತಿಯೊಂದು ಇದೆ. (ಈ ಅಧ್ಯಯನದಲ್ಲಿ ಬರುವ) ಭಿನ್ನ ಭಿನ್ನವಾದ ನಂಬಿಕೆ, ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಚಿತ್ರಕಲೆಯ ಮುಖಾಂತರ ಜನಪದರು ಧಾರ್ಮಿಕ ಆಚರಣೆಗಳು ಮಾಡುತ್ತಾರೆಂಬುವುದನ್ನು ಈ ಅಧ್ಯಯನವು ಕಂಡುಕೊಂಡಿದೆ.

೪. ಈ ಅಧ್ಯಯನದಲ್ಲಿ ಆದಿಮಾನವನ ಚಿತ್ರಕಲೆ, ಜಾನಪದರ ಚಿತ್ರಕಲೆ ಮತ್ತು ಬುಡಕಟ್ಟು ಚಿತ್ರಕಲೆ (ಪಿಥೋರಾ) ಕಂಡುಬರುತ್ತಿವೆ. ಈ ಮೂರು ಚಿತ್ರಕಲೆಗಳು ಧಾರ್ಮಿಕ ಮತ್ತು ಸಂಪ್ರದಾಯಬದ್ಧವಾದ ಆಚರಣೆಗಳ ತಳಹದಿಯ ಮೇಲೆಯೇ ಮೊದಲು ಪ್ರಾರಂಭಗೊಳ್ಳುವುದು ಎಂಬುವುದನ್ನು ಅಧ್ಯಯನವು ಗಮನಿಸಿದೆ.

೫. ಪಿಥೋರಾ ಚಿತ್ರಕಲೆಯು ಸಂಸ್ಕೃತಿಯ ನೆಲೆಗಟ್ಟಿನ ಮೇಲೆ ಬಿಲ್‌ರ ನೆಲಮೂಲ ಆಚರಣೆಯಾಗಿದೆ. ಈ ನೆಲಮೂಲ ಆಚರಣೆಯು ಸಾಂಪ್ರದಾಯಿಕ ವಿಧಿ–ವಿಧಾನಗಳನ್ನು ಕಡ್ಡಾಯವಾಗಿ ಅನುಸರಿಸಿಯೇ ರಚಿಸಬೇಕೆಂಬ ನಿಯಮವಿದೆ. ಆ ನಿಯಮಗಳನ್ನು ಉಲ್ಲಂಘನೆ ಮಾಡಿ ಬಿಲ್‌ರು ಪಿಥೋರಾ ಪೂಜೆಯನ್ನು ನೆರವೇರಿಸುವುದಿಲ್ಲವೆಂಬುದನ್ನು ಕಂಡುಕೊಳ್ಳಲಾಯಿತು. ಬಿಲ್‌ರ ಸಾಂಸ್ಕೃತಿಕ ಜಗತ್ತು ಪಿಥೋರಾ ಕಲೆಯ ಸಾಂಪ್ರದಾಯಿಕತೆಯಿಂದಾಗಿಯೇ ಅದು ಶ್ರೀಮಂತವಾಗಿದೆಂಬುದು ತಿಳಿದು ಬಂದಿತು.

೬. 'ಬಿಲ್', 'ರಾಥವಾ' ಮತ್ತು 'ಕಲೌತಾ' ಜನರ ಬುಡಕಟ್ಟು ಸಮುದಾಯಗಳು ಪಿಥೋರಾ ಪೂಜೆಯನ್ನು ಮಾಡುತ್ತವೆ. ಝುಮರಾಲ್ ಮತ್ತು ಹರಿಜನ ಜಾತಿಗಳಲ್ಲೂ ಪಿಥೋರಾ ಪೂಜೆಯಿದೆ. ಪಿಥೋರಾ ಪೂಜೆಯನ್ನು ಬಡವಾನ ಸಹಾಯದಿಂದ ಯಾರಾದರೂ ಆ ಭಾಗದಲ್ಲಿ ಮಾಡಬಹುದೆಂಬುವುದು ಗಮನಾರ್ಹವಾದ ವಿಚಾರ. ಪಿಥೋರಾ ಈ ವಿಚಾರದಲ್ಲಿ ಜಾತ್ಯಾತೀತವೆಂಬುವುದನ್ನು ಅರಿಯಬಹುದು. ಬಿಲ್ ಮತ್ತು

ರಾಥವಾದಲ್ಲಿ ಪಿಥೋರಾವನ್ನು ಪುರುಷನೇ ಚಿತ್ರ ಬಿಡಿಸಬೇಕು. 'ಕಲೌತಾ' ಜನರಲ್ಲಿ ಮಹಿಳೆಯರು ಬಿಡಿಸಬಹುದು. ಪುಸ್ತಕದಲ್ಲಿ ಪಿಥೋರಾ ಪೂಜೆಯ ಸಂದರ್ಭವನ್ನು ಬಿಟ್ಟು, ಬೇರೆ ಸಂದರ್ಭಗಳಲ್ಲಿ ಮಹಿಳೆಯರು ಪಿಥೋರಾ ಚಿತ್ರಗಳನ್ನು ಬರೆಯುತ್ತಾರೆಂಬುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಯಿತು. ಕೆಲವು ಬುಡಕಟ್ಟು ಮಹಿಳೆಯರನ್ನು ಮಡಿ ಮೈಲಿಗೆಯ ಹಿನ್ನೆಲೆಯಲ್ಲಿ ಆ ಚಿತ್ರ ಬಿಡಿಸುವ ಸಂದರ್ಭದಲ್ಲಿ ದೂರವಿಟ್ಟಿರುತ್ತಾರೆ.

೭. ಜಾನಪದ ಆಚರಣೆ ಮತ್ತು ಬುಡಕಟ್ಟು ಆಚರಣೆಗಳು ತಮ್ಮ ಕಾಲ, ದೇಶ ಮತ್ತು ಸನ್ನಿವೇಶದ ಸಂದರ್ಭದಲ್ಲಿ ಹುಟ್ಟಿದರೂ ಅವುಗಳ ಹಿಂದೆ ಸಾಂಪ್ರದಾಯಿಕ ನಂಬಿಕೆಗಳು ಕೆಲಸ ಮಾಡುತ್ತವೆ. ಇಂತಹ ನಂಬಿಕೆಯಿಂದಲೇ ಅನೇಕ ಆಚರಣೆಗಳು ನಮ್ಮ ದೇಶದಲ್ಲಿ ಜೀವಂತವಾಗಿವೆ. ನಂಬಿಕೆಯೊಂದು ಎರಡು ಪರಿಣಾಮಗಳನ್ನುಂಟು ಮಾಡಬಲ್ಲದು. ಒಂದು ಮನುಷ್ಯನಿಗೆ ಹಿಂಸೆ ಮತ್ತು ಬಲಿಯನ್ನು ತೆಗೆದುಕೊಳ್ಳಬಹುದು. ಎರಡನೆಯದು ನಂಬಿಕೆ ಇದಕ್ಕೆ ವ್ಯತಿರಿಕ್ತವಾಗಿ ಕಲೆಯ ಸಾಂಸ್ಕೃತಿಕ ಅನನ್ಯತೆಯನ್ನು ಸೃಷ್ಟಿಸಬಹುದು. ಬಿಲ್‌ರು ಈ ಎರಡನೆಯ ಪ್ರಕಾರದ ಮೂಲಕ ಕಲೆಯನ್ನು ಶ್ರೀಮಂತಗೊಳಿಸಿದ್ದಾರೆಂದು ಈ ಅಧ್ಯಯನದಿಂದ ಕಂಡುಕೊಳ್ಳಲಾಯಿತು. ಅಂದರೆ ಕ್ರೌರ್ಯ ಮತ್ತು ಕಲೆ ಎರಡೂ ಬುಡಕಟ್ಟು ಸಂಪ್ರದಾಯದಲ್ಲಿ ಸಾಮಾನ್ಯವಾಗಿದೆ. ಅವರು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ತಮ್ಮ ಸಾಂಪ್ರದಾಯಿಕ ನಂಬಿಕೆಯ ಮೂಲಕ ಪಿಥೋರಾವನ್ನು ಸಮೃದ್ಧಿಯ ಸಂಕೇತವಾಗಿ ನಡೆಸಿಕೊಂಡು ಬರುತ್ತಾರೆಂದು ಕಂಡುಕೊಳ್ಳಲಾಯಿತು.

೮. ಪಿಥೋರಾ ಚಿತ್ರ ಪರಿಕಲ್ಪನೆಯು ಬಿಲ್ ಮತ್ತು ರಾಥವಾ ಒಂದು ಧಾರ್ಮಿಕ ಆಚರಣೆಯ ಭಾಗವಾಗಿದೆ. ಬಿಲ್ ಮತ್ತು ರಾಥವಾ ಬದುಕು ಪಿಥೋರಾದ ಜೊತೆ ಜೊತೆಗೆ ನಡೆಯುತ್ತದೆ. ಪಿಥೋರಾ ಚಿತ್ರಕಲೆಯು ಅವರ ಸಾಂಪ್ರದಾಯಿಕ ನಂಬಿಕೆಯ ನೆಲೆಯ ಮೇಲೆ ಜರುಗುತ್ತದೆ. ಪಿಥೋರಾವನ್ನು ಬಿಲ್‌ರು ವಿವಿಧ ಲೋಕ ಜಗತ್ತಿನೊಂದಿಗೆ ಜರುಗುವ ಘಟನೆಗಳನ್ನು ಆಧರಿಸಿ ರಚಿಸುವುದು ಇದೆ. ಅವರು ಅದನ್ನು ತಮ್ಮ ಜೀವನದ ಸಮೃದ್ಧಿಗಾಗಿಯೂ ಆಚರಿಸುವುದಿದೆ. ಸಾಂಪ್ರದಾಯಿಕ ಬಿಲ್ ಮತ್ತು ರಾಥವ ಜನರು ಹರಕೆ, ಮಳೆ, ಮದುವೆ, ಮನೆಯ ಸಮೃದ್ಧಿ ಮತ್ತು ರಕ್ಷಣೆಗಾಗಿ ಆಚರಿಸುತ್ತಾರೆಂಬುವುದು ಈ ಅಧ್ಯಯನದಿಂದ ತಿಳಿಯಲಾಯಿತು. ಈ ಹಬ್ಬವನ್ನು ಊರಿನವರೆಲ್ಲರೂ

ಏಕಕಾಲಕ್ಕೆ ಆಚರಿಸಬೇಕೆಂಬ ನಿಯಮವನ್ನು ಮೀರಿದ್ದಾಗಿದೆ. ಇದು ಆರ್ಥಿಕ ತಳಹದಿಯ ಮೇಲೆ ಜರುಗುವ ಹಬ್ಬ. ಈ ಬುಡಕಟ್ಟುಗಳ ಜನರು ಆರ್ಥಿಕವಾಗಿ ಸಮರ್ಥರಾದಾಗ ಮಾತ್ರ ವೈಭವದಿಂದ ಆಚರಿಸುತ್ತಾರೆ ಎನ್ನುವುದು ಅವರ ಪ್ರದೇಶಗಳನ್ನು ಸಂದರ್ಶಿಸಿದಾಗ ತಿಳಿದುಬಂದಿತು. ಅದನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಯಿತು.

೯. ಬಿಲ್ ಮತ್ತು ರಾಥವಾ ಬುಡಕಟ್ಟುಗಳ ಸಾಮಾಜಿಕ ಜೀವನಕ್ಕೂ ಮತ್ತು ಪಿಥೋರಾ ಚಿತ್ರಕಲೆಗೂ ಒಂದು ಆಂತರಿಕ ಸಂಬಂಧವಿದೆ. ಅವರ ಸಾಮಾಜಿಕ ಜೀವನದಲ್ಲಿ ಸಂದುಹೋದ ಘಟನೆಗಳು, ವಸ್ತುಗಳು ಆ ಪಿಥೋರಾದಲ್ಲಿ ನೆಲೆ ಪಡೆಯುತ್ತವೆಂಬುವುದು ಈ ಅಧ್ಯಯನದಿಂದ ಕಂಡುಬಂದಿತು.

೧೦. ಬಿಲ್‌ರಿಗೆ ಪುರಾಣದ ಹಿನ್ನೆಲೆಯಿದೆ. ಹಾಗಾಗಿಯೇ ಪಿಥೋರಾದಲ್ಲಿ ಬರುವ ವ್ಯಕ್ತಿಗಳು ಈ ಹಿನ್ನೆಲೆಯಿಂದಲೇ ಪಿಥೋರಾ ಚಿತ್ರದಲ್ಲಿ ಪ್ರವೇಶ ಪಡೆಯುತ್ತಾರೆ. ಆ ವ್ಯಕ್ತಿಗಳನ್ನು ಕುದುರೆಗಳ ಪ್ರತಿಮಾತ್ಮಕ ಸಂಕೇತದಿಂದ ಚಿತ್ರಕಾರರು ತೋರಿಸುತ್ತಾರೆ. ಈ ಅಧ್ಯಯನದಲ್ಲಿ ಬಿಲ್‌ರ ಐತಿಹಾಸಿಕ ಮತ್ತು ಪೌರಾಣಿಕ ಹಿನ್ನೆಲೆಯಲ್ಲಿ ಪಿಥೋರಾವನ್ನು ಗ್ರಹಿಸಲಾಗಿದೆ.

೧೧. ಪಿಥೋರಾ ಚಿತ್ರಕಲೆಗೆ ಬೇಕಾದ ಸಲಕರಣೆಗಳು ಮತ್ತು ಬಣ್ಣಗಳನ್ನು ಚಿತ್ರಕಾರರು ಮತ್ತು ಪೂಜೆ ನಡೆಸುವ ಮನೆಯ ಯಜಮಾನ ಮತ್ತು ಸದಸ್ಯರು ತಯಾರಿಸಿಕೊಳ್ಳುತ್ತಾರೆ. ನೈಸರ್ಗಿಕವಾಗಿ ಸಿಗುವ ಸಂಪನ್ಮೂಲಗಳನ್ನು ಬಳಸಿಕೊಂಡು ಪಿಥೋರಾವನ್ನು ರಚಿಸುತ್ತಾರೆಂಬುವುದನ್ನು ಇಲ್ಲಿ ಕಂಡುಕೊಳ್ಳಲಾಯಿತು.

೧೨. ಪಿಥೋರಾದ ಪ್ರಮುಖ ಫಲಿತ ಅದು ರೂಪಾಂತರಕ್ಕೆ ತನ್ನನ್ನು ಒಗ್ಗಿಸಿಕೊಂಡಿರುವನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಯಿತು. ಗಂಗೂಬಾಯಿ, ಬೂರಿಬಾಯಿ, ಶೇರ್ ಸಿಂಗ್ ಮತ್ತು ಸುಭಾಷ್ ಬಿಲ್ ಇವರೆಲ್ಲರ ಪರಿಶ್ರಮದಿಂದಾಗಿ ಪಿಥೋರಾ ಕಲೆಯು ರೂಪಾಂತರವಾಗಿದೆ. ಅದು ಇಂದು ಅಂತರಾಷ್ಟ್ರೀಯ ಮಟ್ಟದಲ್ಲಿ ಬೆಳವಣಿಗೆಯನ್ನು ಹೊಂದಲು ಸಾಧ್ಯವಾಗಿರುವುದು ಇವರ ಶ್ರಮ ಮತ್ತು ಪಾಲ್ಗೊಳ್ಳುವಿಕೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. 'ವಿಸಿಟ್ ದ ಬಿಲ್ ಕಾರ್ನಿವಲ್', 'ಎ ಬಿಲ್ ಸ್ಟೋರಿ' ಮತ್ತು 'ಟ್ರೀ ಮ್ಯಾಟರ್ಸ್' ಚಿತ್ರಕೃತಿಗಳು ಈ ರೂಪಾಂತರದ ಫಲವಾಗಿವೆ.

## ಗ್ರಂಥಋಣ


೧. ಆನಂದ ಕೆ. ಪೂಜಾರ, ಬೆಳದಿಂಗಳ ಚಿತ್ರಕಲೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೨೦೦೪

೨ ಆರ್ಯ ಆಚಾರ್ಯ, ಚಿತ್ರಸೂತ್ರ (ಗದ್ಯಾನುವಾದ) ಮೂಲ : ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ, ಸಂವಾದ, ಕಲಾಮಂಡಳ, ಧಾರವಾಡ, ೨೦೧೧

೩ ಉಪಾಧ್ಯ ಡಿ.ಎ., ಪಾಶ್ಚಾತ್ಯ ದೃಶ್ಯಕಲಾ ಮೀಮಾಂಸೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, ೨೦೧೧

೪ ಉಪಾಧ್ಯ. ಡಿ.ಎ., ಪಾಶ್ಚಾತ್ಯ ದೃಶ್ಯಕಲೆಗಳು, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, ೨೦೧೧

೫. ಉಪಾಧ್ಯಾಯ ಮೂಡುಬೆಳ್ಳಿ, ನಾಗಾರಾಧನೆ ಮತ್ತು ಚಿತ್ರಕಲೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೨೦೦೪

೬ ಕಾಶಿನಾಥ ಅಂಬಲಗೆ., (ಅನು), ಮಮತಾ ಚತುರ್ವೆದಿ(ಮೂಲ ಹಿಂದಿ), ಸೌಂದರ್ಯಶಾಸ್ತ್ರ, ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು.

೭. ಕೃಷ್ಣಯ್ಯ ಎಂ. ಎಚ್., ಕಲೆ ಮತ್ತು ರಸಾಸ್ವಾದನೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೨೦೦೮ (೧೯೮೯)

೮. ಕೃಷ್ಣಯ್ಯ ಎಂ.ಎಚ್., ಸಾಹಿತ್ಯ ಕಲೆ, ಅಂಕಿತ ಪುಸ್ತಕ, ಬೆಂಗಳೂರು, ೨೦೧೫

೯. ಕೃಷ್ಣ ಶೆಟ್ಟಿ ಚಿ.ಸು., ದೃಶ್ಯಕಲೆ ಎಂದರೇನು?, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೫

೧೦. ಗೋಕಾಕ ವಿ.ಕೃ., ಕಲಾ ಸಿದ್ಧಾಂತ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೦೯ (೨೦೦೪)

೧೧ ಗೋವಿಂದರಾಜು ಟಿ., ಚಿತ್ರಾರದ ಗೊಂಬೆ ಚಿತ್ರಕಲೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೨೦೦೪

೧೨. ಚಂದ್ರಕಾಂತ ಕುಸನೂರ, ಕಲೆ ಮತ್ತು ಕಲಾನುಭವ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೨೦೦೮

೧೩. ಚಕ್ಕೆರೆ ಶಿವಶಂಕರ್(ಸಂ), ಜೀಶಂಪ ಜಾನಪದ ಬರಹಗಳು, ಸಾಗರ ಪ್ರಕಾಶನ, ಬೆಂಗಳೂರು, ೨೦೧೨

೧೪. ತಿಪ್ಪೇರುದ್ರಸ್ವಾಮಿ ಎಚ್., ತೌಲನಿಕ ಕಾವ್ಯ ಮೀಮಾಂಸೆ, ಡಿ. ವಿ. ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೧೩ ( ೧೯೮೫)

೪೫. ತಿಪ್ಪೇಸ್ವಾಮಿ ಪಿ.ಆರ್. (ಸಂ) ಕಾಳೆ ವಿ.ಟಿ., ಚಿತ್ರಕಲಾ ದರ್ಪಣ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪

೧೬. ತಿಪ್ಪೇಸ್ವಾಮಿ ಪಿ.ಆರ್., ಮರಿಶಮಾಚಾರ್ ಎನ್. ಮತ್ತು ಇತರರು(ಸಂ), ಕಲಾಕೋಶ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪

೧೭. ತಿಪ್ಪೇಸ್ವಾಮಿ ಪಿ.ಆರ್., ಮರಿಶಮಾಚಾರ್ ಎನ್. ಮತ್ತು ಇತರರು (ಸಂ), ಚಿತ್ರಕಲಾ ಪ್ರಪಂಚ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೩

೧೮. ತಿಪ್ಪೇಸ್ವಾಮಿ ಪಿ.ಆರ್.(ಅನು), ಶಿವರಾಮಮೂರ್ತಿ(ಮೂಲ), ಭಾರತೀಯ ಚಿತ್ರಕಲೆ, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ೧೯೧೯.

೧೯. ತಿಪ್ಪೇಸ್ವಾಮಿ ಪಿ.ಆರ್.(ಸಂ), ಸುಂದರ ಅ.(ಲೇಖಕರು), ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪

೨೦. ನರಸಿಂಹನ್ ಅ.ಲ., 'ಕರ್ನಾಟಕದ ಭಿತ್ತಿಚಿತ್ರ ಪರಂಪರೆ' ಕರ್ನಾಟಕ ಲಲಿತಕಲಾ ಅಕ್ಯಾಡೆಮಿ, ಬೆಂಗಳೂರು – ೧೯೯೮

೨೧. ನರಸಿಂಹಾಚಾರ್ ಡಿ.ಎಲ್., ವಡ್ಡಾರಾಧನೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೧೪

೨೨. ಪಾಟೀಲ ಎಸ್.ಸಿ., ಕರ್ನಾಟಕದ ಜನಪದ ಚಿತ್ರಕಲೆ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೩

೨೩. ಪಾಟೀಲ ಎಸ್.ಸಿ., ವರ್ಣಸಂಚಯ, ವಿಜಯ ಚಿತ್ರಕಲಾ ಮಹಾವಿದ್ಯಾಲಯ, ಇಳಕಲ್ಲ, ೨೦೦೧

೨೪ ಬಸವರಾಜಪ್ಪ ಎಚ್.ಈ., ಬಳ್ಳಾರಿ ಜಿಲ್ಲೆಯ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೨೫. ಬಾಯಿರಿ. ಬಿ.ಪಿ., ಜಾಗತಿಕ ಚಿತ್ರಕಲೆ, ಪ್ರತಿಭಾ ಗ್ರಂಥಮಾಲೆ, ಧಾರವಾಡ, ೧೯೯೫ (೧೯೮೫)

೨೬. ಮಮತಾ ಚತುರ್ವೇದಿ, (ಮೂ. ಹಿಂದಿ) ಸೌಂದರ್ಯ ಶಾಸ್ತ್ರ–ಕಲಾತ್ಮಕ ಚಿಂತನೆ, ಕಾಶೀನಾಥ ಅಂಬಲಿಗೆ (ಕನ್ನಡಕ್ಕೆ), ಕರ್ನಾಟಕ ಲಲಿತಕಲಾ ಅಕಾಡೆಮಿ. ಬೆಂಗಳೂರು

೨೭. ಮರಿಶಾಮಾಚಾರ್ ಎನ್., ಭಾರತೀಯ ಕಲೆ, ಸಿ.ಎಂ.ಎನ್. ಪ್ರಕಾಶನ, ಬೆಂಗಳೂರು, ೨೦೦೧

೨೮ ಮರಿಶಾಮಾಚಾರ್ ಎನ್., ಭಾರತೀಯ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, ೨೦೦೦

೨೯. ಮಾಲಿನಿ ಮಲ್ಯ ಬಿ.(ಸಂ), ಶಿವರಾಮ ಕಾರಂತರ ಸಾಹಿತ್ಯ ಶ್ರೇಣಿ, ಸಂಪುಟ – ೩೦, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೭

೩೦. ಮೂಲಗಿ ಆರ್.ಬಿ., ಧಾರವಾಡ ಜಿಲ್ಲೆಯ ಜನಪದ ಸಂಪ್ರದಾಯಗಳು, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೧೦

೩೧. ಮೋಹನರಾವ ಬಿ. ಪಂಚಾಳ, ದೃಶ್ಯಾನುಭವ, ಅನ್ನಪೂರ್ಣ ಪ್ರಕಾಶನ, ಬೀದರ್, ೨೦೧೦

೩೨. ರಮೇಶ್ ಸ.ಚಿ., ಕರ್ನಾಟಕದ ಜನಪದ ಆಚರಣೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೩೩. ಲಕ್ಕಪ್ಪಗೌಡ ಎಚ್.ಜೆ. ಮತ್ತು ಬಸವರಾ ನೆಲ್ಲಿಸರ(ಸಂ), ಜಾನಪದ ಮತ್ತು ಪೂರಕ ಕ್ಷೇತ್ರಗಳು, ಕನ್ನಡ ಅಧ್ಯಯನ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ, ಬಿ. ಆರ್. ಪ್ರಾಜೆಕ್ಟ,

೩೪. ವಾಮನ ಬೇಂದ್ರೆ(ಸಂ), ಸಾಹಿತ್ಯದ ವಿರಾಟ್ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೪

೩೫. ವೇಣುಗೋಪಾಲ ಟಿ.ಎಸ್. ಮತ್ತು ಶೈಲಜಾ(ಅನು), ಕೋಸಂಬಿ ಡಿ.ಡಿ.(ಮೂಲ), ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ, ಚಿಂತನ ಪುಸ್ತಕ, ಬೆಂಗಳೂರು, ೨೦೧೧

೩೬. ಶರಣ ಬಸಪ್ಪಾ ಕೋಲ್ಕಾರ, ಶಿಲಾಯುಗದ ಗವಿಚಿತ್ರಗಳು, ಬಸವಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು, ಗುಲ್ಬರ್ಗ, ೨೦೧೦

೩೭ ಶಿವರಾಮ ಕಾರಂತ, ಕಲಾ ಪ್ರಪಂಚ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

೩೮. ಶಿವರುದ್ರಪ್ಪ ಜಿ.ಎಸ್, ಕಾವ್ಯಾರ್ಥ ಚಿಂತನ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೫ (೧೯೮೩)

೩೯. ಶಿವರುದ್ರಪ್ಪ ಜಿ.ಎಸ್., ಸೌಂದರ್ಯ ಸಮೀಕ್ಷೆ, ಕಾಮಧೇನು ಪುಸ್ತಕ ಭವನ, ಬೆಂಗಳೂರು, ೨೦೧೧ (೧೯೬೫)

೪೦. ಶ್ರೀಕಂಠಶಾಸ್ತ್ರೀ ಎಸ್., ಭಾರತೀಯ ಸಂಸ್ಕೃತಿ, ಕಾಮಧೇನು ಪುಸ್ತಕ ಭವನ, ಬೆಂಗಳೂರು, ೨೦೧೫

೪೧. ಸುಬ್ರಹ್ಮಣ್ಯಂ ಕೆ.ವಿ., ಶಿಲಾಶ್ರಯ ಕಲೆಯ ದೃಶ್ಯಧ್ಯಾನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

೪೨ ಹಿರೇಮಠ ಬಿ.ಕೆ., ಕನ್ನಡ ಹಸ್ತ ಪ್ರತಿಗಳು – ಒಂದು ಅಧ್ಯಯನ, ವೀರಶೈವ ಅಧ್ಯಯನ ವೇದಿಕೆ ಜಂಬಗಿ, ೧೯೯೨

**ಇಂಗ್ಲೀಷ್ ಕೃತಿಗಳು**

43. Anita Srivastava Majhi, Tribal Culture, Continuity and Change, Mittal Publications, New Delhi, 2010

44. Bachchan Kumar, The Bhils : An Ethno-Historic Analysis, Sharada Publishing House, Delhi, 1997

45. Bosanquet, History of the Aesthetics. P. No. 179

46. Callingwood, Principles of Art, Oxford Clarendon Press, 1938

47. Gangu Bai (Illustratior) Gita Wold and Geeta V. (Text), Tree, Tara Publishing, UK. www.tarabooks.com/uk

48. Jyotindra Jain, Painted Myths of Creation - Art and Ritual of an Indian Tribe, Lalit kala Akademi, New Delhi, 1984

49. Knight w., Philosophy of the Beautiful. Vol. 1. P. No. 60

50. Naik, T. B., the Bhills - A Study, Bharatiya Adimjati Sevak Sangh, Delhi

51. Richards I. A., Principles of Literary Criticism, Routledge and Kegan Paul, London. 1963

52. Varma S. C., The Bhil Kills, Kunj Publishing House, Delhi, 1978

**Website References :**


http://bhilart.com/paintings/

http://indianexpress.com/article/lifestyle/pithora-art-depicts-different-hues-of-tribal-life/

http://gaatha.com/pithora-paintings/

https://en.wikipedia.org/wiki/Pithora_(painting)

http://openart.in/2016/11/pithora-paintings-central-gujarat/

http://www.indianfolkarts.com/Admin/Transactions/FormsOfArt/Pages/Forms-Of-Art20.aspx

https://www.sahapedia.org/pithora-of-the-rathvas

http://www.discoveredindia.com/gujarat/culture-in-gujarat/paintings-in-gujarat/pithora-paintings.htm

https://www.sahapedia.org/tags/baba-pithora

http://wordkraft.in/pithora-paintings-art-and-ritual-performance-of-rathwa-tribe-of-gujarat-2/

http://www.ethnicpaintings.com/indian_painting_styles/pithora-paintings.html

https://blog.saffronart.com/2012/12/14/bhil-art-tribal-paintings-from-india/

https://in.pinterest.com/pin/274156696045433410/

http://ignca.nic.in/tribal_art_intro_bhills_mp.htm

https://trti.gujarat.gov.in/rathwa

